ಮುಂಬಯಿ ಸರಕಾರದ
ಕನ್ನಡ ಸಂಶೋಧನ ಸಮಿತಿಯ ಉಪನ್ಯಾಸಮಾಲೆ-೧

# ಮೂರು ಉಪನ್ಯಾಸಗಳು

ಶ್ರೀ ಗೋವಿಂದ ಪೈ ( ಮಂಜೇಶ್ವರ )
ಇವರಿಂದ

ಧಾರವಾಡ
ಕನ್ನಡ ರಿಸರ್ಚ ಆಫೀಸು, ಧಾರವಾಡ
೧೯೪೦

[ ಬೆಲೆ: ೧ ರೂ.



**ಭಾರತವನ್ನು ಬಿಟ್ಟು ಕರ್ಣಾಟಕವಿಲ್ಲ**

ಎಂಬ

ಅದ್ವಿತೀಯವಾದ ಸತ್ಯವನ್ನು ಮರೆಯದೆ

**ಭಾರತಾಂಬೆಯ**

ಜಗನ್ಮಾನ್ಯತೆಗಾಗಿ ದುಡಿವ

**ಕರ್ಣಾಟಕದ**

ನನ್ನ

**ಭ್ರಾತೃ ಭಗಿನಿಯರಿಗೆ**



**ಭಾರತದ ಶುಭಚರಿತ ಧರೆಗೆ ಧರ್ಮದ ಕರೆತ,**

.... .... .... .... .... .... ....

**ಭಾರತಾಂಬೆಯ ಭಕ್ತಿ ನಮಗಾತ್ಮಶಕ್ತಿ.**

# ಮುನ್ನುಡಿ



ಮಾನ್ಯ ಮುಂಬಯಿ ಸರಕಾರದವರು ಕಳೆದ ವರ್ಷ ಧಾರವಾಡದಲ್ಲಿ **'ಕನ್ನಡ ಸಂಶೋಧನ ಸಂಸ್ಥೆ'**ಯೊಂದನ್ನು ನಿರ್ಮಾಣ ಮಾಡಿ ಸಂಶೋಧನ ಕಾರ್ಯವು ಡಾಯರೆಕ್ಟರ್ ಆಫ್ ಕನ್ನಡ ರಿಸರ್ಚ ಇವರ ನೇತೃತ್ವದಲ್ಲಿ ನಡೆಯ ಬೇಕೆಂದೂ ಅವರಿಗೂ ಸರಕಾರಕ್ಕೂ ಮೇಲಿಂದಮೇಲೆ ತಕ್ಕ ಸೌಕರ್ಯ ಸಲಹೆ ಗಳನ್ನು ಕೊಡುವುದಕ್ಕಾಗಿ ಎರಡು ವರ್ಷಗಳಿಗೊಮ್ಮೆ **'ಕನ್ನಡ ಸಂಶೋಧನ ಸಮಿತಿ'** ಎಂಬ ಸಲಹೆ ಮಂಡಳವು ನೇಮಿಸಲ್ಪಡಬೇಕೆಂದೂ ತಮ್ಮ ೧೯೩೯, ಎಪ್ರಿಲ್ ೧೩, ಮೇ ೮ ನೆಯ ತಾರೀಕುಗಳ G. R. No. 6563, E. D. ರ ಗೊತ್ತುವಳಿಗಳಲ್ಲಿ ಪ್ರಸಿದ್ಧಿಸಿದರು. ಆಕ್ಟೋಬರ ೧ನೆಯ ತಾರೀಕಿಗೆ ಡಾಯರೆಕ್ಟರ್ ಜಾಗೆಗೆ ನಾನು ನಿಯಮಿಸಲ್ಪಟ್ಟಮೇಲೆ ಸಂಶೋಧನ ಸಂಸ್ಥೆಯ ಕಾರ್ಯಕಲಾಪ ಗಳ ರೂಪರೇಷೆಯು ನಿಶ್ಚಯಿಸಲ್ಪಟ್ಟಿತು. ಆ ಮೇರೆಗೆ ಕನ್ನಡ ಸಂಶೋಧನ ಸಂಸ್ಥೆಯು ಕರ್ನಾಟಕ ಇತಿಹಾಸ ಹಾಗೂ ಕನ್ನಡ ಭಾಷೆ, ವಾಙ್ಮಯ ಇವುಗಳಲ್ಲಿ ಸಂಶೋಧನ ನಡೆಯಿಸುವುದಕ್ಕೆ ಮೂಲ ಸಾಧನಗಳಾದ ಶಿಲಾಶಾಸನ, ಹಳೆಯ ನಾಣ್ಯ, ಮೂರ್ತಿಗಳು ಇವೇ ಮೊದಲಾದ ಐತಿಹಾಸಿಕ ಸಾಮುಗ್ರಿಗಳನ್ನೂ ಹಳೆಯ ತಾಡವೋಲೆಯ ಗ್ರಂಥಗಳು, ಕೈಬರೆಹದ ಪುಸ್ತಕಗಳು ಇವೇ ಮೊದಲಾದ ವಾಙ್ಮಯ ಸಾಮುಗ್ರಿಗಳನ್ನೂ ಸಂಗ್ರಹಿಸಿ ಕ್ರಮದಿಂದ ಪ್ರಸಿದ್ಧಿಸುವ ಕಾರ್ಯವನ್ನು ಕೈಕೊಂಡಿದೆ.

ಕರ್ನಾಟಕದ ಉಜ್ವಲವಾದ ಇತಿಹಾಸವು ತಿಳಿಯಬೇಕಾದರೆ ಇವೆಲ್ಲ ಸಾಮುಗ್ರಿಗಳ ಸಂಗ್ರಹ, ಅಧ್ಯಯನ ಮತ್ತು ಪ್ರಕಟನೆಗಳು ಅವಶ್ಯವಾಗಿ ವ್ಯವಸ್ಥೆ ಯಿಂದ ನಡೆಯಬೇಕು. ಕರ್ನಾಟಕದ ಹಳ್ಳಿಗಳಲ್ಲಿ ಶಾಸನಗಳೂ ಹಳೆಯ ದೇವಾ ಲಯಗಳೂ ಶಿಲ್ಪಗಳೂ ದೃಷ್ಟಿ ಹಾಕಿದತ್ತೆಲ್ಲ ಹೇರಳವಾಗಿ ಸಿಕ್ಕುತ್ತವೆ. ಕೆಲವೆಡೆ ಗಳಲ್ಲಿ ಅವು ಕಾಲಮಹಿಮೆಯಿಂದಲೂ ಅಜ್ಞಜನರ ತಿಳುವಳಿಕೆಯ ಅಭಾವದ ಮೂಲಕವಾಗಿಯೂ ನಾಶವಾಗುತ್ತ ಬಂದಿವೆ. ತಾಡವೋಲೆಯ ಹೊತ್ತಿಗೆಗಳಂತೂ ವಿಪುಲವಾಗಿ ಹಳ್ಳಿಗರಲ್ಲಿಯೂ ಜೈನ, ಲಿಂಗಾಯತರ ಮಠಗಳಲ್ಲಿಯೂ ದಿಕ್ಕಿಲ್ಲದೆ ಬಿದ್ದಿವೆ. ಅವೆಲ್ಲವುಗಳನ್ನು ಒತ್ತಟ್ಟಿಗೆ ಅಳಿಯದಂತೆ ಕಾದಿಡುವುದು ಸಾಹಿತ್ಯ ರಕ್ಷಣೆಯ ಪ್ರಧಾನಾಂಗವಾಗಿದೆ. ಇವುಗಳ ರಕ್ಷಣೆಯಲ್ಲಿ ಔದಾಸೀನ್ಯ ತಳೆದರೆ

ನಮ್ಮ ಹಳೆಯ ಸಂಸ್ಕೃತಿಯ ಕುರುಹುಗಳೇ ಅಳಿದು ಹೋಗಿ ನಮ್ಮಲ್ಲಿ ಆತ್ಮ ವಿಶ್ವಾಸವನ್ನು ಹುಟ್ಟಿಸುವ ಅಭಿಮಾನದ ಸೊತ್ತು ಇಲ್ಲದಂತಾಗುವುದು. ಈಗ ಮುಂಬಯಿ ಸರಕಾರದವರು ಒದಗಿಸಿಕೊಟ್ಟ ಈ ಅಪೂರ್ವ ಸಂಧಿಯ ಲಾಭವನ್ನು ಪಡೆದು ಪ್ರತಿಯೊಬ್ಬ ಕನ್ನಡಿಗನು ಕನ್ನಡ ಸಂಶೋಧನ ಸಂಸ್ಥೆಗೆ ತನ್ನಲ್ಲಿದ್ದ ಹಳೆಯ ಗ್ರಂಥ, ನಾಣ್ಯ, ತಾಮ್ರಪಟ ಮುಂತಾದುವುಗಳನ್ನು ಕೊಟ್ಟು ನೆರವಾಗ ಬೇಕೆಂದು ನಮ್ಮ ನಮ್ರವಾದ ಬೇಡಿಕೆಯಿದೆ.

ಹೀಗೆ ಮೂಲ ಸಾಧನಗಳ ಸಂಗ್ರಹ ಮತ್ತು ಪ್ರಸಿದ್ಧಿ ಕಾರ್ಯಗಳಲ್ಲದೆ ಆಯಾ ವಿಷಯಗಳಲ್ಲಿಯ ಹೊಸ ಹೊಸ ಸಂಶೋಧನಗಳನ್ನು ಜನಸಾಮಾನ್ಯಕ್ಕೆ ತಿಳಿಯಪಡಿಸುವುದಕ್ಕೆ ಪ್ರತಿ ವರುಷ ಕರ್ನಾಟಕದ ಇತಿಹಾಸ ವಾಙ್ಮಯಗಳ ಮೇಲೆ ಸಂಶೋಧನ ಉಪನ್ಯಾಸ ಮಾಲೆಗಳನ್ನು ಏರ್ಪಡಿಸುವುದು ಈ ಸಂಸ್ಥೆಯ ಕಾರ್ಯಕ್ಷೇತ್ರದ ಒಂದು ಭಾಗವಾಗಿದೆ. ಅದನ್ನನುಸರಿಸಿ ೧೯೩೯ ರಲ್ಲಿ ಸಂಶೋಧನ ಸಮಿತಿಯವರ ಸಲಹೆಯ ಮೇರೆಗೆ ದಕ್ಷಿಣ ಕನ್ನಡ ಜಿಲ್ಹೆಯ ಮಂಜೇಶ್ವರದ ಶ್ರೀಮಾನ್ ಗೋವಿಂದ ಪೈ ಎಂಬ ವಿದ್ವಾಂಸರು ಕನ್ನಡ ಭಾಷೆ ವಾಙ್ಮಯಗಳ ಮೇಲೆ ಉಚಿತವಾದ ಸಂಶೋಧನಾತ್ಮಕ ಉಪನ್ಯಾಸಗಳನ್ನು ಕೊಡಲು ಆಮಂತ್ರಿತ ರಾದರು. ಈ ಮಹನೀಯರು ನಮ್ಮ ಆಮಂತ್ರಣವನ್ನು ಮಾನ್ಯಮಾಡಿ (೧) ರನ್ನನ ಪರಶುರಾಮಚರಿತ, ಚಕ್ರೇಶ್ವರ ಚರಿತಗಳು, ಗದಾಯುದ್ಧದ ರಚನಾಕಾಲ, (೨) ಬಸವೇಶ್ವರನ ಕಾಲನಿರ್ಣಯ, (೩) ಕನ್ನಡ ಸಾಹಿತ್ಯದ ಪ್ರಾಚೀನತೆ ಎಂಬ ಮೂರು ಪ್ರೌಢವಾದ ವಿಷಯಗಳಮೇಲೆ ವಿಮರ್ಶಾತ್ಮಕ ಪ್ರಬಂಧಗಳನ್ನು ೧೯೪೦, ಮಾರ್ಚ ೧೨, ೧೩, ೧೪ ನೆಯ ತಾರೀಕುಗಳಲ್ಲಿ ಉಪನ್ಯಾಸ ಮಾಡಿದರು. ಈ ಉಪ ನ್ಯಾಸಗಳನ್ನು ಇಲ್ಲಿ ವಿದ್ಯಾರ್ಥಿ ವಿದ್ವಾಂಸರುಗಳ ಅವಗಾಹನೆಗಾಗಿ ಪ್ರಸಿದ್ಧಿಸಲಾ ಗಿದೆ. ಶ್ರೀಮಾನ್ ಪೈಯವರ ವಿಚಾರ ಪರಿಪ್ಲುತವಾದ ಉಪನ್ಯಾಸಗಳು ಕನ್ನಡ ಸಾಹಿತ್ಯದಲ್ಲಿ ಸಂಶೋಧನವನ್ನೆಂತು ಮಾಡುವುದೆಂಬುದನ್ನು ತಿಳಿಸುತ್ತವೆ.

ರನ್ನನ ಕೃತಿಗಳನ್ನು ಕುರಿತು ಕೊಟ್ಟ ಉಪನ್ಯಾಸದಲ್ಲಿ ಶ್ರೀಮಾನ್ ಪೈಯ ವರು ಪರಶುರಾಮಚರಿತ, ಚಕ್ರೇಶ್ವರ ಚರಿತಗಳ ಕಥಾನಾಯಕರಾರೆಂಬುದನ್ನು ವಿಸ್ತಾರವಾಗಿ ವಿವೇಚಿಸಿ ಪರಶುರಾಮಚರಿತದ ನಾಯಕನು ಜೈನ ಧರ್ಮದ ದ್ವಾದಶ ಚಕ್ರವರ್ತಿಗಳಲ್ಲಿ ೮ ನೆಯವನಾದ ಕಾರ್ತವೀರ್ಯ ಸುಭೌಮ ಚಕ್ರ ವರ್ತಿಯೇ ವಿನಾ ಪರಶುರಾಮನಲ್ಲವೆಂದೂ, ಚಕ್ರೇಶ್ವರ ಚರಿತವು ಶ್ರವಣಬೆಳ್ಗೊಳದ ಬಾಹುಬಲಿ ಗೊಮ್ಮಟೇಶ್ವರ ಪ್ರತಿಷ್ಠೆಯ ಸ್ಮಾರಕವಾಗಿದ್ದು ಭರತ ಬಾಹು ಬಲಿಯರ ಕಥೆಯನ್ನೊಳಗೊಂಡಿರಬೇಕಾದುದರಿಂದ ಅದರ ಮುಖ್ಯ ನಾಯಕನು ಚಕ್ರೇಶ್ವರ ಭರತನಾಗಿರಬೇಕೆಂದೂ ತಮ್ಮ ಸಿದ್ಧಾಂತವನ್ನು ತಿಳಿಸಿದ್ದಾರೆ. ಪರಶು ರಾಮ ಚರಿತವನ್ನು ರನ್ನನು ತನ್ನ ಪೋಷಕನಾಗಿದ್ದ ಸಾಮಂತ ರಟ್ಟ ೧ ನೆಯ

ಕಾರ್ತವೀರ್ಯನ (ಸು. ಕ್ರಿ. ಶ. ೯೭೮) ಆಳಿಕೆಯಲ್ಲಿ ರಚಿಸಿರಬೇಕೆಂದೂ, ಚಕ್ರೇಶ್ವರ ಚರಿತವನ್ನು ಗಂಗ ಮನೆತನದ ೧ ನೆಯ ರಕ್ಕಸ ಗಂಗನ ( ಕ್ರಿ. ಶ. ೯೭೩-೮೬ ) ಆಳಿಕೆಯಲ್ಲಿ ಬರೆದಿರಬೇಕೆಂದೂ ಹೇಳಿದ್ದಾರೆ. ಗದಾಯುದ್ಧದ ನಾಯಕನು ಚಾಳುಕ್ಯ ನಾರಾಯಣ ಇಱಿವಬೆಡಂಗ ಸತ್ಯಾಶ್ರಯನೆಂಬುದು ಸ್ಪಷ್ಟವಿದೆ. ಅದರ ರಚನಾಕಾಲದ ಬಗ್ಗೆ ಪಂಡಿತರೊಳಗೆ ಭಿನ್ನಾಭಿಪ್ರಾಯಗಳಿದ್ದುದನ್ನನುಲಕ್ಷಿಸಿ ವ್ಯಾಖ್ಯಾತರು ಈ ವಿಷಯವನ್ನು ಹೆಚ್ಚು ವಿಮರ್ಶೆ ಮಾಡಿದ್ದಾರೆ. ಕೊನೆಗೆ, ಆಹವ ಮಲ್ಲ ತೈಲಪನ ಕಾಲದಲ್ಲಿ ರನ್ನನು ಕವಿಚಕ್ರವರ್ತಿಯೆಂಬ ಬಿರುದನ್ನು ಪಡೆದ ನೆಂದೂ, ಅವನ ಮಗನಾದ ಸತ್ಯಾಶ್ರಯನ ಆಳಿಕೆಯಲ್ಲಿ ಅವನನ್ನೇ ಕಥಾನಾಯಕ ನನ್ನಾಗಿರಿಸಿ " ಅನಿಲಜನೊಳ್ಪೋಲಿಸಿ " ಗದಾಯುದ್ಧವನ್ನು ಸಮೆದನೆಂದೂ, ಈ ಕೃತಿಯು ಕ್ರಿ. ಶ. ೧೦೦೭-೦೮ ರಲ್ಲಿ ಮುಗಿದಿರಬೇಕೆಂದೂ ತೋರಿಸಿದ್ದಾರೆ. ಈ ಸಂದರ್ಭದಲ್ಲಿ ಕೆಳಗಿನ ಈ ಎರಡು ಉಪಯುಕ್ತವಾದ ಹೊಸ ಅಂಶಗಳನ್ನು ಗಮನಿಸಬಹುದಾಗಿದೆ :—

೧. ಗದಾಯುದ್ಧದ I ಆಶ್ವಾಸ, ೫೧ ನೆಯ ಕಂದದಲ್ಲಿ 'ವನರುಹಭವ ನೆನಸಿದ ದಂ | ಡ ನಾಯಕಂ ಕೇಶಿ ತಿರ್ದೆ ಪೇೞ್ದಿಂ ಕವಿರ || ನ್ನನ ಪೇೞ್ದ ಕೃತಿ' ಯೆಂದು ಹೇಳಿದೆ. ೧೦-೧೧ ನೆಯ ಶತಮಾನದ ಚಾಳುಕ್ಯ ರಾಜ್ಯದಲ್ಲಿ ಬೆಳ್ವೊಲ-೩೦೦, ಪುರಿಗೆಱೆ-೩೦೦ ಪ್ರಾಂತಗಳನ್ನು ಆಳುತ್ತಿದ್ದ ದಂಡನಾಯಕ ಕೇಶವಯ್ಯನೇ ಈ ದಂಡನಾಯಕ ಕೇಶಿಯಾಗಿರಬೇಕಲ್ಲದೆ ಬೇರೊಬ್ಬ ಆ ಹೆಸರಿನ ದಂಡನಾಯಕನು ಸಮಕಾಲವಾಗಿ ಬಾಳಿದನೆಂಬುದು ಗೊತ್ತಿಲ್ಲ. ದಂಡನಾಯಕ ಶೋಭನರಸನೆಂಬ ಅಧಿಕಾರಿಯು ಇಱಿವಬೆಡಂಗ ಸತ್ಯಾಶ್ರಯನ ನಿರೂಪದಿಂದ ಶಕ ೯೨೬ ರಲ್ಲಿ ಮೇಲ್ಕಂಡ ಎರಡೂ ಪ್ರಾಂತಗಳನ್ನು ಆಳುತ್ತಿದ್ದನು. ಅವನ ಬಗ್ಗೆ ಕೊನೆಯ ಉಲ್ಲೇಖವೆಂದರೆ ಅದೇ ಶಕ ೯೨೬ ಕ್ಕೆ ಸೇರಿದ್ದು. ಶಕ ೯೩೪ ನೆಯ ಕೋಟಲುಮಚಿಗೆಯ ಶಾಸನದಲ್ಲಿ ದಂಡನಾಯಕ ಕೇಶವಯ್ಯನು ಅವೇ ಪ್ರಾಂತ ಗಳನ್ನಾಳುತ್ತಿದ್ದನೆಂದು ನಿರ್ದೇಶಿಸಲ್ಪಟ್ಟಿರುವುದರಿಂದ ಈ ಕೇಶವಯ್ಯನು ಶಕ ೯೨೬—೯೩೪ ( ಕ್ರಿ. ಶ. ೧೦೦೪--೧೦೧೨ ) ರ ಮಧ್ಯದಲ್ಲಿ ದಂಡನಾಯಕನಾಗಿದ್ದು ಕೊಂಡು ಬೆಳ್ವೊಲ, ಪುಲಿಗೆಱೆ ನಾಡುಗಳನ್ನು ಆಳತೊಡಗಿರಬೇಕು ( *Ep. Ind.* Vol XX, pp. 64 ff and *S. I. I.* Vol. XI, Part I, Introduction, P. VIII ). ಇವನ ಮಕ್ಕಳಲ್ಲಿ ಹಿರಿಯನಾದ ದಂಡನಾಯಕ ವಾವಣರಸನು ಆ ನಾಡುಗಳನ್ನೂ ಕಿರಿಯನಾದ ದಂಡನಾಯಕ ಶ್ರೀಪಾದರಸನು ಮುಳಗುಂದ-೧೨ನ್ನೂ ಶಕ ೯೫೦ ರಲ್ಲಿ ಬೆಸನುತ್ತಿದ್ದರೆಂದು ಹೊಸೂರು ಶಾಸನ ದಿಂದ ಗೊತ್ತಾಗುತ್ತದೆ (*S. I. I.* Vol. XI, Part I, No. 65). ಕೇಶವರಸ, ವಾವಣರಸ, ಶ್ರೀಪಾದರಸ ಎಂಬ ಹೆಸರುಗಳಿಂದ ಇವರು ಬ್ರಾಹ್ಮಣರಾಗಿರ ಬೇಕೆಂದು ತೋರುತ್ತದೆ. ಗದಾಯುದ್ಧದ ದಂಡನಾಯಕ ಕೇಶಿಯು ಇದೇ ದಂಡ

ನಾಯಕ ಕೇಶವಯ್ಯನಾಗಿದ್ದ ಪಕ್ಷದಲ್ಲಿ ರನ್ನನು ತನ್ನ ಕೃತಿಯನ್ನು ಕ್ರಿ. ಶ. ೧೦೦೪ರ ಅನಂತರ ರಚಿಸಿರಬೇಕೆಂದು ಗ್ರಹಿಸಬಹುದಾಗಿದೆ.

೨. ಲಕ್ಕುಂಡಿಯ ಜೈನಬಸದಿಯ ಶಾಸನ (ಶಕ ೯೨೯) ದಲ್ಲಿ ಶಕ ೯೧೫ ರಲ್ಲಿ ರಚಿತವಾದ ಅಜಿತಪುರಾಣದ (ಆಶ್ವಾಸ ೧, ಪದ್ಯ-೬೧) 'ಉನ್ನತ ಕುಕ್ಕುಟೇಶ್ವರ ಜಿನೇಶ್ವರನಂ' ಎಂಬ ಪದ್ಯವು 'ದಾನಚಿಂತಾಮಣಿ'ಯ ವರ್ಣನೆಯಲ್ಲಿ ಹೊಂದಿಕೊಂಡು ಬರುತ್ತದೆ. ಉಳಿದ ಪದ್ಯಗಳಲ್ಲಿಯೂ 'ಕವಿರನ್ನನೋಜೆ' ಯ ಕಳೆಯಿದೆ (*S.I.I.* Vol. XI, *Bombay Karnatak Inscriptions*, Vol. I, part I, No. 52). 'ದಾನಚಿಂತಾಮಣಿ' ಯಿಂದ ಪೋಷಣವನ್ನು ಪಡೆದ ರನ್ನನೇ ಈ ಶಾಸನವನ್ನು ರಚಿಸಿರಬಹುದೆಂಬುದಾಗಿ ಬಲವಾದ ಕಲ್ಪನೆಯಾಗುತ್ತದೆ. ಮೇಲ್ಕಂಡ ಶಾಸನದಲ್ಲಿ 'ಅತ್ತಿಮಬ್ಬರಸಿಯರ್ಸ್ವರ್ಗಕಳ ಗೂರ್ಜರ ವಿಜಯಾನನ್ತರಂ ಶ್ರೀಮದಾಹವಮಲ್ಲಂಗೆ ಬಿನ್ನಪಂಗೆಯ್ದು' ಎಂದಿರುವುದರಿಂದ ಶಕ ೯೨೯ (ಕ್ರಿ. ಶ. ೧೦೦೭) ಕ್ಕೆ ಸ್ವಲ್ಪ ಮುಂಚಿತವಾಗಿ ಈ 'ಗೂರ್ಜರ ವಿಜಯ' ವಾಗಿರಬೇಕು. ವಿಜಯಿಯಾದ ಆಹವಮಲ್ಲ ಸತ್ಯಾಶ್ರಯ ಇಱಿವಬೆಡಂಗನನ್ನೇ ರನ್ನನು ಕಥಾನಾಯಕನನ್ನಾಗಿ ಮಾಡಿ ಗದಾಯುದ್ಧವನ್ನು ರಚಿಸಿರಬಹುದು.

ಬಸವೇಶ್ವರನ ಕಾಲನಿರ್ಣಯವನ್ನು ಮಾಡುವಾಗ ಉಪನ್ಯಾಸಕರು ಅನೇಕ ವಿಷಯಗಳ ವಿಮರ್ಶೆ ಮಾಡಿದ್ದಾರೆ. ಅದರಲ್ಲಿ ಬಿಜ್ಜಳನು ರಾಜ್ಯಭಾರವನ್ನು ತನ್ನ ಮಗನಾದ ಸೋಮಿದೇವನಿಗೆ ಒಪ್ಪಿಸಿ ತಾನು ನಿವೃತ್ತನಾದನೆಂದೂ ಈ ಸಂದರ್ಭದಲ್ಲಿ ಬಿಜ್ಜಳನ ಹಿರಿಯ ಮಗನ ಮಗನಾದ ಕಂದರನು ತನ್ನ ತಾತನ ಮೇಲೆ ಬಂಡು ಮಾಡಿದನೆಂದೂ ಹೇಳಿದ್ದಾರೆ. ಬಿಜ್ಜಳ ಮತ್ತು ಬಸವೇಶ್ವರರ ಅವಸಾನವು ಹೇಗೆ ಉಂಟಾಯಿತೆಂಬುದನ್ನು ಯುಕ್ತಿಗೆ ಸರಿಯಾಗುವಂತೆ ಪ್ರತಿಪಾದಿಸಿದ್ದಾರೆ. ಆದರೆ ಬಿಜ್ಜಳನ ರಾಜ್ಯಪರಿತ್ಯಾಗ ಮತ್ತು ಕಂದರನ ದಂಗೆ ಇವುಗಳ ಬಗ್ಗೆ ಹೆಚ್ಚು ಮನದಟ್ಟುವ ಪ್ರಮಾಣಗಳನ್ನು ಹೇಳುವುದು ಅವಶ್ಯವೆಂದೆನಿಸುತ್ತದೆ.

ಮೂರನೆಯ ಉಪನ್ಯಾಸದಲ್ಲಿ ಶ್ರೀಮಾನ್ ಪೈಯವರು ಕನ್ನಡ ಸಾಹಿತ್ಯದ ಪ್ರಾಚೀನತೆಯನ್ನು ಸಶಾಸ್ತ್ರವಾಗಿ ವಿವೇಚಿಸಿದ್ದಾರೆ.

ಇಂಥ ಉಪನ್ಯಾಸಗಳು ವಿದ್ಯಾರ್ಥಿ ಮತ್ತು ವಿದ್ವಾಂಸರಿಗೆ ಸಂಶೋಧನದ ಹೊಸ ದಾರಿಯನ್ನು ತೋರಿಸುತ್ತವೆ. ಶ್ರೀಮಾನ್ ಗೋವಿಂದ ಪೈಯವರು ತಮ್ಮ ಪರಿಶ್ರಮದ ಫಲವನ್ನು ನಮ್ಮೆಲ್ಲರಿಗೆ ಕೊಟ್ಟುದಕ್ಕೆ ಕನ್ನಡ ಸಂಶೋಧನ ಸಮಿತಿಯು ಅವರಿಗೆ ತುಂಬಾ ಋಣಿಯಾಗಿದೆ.

Kannada
Research office,
Dharwar.

R. S. Panchamukhi,
Director of Kannada Research.

# ಎರಡು ಮಾತು

ಹಳಗನ್ನಡ ಸಾಹಿತ್ಯ ಸಂಶೋಧನಾತ್ಮಕವಾದ ಉಪನ್ಯಾಸಗಳನ್ನು ಮಾಡುವ ಬಗ್ಗೆ ಮುಂಬಯಿ ಪ್ರಾಂತದ ಕನ್ನಡ ಸಂಶೋಧನ ಸಮಿತಿಯ (Board for Research in Kannada Literature) ಪರವಾಗಿ ಅದರ ಸಂಶೋಧನ ಕಾರ್ಯದ ಚಾಲಕ (Director of Kannada Research) ರಾದ ಶ್ರೀ. ಆರ್. ಎಸ್. ಪಂಚಮುಖಿಯವರು ನನ್ನನ್ನು ಆಮಂತ್ರಿಸಿದ ಮೇರೆಗೆ ಆ ಸಮಿತಿಯ ಆಶ್ರಯದಲ್ಲಿ ಕಳೆದ ಮಾರ್ಚ ತಿಂಗಳ 12, 13 ಮತ್ತು 14ನೆಯ ತಾರೀಕುಗಳ ಮುಚ್ಚಂಜೆಯಲ್ಲಿ ನಾನು ಧಾರವಾಡದಲ್ಲಿ ಮಾಡಿದ ಮೂರು ಉಪನ್ಯಾಸಗಳು ಇಲ್ಲಿ ಪ್ರಕಟವಾಗಿವೆ.

ಈ ಉಪನ್ಯಾಸಗಳನ್ನು ಮಾಡತಕ್ಕ ಅವಕಾಶವನ್ನು ನನಗೆ ಒದಗಿಸಿಕೊಟ್ಟ ಆ ಸಮಿತಿಯ ಸದಸ್ಯ ಮಹಾಶಯರಿಗೂ ಆ ಬಗ್ಗೆ ನನಗೆ ಆಹ್ವಾನವಿತ್ತ ಶ್ರೀ. ಪಂಚಮುಖಿಯವರಿಗೂ ಇವಂದು ಅಧ್ಯಕ್ಷರಾಗಿದ್ದ ಡಾ|| ಎಸ್. ಸಿ. ನಂದೀಮಠರವರಿಗೂ ಇವನ್ನು ಅತ್ಯಂತ ತಾಳ್ಮೆಯಿಂದ ಆಲಿಸಿದ ಸಭಿಕ ಮಹಾಶಯರಿಗೂ ನಾನು ಕೃತಜ್ಞನಾದಷ್ಟು ಸಾಲದು.

ಹಿರಿಯರಿಂದ ಪರಂಪರಾಗತವಾಗಿ ಬಂದ ಸಂಪತ್ತಿಗೆ ಪ್ರತ್ಯೇಕ ತಲೆಮಾರಿನವರೂ ತಂತಮ್ಮ ದುಡಿತವನ್ನು ಕೂಡಿಸಿ ಅದನ್ನು ಓರಂತೆ ಹಿಗ್ಗಿಸುತ್ತ ಬರಬೇಕೆಂಬುದು ಧರ್ಮವೇ ಸರಿ. ಆದರೆ ಹೊಸ ವಿತ್ತವನ್ನು ಗಳಿಸಿದರಷ್ಟೇ ಸಾಲದು, ಹಿರಿಯರ ಸಂಪತ್ತಿನಲ್ಲಿ ಹುಗಿದಿಟ್ಟ ನಿಕ್ಷೇಪವೂ ಇದೆ ಎಂದು ಬಲ್ಲವರು ಅದನ್ನೂ ಕಂಡುಕೊಳ್ಳದ ವರೆಗೆ ಅವರ ಹಂಗೂ ತೀರದು, ಹಿರಿಯರ ಋಣವೂ ತಿದ್ದದು ಎಂಬುದನ್ನು ಒಪ್ಪಿದರೆ, ಹಿಂದಣ ಕನ್ನಡ ಸಾಹಿತ್ಯವನ್ನು ಸವಿವುದೂ ಸವಿಸುವುದೂ ಹೇಗೋ ಹಾಗೆಯೇ ಅದರಲ್ಲಿ ಬಯ್ತಿರುವ ಒಡವೆಗಳನ್ನು ಬೆಳಕಿಗೆ ತರುವುದೂ ನಮ್ಮ ಹೊಣೆ ಎಂಬುದನ್ನೂ ಒಪ್ಪಬೇಕು. ಆ ದೃಷ್ಟಿಯಿಂದ ತಾನೆ ನಮ್ಮ ಹಳೆಯ ಸಾಹಿತ್ಯದಿಂದ ಅಗೆದೆತ್ತಿದ ಕೆಲವು ವಿಷಯಗಳನ್ನು ಇಲ್ಲಿ ವಾಚಕ ಮಹಾಶಯರ ಮುಂದೆ ಮಡಗಿದೆ.

ಈ ಉಪನ್ಯಾಸಗಳನ್ನು ಕುರಿತು ಒಂದೊಂದು ಮಾತನ್ನು ಹೇಳುವುದಾದರೆ, ಮೊದಲನೆಯ ಉಪನ್ಯಾಸದ ಪೂರ್ವಾರ್ಧದಲ್ಲಿ ಕನ್ನಡ ಸಾಹಿತ್ಯದಿಂದ ಕಳೆದು

ಹೋದ ರನ್ನನ ಪರಶುರಾಮುಚರಿತದ ಹಾಗೂ ಚಕ್ರೇಶ್ವರಚರಿತದ ಕಥಾವಸ್ತು ವೇನು? ಅವು ಎಲ್ಲೆಲ್ಲಿ ಮತ್ತು ಎಂದೆಂದು ರಚಿತವಾದುವು? ಎಂಬ ಅದೊಂದು ನಷ್ಟಪ್ರಶ್ನೆಗೆ ಹೊರನಿಮಿತ್ತಗಳ ನೆರವಿನಿಂದ ಕಣಿಹೇಳುವ ಕೆಲಸವನ್ನೂ ಅದರ ಉತ್ತರಾರ್ಧದಲ್ಲಿ ಅವನ ಗದಾಯುದ್ಧದ (ಅಚ್ಚಾದ ಪ್ರತಿಯ) ಕೊನೆಗೆ ಇಜ್ಜೋಡಿ ಸಿರುವ ಆ ಕಂದಪದ್ಯದಲ್ಲಿ ಹೇಳಿರುವ ಕಾಲವನ್ನು ಅದಕ್ಕೊಪ್ಪದೆ, ಆ ಕಾವ್ಯದಲ್ಲಿ ಯವೇ ಆಯಾ ಮಾತುಗಳ ಹಾಗೂ ಸಮಸಾಮಯಿಕವಾದ ಆಯಾ ಶಾಸನಗಳ ಆಧಾರದಿಂದ ಅದರ ರಚನಕಾಲದ ನಿರ್ಣಯವನ್ನೂ ಮಾಡಿದೆ.

ಎರಡನೆಯ ಉಪನ್ಯಾಸದಲ್ಲಿ ಬಸವೇಶ್ವರನ ಕಾಲವನ್ನು ನಿಶ್ಚಯಿಸಿದೆ. ಕರ್ಣಾಟಕದ ಮಹಾಪುರುಷರಲ್ಲಿಯೂ ಧರ್ಮಪ್ರವರ್ತಕರಲ್ಲಿಯೂ ಒಬ್ಬನೆಂಬ ಕಾರಣದಿಂದ ಅದರ ಇತಿಹಾಸದಲ್ಲಿ ಮಾತ್ರವಲ್ಲ, ಕನ್ನಡ ಸಾಹಿತ್ಯದಲ್ಲಿ ವಚನ ಕಾವ್ಯದ ಅದೊಂದು ಹೊಸ ಹಾದಿಯನ್ನು ತೋಡಿದವನೇ ಅಲ್ಲವಾದರೆ ಅದನ್ನು ಲೋಗರ ತಿಳುವಳಿಕೆಗೂ ಶರಣರ ಬರವಣಿಗೆಗೂ ತಕ್ಕಂತೆ ಹೆದ್ದಾರಿಯಾಗಿಸಿದವ ನಾವರೂ ಆತನೆಂಬ ಕಾರಣದಿಂದ ಆ ಸಾಹಿತ್ಯದಲ್ಲಿಯೂ ಅವನಿಗೆ ಉಚ್ಚಸ್ಥಾನ ವಿದ್ದೇ ಇದೆ. ಆತ ಏವ ಕಾರಣಪುರುಷನಾಗಿ ಇತಿಹಾಸ ಸಂಶೋಧನಕ್ಕೆ ಎಷ್ಟೋ ವಚನಕವಿಯಾಗಿ ಸಾಹಿತ್ಯ ಸಂಶೋಧನಕ್ಕೂ ಅಷ್ಟೇ ಮಟ್ಟಿಗೆ ಬಸವೇಶ್ವರನ ಕಾಲನಿರ್ಣಯವು ಸಲ್ಲಬೇಕು. ಈ ಉಪನ್ಯಾಸದಲ್ಲಿ ಮಾಡಿರುವ ಸಂಶೋಧನದ ಮೇರೆಗೆ ಬಸವೇಶ್ವರನು ಬಿಜ್ಜಳನನ್ನು ಕೊಲ್ಲಿಸಿದನಲ್ಲ, ಬಿಜ್ಜಳನೇ ತನ್ನ ರಾಜ್ಯ ದಲ್ಲಿ ಎದ್ದ ಹಾವಳಿಯನ್ನು ಅಂಕೆಗೆ ತರಲಾರದೆ, ರಾಜಕೀಯ ವಸ್ತುಸ್ಥಿತಿಯ ಒತ್ತಾಯಕ್ಕೆ ಈಡಾಗಿಯೇ ಆದರೂ, ಆ ಉತ್ಪಾತದ ಮೂದೇವಿಯನ್ನು ಸಂತವಿಸ ಲೆಂದೇ ಆದರೂ ಬಸವೇಶ್ವರನನ್ನು ಬಲಿಕೊಟ್ಟಿರಬೇಕೆಂದೂ ಇತಿಹಾಸದ ರಂಗ ಭೂಮಿಗೆ ಪ್ರಾಯಶಃ ಈ ಉಪನ್ಯಾಸದಲ್ಲಿಯೇ ಏನೋ ಮೊದಲ ಬಾರಿಗೆ ಅವತರಿ ಸುವ ಕಂದರನೂ ಕರ್ಣದೇವನೂ ಎಂಬ ಬಿಜ್ಜಳನ ಮೊಮ್ಮಗನೇ ಆ ವಿಪ್ಲವದ ಮೂಲಕಾರಣನೆಂದೂ ಸಿದ್ಧವಾಗುತ್ತದೆ.

ಮೂರನೆಯ ಉಪನ್ಯಾಸದಲ್ಲಿ ಕನ್ನಡ ಸಾಹಿತ್ಯದಲ್ಲಿ ನೆಲೆಯಿಂದ ಹಿನ್ನೆಲೆಗೆ ಸೋದು, ಅದರ ಪ್ರಾಚೀನತೆಯನ್ನು ಕ್ರಿ. ಶ. 3ನೆಯ ಶತಮಾನದ ವರೆಗೆ ಶೋಧಿಸಿದೆ. ಅದನ್ನು ಬುಗ್ಗೆಯ ವರೆಗೆ ಸೋಸಬೇಕೆಂದಿದ್ದೆನಾದರೂ, ಅಷ್ಟು ಉದ್ದವಾದ ಪಯಣಕ್ಕೆ ಹೊತ್ತೂ ಸಾಲದೆ, ಆ ಪಯಣವನ್ನು ಈ ಉಪನ್ಯಾಸದ ಹೊತ್ತಿನೊಳಗೆ ಮುಗಿಸಲೂ ಆಗದೆ, ಆ ಸಾಹಿತ್ಯದ ಹಳಮೆಯಲ್ಲಿ ಕ್ರಿ. ಶ. 3ನೆಯ ಶತಮಾನದ ವರೆಗಷ್ಟೇ ಸಾಗಲಾಯಿತಲ್ಲದೆ ಪ್ರಾಯಶಃ ಕ್ರಿ. ಪೂ. 2ನೆಯ ಶತಕ ದಲ್ಲಿರುವ ಅದರ ಬುಗ್ಗೆಗೆ ಮುಟ್ಟಲಾಗಲಿಲ್ಲ. ಅದಲ್ಲದೆ ಈ ಉಪನ್ಯಾಸದಲ್ಲಿ ವಿವೇಚಿ ಸಿರುವ ವೊಡ್ಡಾರಾಧಣದ ಪ್ರಾಕೃತ ಮೂಲಗ್ರಂಥವನ್ನು ಕುರಿತು ಇನ್ನೂ ಹೇಳಲಿ

ಕ್ಕಿದ್ದ ಕೆಲವು ಮಾತುಗಳನ್ನು ಇಲ್ಲಿ ಅಪ್ರಾಸಂಗಿಕವೇನೋ ಎಂದು ಹೇಳಲಿಲ್ಲ, ಕನ್ನಡ ಸಾಹಿತ್ಯಕ್ಕೆ ಹೇಗೂ ಹೇರಳ ಉಪಯುಕ್ತವಾದ ಈ ಗ್ರಂಥವು ಭಾರತದ ಇತಿಹಾಸಕ್ಕೂ ಉಪಯೋಗದಲ್ಲಿ ಕಿರಿದಲ್ಲ ಎಂಬುದನ್ನೂ ಉದಾಹರಿಸಲಿಲ್ಲ. ಈ ಶೋಧವನ್ನು ಇಲ್ಲಿ ಬಿಟ್ಟಲ್ಲಿಂದ ಮುಂದೆ ಯಥಾವಕಾಶವಾಗಿ ಇತರತ್ರ ಕೊನೆಗಾಣಿಸಲಾದೀತೆಂದು ಕೋರುತ್ತೇನೆ.

ಈ ಉಪನ್ಯಾಸಗಳನ್ನೂ ನಾನು ಬರೆದ ಇಂಥವೇ ಮಿಕ್ಕ ಲೇಖಗಳನ್ನೂ ಕುರಿತು ಕೊನೆಯಲ್ಲಿ ನನ್ನ ಸಂಬುಗೆಯ ಮಾತನ್ನು ಹೇಳುವುದಾದರೆ, ಇವನ್ನು ಬರೆದ ಲೇಖನಿ ನನ್ನ ಕೆಯ್ಯಲ್ಲಿ ಹೇಗೋ ಹಾಗೆ ನನ್ನ **ಪ್ರೇರಕನ** ಕೆಯ್ಯಲ್ಲಿ ನಾನು; ಬರೆಹ ಮಾತ್ರಕ್ಕೆ ನಾನಲ್ಲದೆ ಬಗೆತಕ್ಕೆ **ಆತನೇ.** ಅತಏವ

**ತ್ವಯಾ ಹೃಷೀಕೇಶ ಹೃದಿ ಸ್ಥಿತೇನ**
**ಯಥಾ ನಿಯುಕ್ತೋಽಸ್ಮಿ ತಥಾ ಕರೋಮಿ ॥**

ಇತಿ ಶಮ್.

**ಮಂಜೇಶ್ವರ,** **ಗೋವಿಂದ ಪೈ**
ಮಾರ್ಚ ೧೯೪೦.

## ಈ ಉಪನ್ಯಾಸಗಳಲ್ಲಿ ಉಪಯೋಗಿಸಿರುವ ಕೆಲವು ಆಂಗ್ಲ ಸಂಕೇತಗಳು.

1. EC = Epigraphia Carnatica.
2. EHD = R. G. Bhandarkar's 'Early History of the Dekkan' (Calcutta, 1928).
3. EI = Epigraphia Indica.
4. FKD = Fleet's 'Dynasties of the Kanarese Districts of the Bombay Presidency' (1896).
5. HISI = Historical Inscriptions of South India (Madras, 1932).
6. IA = Indian Antiquary.
7. JIH = Journal of Indian History (Madras).
8. KHR = Karnatak Historical Review (Dharwar).
9. SIE = Annual Report on South Indian Epigraphy.
10. App. = Appendix.
11. Sup. = Supplement.
12. f.n. = foot-note.

# ವಿಷಯ ಸೂಚಿಕೆ







# ರನ್ನನ

## ಪರಶುರಾಮುಚರಿತ ಚಕ್ರೇಶ್ವರ ಚರಿತಗಳನ್ನೂ ಗದಾಯುದ್ಧದ ರಚನಕಾಲವನ್ನೂ ಕುರಿತು.



ಶಕವರ್ಷಂ ಪಂಚದಶಾ
ಧಿಕ ನವಶತಮಾಗೆ ವಿಜಯ ಸಂವತ್ಸರ ಕಾ।
ರ್ತಿಕ ನಂದೀಶ್ವರ ದಿನದೊಳ್
ಪ್ರಕಟಿಸಿದುದು

ಎಂದಿರುವ ರನ್ನನ ಅಜಿತಪುರಾಣವು (XII. ೫೪) ಶಾ. ಶ. ೯೧೫ನೆಯ ವಿಜಯ ಸಂವತ್ಸರದಲ್ಲಿಯ ಕಾರ್ತಿಕ ಮಾಸದ ಶುಕ್ಲಾಷ್ಟಮಿಯಿಂದ ಹುಣ್ಣಿಮೆ ವರೆಗಣ ನಂದೀಶ್ವರವೆಂಬ ಜೈನ ಅಷ್ಟಾಹ್ನಿಕ ಪರ್ವದ ಯಾವೊಂದು ತಿಥಿಯಂದು, ಅಂದರೆ ಕ್ರಿ. ಶ. 993 ಅಕ್ಟೋಬರ 26 ರಿಂದ ನವಂಬರ 2ರೊಳಗಣ ಯಾವೊಂದು ತಾರೀಕಿನಂದು, ಅಥವಾ ಹೆಚ್ಚಾಗಿ ಆ ಅಷ್ಟಾಹ್ನಿಕ ವ್ರತದ ಮೊತ್ತಮೊದಲಿನ ದಿನ ವನ್ನೇ ನಂದೀಶ್ವರ ದಿನ ಎನ್ನುವುದರಿಂದ ಅಕ್ಟೋಬರ 26ನೆಯ ತಾರೀಕಿನಂದೇ ಏನೋ, ಬರೆದು ಮುಗಿದಿರಬೇಕು. ಆ ಕವಿತೆಯಲ್ಲಿ (XII. ೪೨)

ಕರಮೆಸೆದುವು ರತ್ನತ್ರಯ
ಪರಿಕಲ್ಪದೆ ಪರಶುರಾಮುಚರಿತಂ ಚಕ್ರೇ।
ಶ್ವರಚರಿತಮಜಿತ ತೀರ್ಥೇ
ಶ್ವರಚರಿತಂ ರತ್ನನಿಂದೆ ಭುವನತ್ರಯದೊಳ್ ॥

ಎಂದಿರುವುದರಿಂದ, ಕನ್ನಡ ಅಜಿತಪುರಾಣದೊಂದಿಗೆ ಹೇಳಲ್ಪಟ್ಟಿರುವ ಕಾರಣ ಅದರಂತೆಯೇ ಕನ್ನಡ ಕಾವ್ಯಗಳಾಗಿರಬೇಕಾದ ಪರಶುರಾಮುಚರಿತ ಮತ್ತು ಚಕ್ರೇಶ್ವರಚರಿತ ಎಂಬ ತನ್ನ ಅವೆರಡೂ ಕಾವ್ಯಗಳನ್ನು ರನ್ನನು ಆ ಮುಂಚೆಯೇ ರಚಿಸಿ ಪ್ರಕಟಿಸಿರಬೇಕೆಂದೂ ಅಜಿತಪುರಾಣವನ್ನು ಬರೆದು ಮುಗಿಸುವಂದಿಗೆ ಕರ್ಣಾಟಕ ಸಾಹಿತ್ಯದ ಮಟ್ಟಿಗೆ ಅದೂ ಕೂಡ ಮೂರೇ ವಿನಾ ಬೇರೆ ಯಾವ ಕಾವ್ಯ ವನ್ನಾದರೂ ಆತನು ರಚಿಸಿರಲಾರನೆಂದೂ ನಿಷ್ಪನ್ನವಾಗುತ್ತದೆ. ಅವನ ಪರಶುರಾಮು ಚರಿತವೂ ಚಕ್ರೇಶ್ವರಚರಿತವೂ ಕನ್ನಡ ಸಾಹಿತ್ಯಕ್ಕೆ ಇದುವರೆಗೆ ಉಪಲಬ್ಧವಾಗಿಲ್ಲ, ಅವುಗಳಿಂದಲೇ ಎತ್ತಿಕೊಂಡುವೆಂದು ಖಚಿತವಿರುವ ಪದ್ಯಗಳಾದರೂ ದೊರಕಿಲ್ಲ

ಎಂಬುದು ಶೋಚನೀಯವೇ. ಆದರೂ ಅವಲ್ಲಿ ಆಯಾ ಕಾವ್ಯದ ಕಥಾವಸ್ತು ಯಾವಾವುದಾಗಿರಬೇಕು, ಅವು ಎಲ್ಲೆಲ್ಲಿ ಮತ್ತು ಎಂದೆಂದು ರಚಿತವಾಗಿರಬಹುದು ಎಂಬುದನ್ನು ಸಾಧ್ಯವಿರುವ ಮಟ್ಟಿಗೆ ವಿಚಾರಿಸಿ ನೋಡೋಣ.

ಆದರೆ ಮೊತ್ತಮೊದಲಲ್ಲಿ ಹೇಳಬೇಕಾದ ಇದೊಂದು ಮಾತಿದೆ. ಸುಮಾರು ೧೨ ವರ್ಷಗಳ ಹಿಂದೆ ಮಂಗಳೂರಿನ 'ಉದಯ ಭಾರತ' ಎಂಬ ಪತ್ರಿಕೆಯಲ್ಲಿ (1928 : II. 2, ಪುಟ ೪೨) 'ರನ್ನನ ಕಾವ್ಯಗಳನ್ನು ಕುರಿತು' ಎಂಬಾಲೇಖವನ್ನು ನಾನು ಬರೆವಾಗ, ಗದಾಯುದ್ಧದ ತೃತೀಯ ಮುದ್ರಣದ ಉಪೋದ್ಘಾತದಲ್ಲಿ (ಪುಟ. XVII) "ರನ್ನನು ಅಜಿತಪುರಾಣದಲ್ಲಿ 'ನೆಗಟ್ದ ವರಿರ್ವರಪೆಸರ್ಗಂ| ನೆಗಟ್ದುವು ತನ್ನೆರಡುಮುದ್ಧ ಕೃತಿಗಳ್ ರಾಯುಂ|| ಮಗನತ್ತಿಮಬ್ಬೆ ಮಗಳೆನೆ|' (XII. ೫೩) ಎಂದರೆ ತನ್ನ ಮಕ್ಕಳಾದ ರಾಯ ಮತ್ತು ಅತ್ತಿಮಬ್ಬೆ ಎಂಬವರಿರ್ವರ ಹೆಸರುಗಳಿಗಾಗಿ ಈ ಕೃತಿಗಳು ರಚಿಸಲ್ಪಟ್ಟುವು ಎಂದು ಹೇಳುತ್ತಾನೆ" ಎಂದೂ (ಈ ಕೃತಿಗಳು ಎಂದರೆ ಅವನ ಪರಶುರಾಮಚರಿತ ಮತ್ತು ಚಕ್ರೇಶ್ವರಚರಿತ) ಅಲ್ಲಿಯೇ ಆ ಮೇಲೆ "ಕರಮೆಸೆದುವು ರತ್ನತ್ರಯ | ಪರಿಕಲ್ಪದೆ ಪರಶುರಾಮಚರಿತಂ ಚಕ್ರೇ || ಶ್ವರ ಚರಿತಮಜಿತತೀರ್ಥೇ | ಶ್ವರಚರಿತಂ ರತ್ನನಿಂದೆ ಭುವನತ್ರಯದೊಳ್ || (ಅಜಿತ XII. ೪೭) ಎಂಬ ಪದ್ಯದಲ್ಲಿರುವ ಗ್ರಂಥಗಳ ಕ್ರಮವನ್ನೂ ಮೇಲಣ (ಅಜಿತ XII. ೫೩) ಪದ್ಯದಲ್ಲಿರುವ ಮಕ್ಕಳ ಹೆಸರುಗಳ ಕ್ರಮವನ್ನೂ ನೋಡಿದರೆ ಪರಶುರಾಮಚರಿತವನ್ನು ರಾಯನಿಗೂ ಚಕ್ರೇಶ್ವರಚರಿತವನ್ನು ಅತ್ತಿಮಬ್ಬೆಗೂ ಅಂಕಿತ ಮಾಡಿರುವನೆಂದು ಗೊತ್ತಾಗುತ್ತದೆ" ಎಂದೂ ಇರುವೀ ಮಾತುಗಳನ್ನು ಸಾಕಷ್ಟು ವಿಮರ್ಶಿಸದೆ ಅವು ಸರಿಯಾಗಿರಬೇಕೆಂದೇ ನಂಬಿ ರನ್ನನು ಪರಶುರಾಮ ಚರಿತ ಮತ್ತು ಚಕ್ರೇಶ್ವರಚರಿತ ಎಂಬೀ ಹೆಸರುಗಳ ಕಾವ್ಯಗಳನ್ನು ಬರೆದು ಅವನ್ನು ತನ್ನಿಬ್ಬರು ಮಕ್ಕಳ ಹೆಸರುಗಳಿಗೆ ಅಂಕಿತಮಾಡಿದನೆಂದು ಅಜಿತಪುರಾಣ ದಿಂದ (XII. ೫೩) ತಿಳಿಯುತ್ತದೆ ಎಂದು (ಉದಯಭಾರತ II. 2. ಪು. ೪೨) ನಾನೂ ಹೇಳಿಬಿಟ್ಟೆ. ಈಗ ಆಲೋಚಿಸಿದರೆ ಅಜಿತಪುರಾಣದ XII. ೫೩ನೆಯ ಕಂದದಿಂದ ಆ ಅರ್ಥವು ಹೊರಡುವಂತಿಲ್ಲ, ಅದರ ಅರ್ಥವು ತೀರ ಅನ್ಯಥಾ ಇದೆ ಎಂದೇ ತೋರುತ್ತದೆ. ಅದು ಹೇಗೆಂದರೆ— ರಾಯನೆಂದೂ ಹೆಸರುಳ್ಳ ತನ್ನ 'ಅಜಿತಶೌರ್ಯಸ್ವಾಮಿ' ಯಾದ (ಅಜಿತ XII. ೪೮) ಚಾವುಂಡರಾಯನಲ್ಲಿಯೂ ತನ್ನಿಂದ ಅಜಿತಪುರಾಣವನ್ನು ಹೇಳಿಸಿದ (ಅಜಿತ I. ೭೭) ದಾನಚಿಂತಾಮಣಿಯಾದ (ಅಜಿತ XII ೭–೧೬) ಅತ್ತಿಮಬ್ಬೆಯಲ್ಲಿಯೂ ತನಗಿರುವ ತುಂಬಾ ಗೌರವದಿಂದ ಅವರಿಬ್ಬರ ಹೆಸರುಗಳನ್ನು ತನ್ನ ಇಬ್ಬರು ಮಕ್ಕಳಿಗೆ ಇಟ್ಟು, ತನ್ನ ಆ ಮಕ್ಕಳು ಆ ನೆರಡು ಮೇಲಾದ ಹೆಸರುಗಳಿಂದ ತನ್ನ ಎರಡು ಉದ್ಧಕೃತಿಗಳಂತೆ ಬಳೆಯೆ

ಆ ಬಗೆಯ ಸಂತಾನವೃದ್ಧಿಯಿಂದ ತಾನು ನೆಗಳಿದೆನೆಂದಷ್ಟು ಮಾತ್ರ ರನ್ನನು ಈ ಪದ್ಯದಲ್ಲಿ ಹೇಳಿರುತ್ತಾನೆ; ಅಂದರೆ ತನ್ನ ಮಕ್ಕಳನ್ನು ಚಾವುಂಡರಾಯನ ಮತ್ತು ಅತ್ತಿಮಬ್ಬೆಯ ಹೆಸರುಗಳಿಗೆ ತನ್ನೆರಡು ಉದ್ಘಕೃತಿಗಳಂತೆ, ಮಗನನ್ನು ರಾಯನೆಂದೂ ಮಗಳನ್ನು ಅತ್ತಿಮಬ್ಬೆ ಎಂದೂ ಅಂಕಿತಮಾಡಿ ತಾನು ನೆಗಳಿದೆನೆಂದಷ್ಟೇ ಹೇಳುವ ಈ ಕಂದದಲ್ಲಿ 'ನೆಗಟ್ದನರಿರ್ವರು' ಅಂದರೆ ಪ್ರಖ್ಯಾತರಾದ ಆ ಚಾವುಂಡರಾಯ ಮತ್ತು ಅತ್ತಿಮಬ್ಬೆ, ಅವರ ಹೆಸರುಗಳಿಗೆ ರನ್ನನು ತನ್ನ ಮಕ್ಕಳನ್ನು ಅಂಕಿತಮಾಡಿದನು, ಅಂದರೆ ಅವರ ಹೆಸರುಗಳನ್ನು ತನ್ನ ಮಕ್ಕಳಿಗೆ ಇಟ್ಟನು ಎಂದು ತಾನೆ ಈ ಪದ್ಯದ ಅರ್ಥವಲ್ಲದೆ ತನ್ನ ಪರಶುರಾಮಚರಿತ ಮತ್ತು ಚಕ್ರೇಶ್ವರಚರಿತ ಎಂಬ ಅವೆರಡು ಕಾವ್ಯಗಳನ್ನು ಅವೆರಡು ಮಕ್ಕಳ ಹೆಸರಿಗೆ ಅಂಕಿತಮಾಡಿದನೆಂದು ಸರ್ವಥಾ ಅಲ್ಲ. ಏಕೆಂದರೆ ಅಜಿತಪುರಾಣದಿಂದ (XII. ೫೧) ತಿಳಿವಂತೆ ವಿರೋಧಿ ಸಂ| ಭಾದ್ರಪದ ಶುಕ್ಲ ಬಿದಿಗೆ ಆದಿ (?) ವಾರದಂದು[೧], ಅಂದರೆ ಕ್ರಿ. ಶ 989 ಅಗೋಸ್ತು 6 ಕುಜವಾರದಂದು, ಹುಟ್ಟಿದ ರಾಯನು ಅವೆರಡು ಕಾವ್ಯಗಳನ್ನು ಬರೆದು ಮುಗಿಸುವಂದು ಹುಟ್ಟಿದ್ದನೋ ಇಲ್ಲವೋ ಎಂದು ನಿಷ್ಕೃಷ್ಟವಾಗಿ ಹೇಳಲಾಗದಾದರೂ ಅವೆರಡನ್ನೂ ಮುಗಿಸಿದ ಬಳಿಕ ತಾನೆ ರಚಿಸಿದ ಅಜಿತಪುರಾಣವನ್ನೂ ಮುಗಿಸಿದ ಒಂದು ತಿಂಗಳಮೇಲೆ ಅದೇ ವಿಜಯ ಸಂ| ಮಾರ್ಗಶಿರ ಶುಕ್ಲ ಏಕಾದಶಿ ಸೋಮವಾರ (ಅಜಿತ XII. ೫೨) = ಕ್ರಿ. ಶ. 993 ನವಂಬರ 27 ರಂದು ಹುಟ್ಟಿದ ಅತ್ತಿಮಬ್ಬೆಯಾದರೊ ಪರಶುರಾಮಚರಿತವನ್ನೂ ಚಕ್ರೇಶ್ವರ ಚರಿತವನ್ನೂ ರಚಿಸುವಾಗ ಇನ್ನೂ ಹುಟ್ಟಿದ್ದಿಲ್ಲ ಎಂಬುದು ಎಷ್ಟು ನಿರ್ವಿವಾದವೋ, ಅಜಿತ ಪುರಾಣಕ್ಕಿಂತಲೂ ಮುಂಚೆ, ಅಂದರೆ ಆಕೆ ಹುಟ್ಟುವ ಎಷ್ಟೋ ಮುಂಚೆ, ಬರೆದು ಮುಗಿದ ಕಾವ್ಯವು ಆಕೆಗೆ ಅಂಕಿತಮಾಡಲ್ಪಡದು ಎಂಬದೂ ಅಷ್ಟೇ ಕಂಡಿತ. ಅದಲ್ಲದೆ ದಾನಚಿಂತಾಮಣಿಯಾದ ಅತ್ತಿಮಬ್ಬೆಯಿಂದ ವಿನಿರ್ಮಾಪಿತವಾದ ಅಜಿತಪುರಾಣವು ಬರೆದು ಮುಗಿದ ಒಂದು ತಿಂಗಳಮೇಲೆ ಹುಟ್ಟಿದ ತನ್ನ

೧ ಕ್ರಿ. ಶ. 989ರಲ್ಲಾಗಲಿ ಅದರ ಆಚೀಚೆಯ ಹಲವು ವರ್ಷಗಳಲ್ಲಾಗಲಿ ಭಾದ್ರಪದ ಶುದ್ಧ ಬಿದಿಗೆ ಆದಿ(ತ್ಯ)ವಾರ ಬಂದಿರಲಿಲ್ಲ. ಕ್ರಿ. ಶ. 989ನೆಯ ವಿರೋಧಿಯಲ್ಲಿ ಅದು ಕುಜವಾರ ಬಂದಿತ್ತು. ಕುಜನಿಗೆ ಆರ (ಗ್ರೀಕ್ Ares) ಎಂದು ಹೆಸರಿರುವಂತೆ ವರಾಹ ಮಿಹಿರನ ಬೃಹಜ್ಜಾತಕದಿಂದಲೂ (II. ೨) — ಆರೋವಕ್ರಃ ಕ್ರೂರದೃಕ್ಚಾವನೇಯಃ— ಹೇಮಚಂದ್ರನ ಅಭಿಧಾನಚಿಂತಾಮಣಿಯಿಂದಲೂ (ಶ್ಲೋ. ೧೧೬)— ಆರೋ ವಕ್ರೋ ಲೋಹಿತಾಂಗೋ ಮಂಗಲೋಂಗಾರಕಃ ಕುಜಃ — ತಿಳಿಯುತ್ತದೆ. ಅಜ್ಞರಾದ ಸಂಪ್ರತಿಕಾರರಿಂದ 'ಆರ' ವು 'ಆದಿ' ಎಂದು ತಪ್ಪಾಗಿ ಬರೆಯಲ್ಪಟ್ಟಿರಬಹುದೇನೋ. ಪಕ್ಷವನ್ನು ಹೇಳುವಲ್ಲಿ ತಪ್ಪಿರಬಹುದೇನೋ ಎಂದರೆ ಉತ್ತರಾನಕ್ಷತ್ರವು ಭಾದ್ರಪದ ಶುಕ್ಲ ಬಿದಿಗೆಯಂದೇ ವಿನಾ ಬಹುಳ ಬಿದಿಗೆಯೆಂದು ಸರ್ವಥಾ ಬಾರದು.

ಮಗಳಿಗೆ ರನ್ನನು ಅತ್ತಿಮಬ್ಬೆಯ ಹೆಸರನ್ನು ಇಕ್ಕಿದುದರಿಂದ, ಆ ದಾನಚಿಂತಾ ಮಣಿ ಅತ್ತಿಮಬ್ಬೆಯ ಹೆಸರಿಗೆ ತನ್ನ ಮಗಳನ್ನು ಅಂಕಿತಮಾಡಿದನೆಂದೇ ಆ ಪದ್ಯದ (ಅಜಿತ XII. ೫೩) ಅರ್ಥವಲ್ಲದೆ, ತನ್ನ ಆ ಮುಂಚಿನ ಅವೆರಡರಲ್ಲಿಯ ಯಾವು ದೊಂದು ಕಾವ್ಯವನ್ನು ತನ್ನ ಮಗಳ ಹೆಸರಿಗೆ ಅಂಕಿತಮಾಡಿದನೆಂದಲ್ಲ ಎಂಬುದೂ ಸ್ವಯಂ ಸಿದ್ಧ. ಆದಕಾರಣ ಅವೆರಡು ಕೃತಿಗಳನ್ನು ರನ್ನನು ತನ್ನ ಮಕ್ಕಳ ಬಗ್ಗೆ ರಚಿಸಿದುದೂ ಅಲ್ಲ, ಅವರಿಗೆ ಅಂಕಿತಮಾಡಿದುದೂ ಅಲ್ಲವೆಂದು ನಿಷ್ಕೃಷ್ಟವಾಗು ವುದರಿಂದ ಈ ಮೊದಲು ನನ್ನಿಂದ ಆಗಿಹೋದ ಆ ತಪ್ಪಿಗೆ ವಿಷಾದಪಡುತ್ತೇನೆ.

ರನ್ನನ ಪರಶುರಾಮಚರಿತವನ್ನೂ ಚಕ್ರೇಶ್ವರಚರಿತವನ್ನೂ ಕುರಿತು ೭-೮ ವರ್ಷಗಳ ಹಿಂದೆ ಮಂಗಳೂರಿನ 'ದೇಶರಂಜನ' ಎಂಬ ದ್ವೈಮಾಸಿಕದ (1932: I. 2-3) ಪ್ರಜಾಪತಿ ಸಂ| ಮಾಘ ಮತ್ತು ಆಂಗೀರಸ ಸಂ| ಚೈತ್ರ ಮಾಸಗಳ (1932 ಫೆಬ್ರುವರಿ ಮತ್ತು ಏಪ್ರಿಲ್) ಸಂಚಿಕೆಗಳಲ್ಲಿ ನಾನು ಈ ಮುಂಚೆ ಸವಿಸ್ತಾರವಾಗಿ ಬರೆದಿರುವೆನಾದರೂ ಈಗ ಪುನರಾಲೋಚಿಸುವಲ್ಲಿ ಅಲ್ಲಿ ಹೇಳಿದ ಕೆಲವು ಅಭಿಪ್ರಾಯಗಳು ನೇರಾಗಿರವೆಂದು ತೋರುವುದರಿಂದ ಅವುಗಳನ್ನು ನೀಗಿ ಅವುಗಳೆಡೆಯಲ್ಲಿ ಈಗ ನನಗೆ ನೇರೆನಿಸುವ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತೇನೆ.

ಪರಶುರಾಮಚರಿತವನ್ನು ಕುರಿತು 'ದೇಶರಂಜನ'ದಲ್ಲಿ ಬರೆಯುವುದಕ್ಕಿಂತ ೪ ವರ್ಷಗಳ ಹಿಂದೆ ಅದೇ ಕುರಿತು 'ಉದಯ ಭಾರತ'ದಲ್ಲಿ (1928: II. 3. ಪು. ೬೮) ಬರೆವಾಗ ನಾನು ಗುಣಭದ್ರನ ಸಂಸ್ಕೃತ ಉತ್ತರಪುರಾಣವನ್ನು ಕಂಡಿಲ್ಲ ದುದರಿಂದ, "ಜೈನ ಪುರಾಣೋಕ್ತ ದ್ವಾದಶ ಚಕ್ರವರ್ತಿಗಳಲ್ಲಿ ಒಬ್ಬನಾದ ಸುಭೌಮ ನೆಂಬವನೇ ಕಾರ್ತವೀರ್ಯನು; ಆತನಿಗೆ ಸುಭೂಮ, ಸುಭೌಮ, ಕಾರ್ತ ವೀರ್ಯ ಎಂದು ಹೆಸರಿವೆ—'ಸುಭೂಮಸ್ತು ಕಾರ್ತವೀರ್ಯ:' (ಹೇಮಚಂದ್ರನ ಅಭಿಧಾನ ಚಿಂತಾಮಣಿ, ಶ್ಲೋ. ೬೯೩); ಆದುದರಿಂದ ದ್ವಾದಶ ಚಕ್ರವರ್ತಿಗಳಲ್ಲಿ ಒಬ್ಬನಾದ ಸುಭೌಮನೆಂಬ ಕಾರ್ತವೀರ್ಯನನ್ನು ಸದೆಬಡಿದ ಅಥವಾ ಗೆದ್ದ ಪರಶು ರಾಮನನ್ನು ಜೈನ ಕವಿಯಾದ ರನ್ನನು ಮಹಾಪುರುಷನೆಂದು ಗೌರವಿಸಿ, ಆತನನ್ನು ಉದ್ದೇಶಿಸಿ ಪರಶುರಾಮಚರಿತವನ್ನು ರಚಿಸಿರಬೇಕೆಂಬುದು ವಿಹಿತವೇ" ಎಂದು ಅಲ್ಲಿ ಊಹಿಸಿಬಿಟ್ಟೆ. ಆ ಮೇಲೆ 'ದೇಶರಂಜನ'ದಲ್ಲಿ ಆ ಕುರಿತು ಬರೆಯುವಾಗ ಉತ್ತರಪುರಾಣವನ್ನು ನೋಡಿದಲ್ಲಿ ಸುಭೌಮನೆಂಬ ಕಾರ್ತವೀರ್ಯನೇ ಜಾಮದಗ್ನ್ಯ ನಾದ ಪರಶುರಾಮನನ್ನು ಕೊಂದನೆಂದು ಆ ಜೈನ ಪುರಾಣದಲ್ಲಿ ಹೇಳಿರುವುದರಿಂದ, ನನ್ನ ಆ ಹಿಂದಣ ಊಹೆ ತೀರ ತಪ್ಪೆಂದು ಮುಕ್ತಕಂಠವಾಗಿ ಹೇಳಿ, ಮಹಾವಿಷ್ಣು ವಿನ ೬ ನೆಯ ಅವತಾರವೆಂದು ನಾವು ನಂಬುವ ಪರಶುರಾಮನನ್ನು ಕುರಿತು ನಮ್ಮ

ಧರ್ಮಗ್ರಂಥಗಳಲ್ಲಿರುವ ಕಥೆಗೂ ಜೈನ ಪುರಾಣದಲ್ಲಿರುವ ಪರಶುರಾಮನ ಕಥೆಗೂ ಇರುವ ವ್ಯತ್ಯಾಸವು ವಾಚಕರಿಗೆ ಮನವರಿಕೆಯಾಗುವಂತೆ ಜೈನ ಪರಶುರಾಮನ ಕಥೆಯನ್ನು ಇಲ್ಲಿ ಸಂಕ್ಷೇಪವಾಗಿ ಹೇಳುತ್ತೇನೆ. ವೈದಿಕ ಪರಶುರಾಮನ ಕಥೆಯನ್ನು ಹೆಚ್ಚುಕಡಮೆ ಎಲ್ಲರೂ ಬಲ್ಲರೆಂಬುದರಿಂದ ಅದನ್ನಿಲ್ಲಿ ಕೊಡಬೇಕೆಂದಿಲ್ಲ; ಅದನ್ನು ಭಾರತದ ಆದಿಪರ್ವ ( ಅಧ್ಯಾಯ ೧೦೪ ), ಶಾಂತಿಪರ್ವ ( ಅಧ್ಯಾಯ ೪೮-೪೯ ), ಭಾಗವತ ( IX ಅಧ್ಯಾಯ ೧೫ - ೧೬ ), ಮತ್ತು ರಾಮಾಯಣ ( ಬಾಲಕಾಂಡ, ಸರ್ಗ ೭೪ - ೭೬ ) ಗಳಲ್ಲಿ ಓದಿ ನೋಡಬಹುದು. ಜೈನ ಪರಶುರಾಮನ ಕಥೆಯನ್ನು ಗುಣಭದ್ರನ ಉತ್ತರಪುರಾಣದ ( ಕ್ರಿ. ಶ. 897 ) ೬೫ ನೆಯ ಪರ್ವದ ೫೧ ರಿಂದ ೧೫೦ ರ ವರೆಗಣ ಶ್ಲೋಕಗಳಲ್ಲಿ ಹೀಗೆ ಹೇಳಿದೆ—

ಜೈನರ ೧೮ ನೆಯ ತೀರ್ಥಂಕರನಾದ ಅರನಾಥನು ಪರಿನಿರ್ವಾಣ ಹೊಂದಿ, ಆ ಬಳಿಕಣ ೧೯ ನೆಯ ತೀರ್ಥಂಕರನಾದ ಮಲ್ಲಿನಾಥನು ಇನ್ನೂ ಜನ್ಮವೆತ್ತಿರದ ಆ ನಡುಗಾಲದಲ್ಲಿ ಇಕ್ಷ್ವಾಕುವಂಶದ ಅರಸನಾದ ಸಹಸ್ರಬಾಹು ( ಶ್ಲೋ. ೫೭ ) ಎಂಬಾತನು ಕೋಸಲದೇಶದ ಅಯೋಧ್ಯಾ ನಗರದಲ್ಲಿ ಆಳುತ್ತಿರುವಂದು, ಆತನ ಚಿಕ್ಕಪ್ಪನಾದ ಶತಬಿಂದು ಎಂಬವನು ಪಾರತ ದೇಶದ ಅರಸನ ಸೋದರಿಯಾದ ಶ್ರೀಮತಿ ಎಂಬಾಕೆಯನ್ನು ಮದುವೆಯಾಗಿ ಆಕೆಯಲ್ಲಿ ಜಮದಗ್ನಿ ಎಂಬ ಮಗನನ್ನು ಪಡೆದನು ( ೬೦ ). ಆ ಜಮದಗ್ನಿಗೆ ಚಿಕ್ಕಂದಿನಲ್ಲಿಯೇ ಮಾತೃವಿಯೋಗ ದುಃಖವು ಪ್ರಾಪ್ತಿಸಿ, ಅದರಿಂದ ವಿರಕ್ತನಾದ ಆತನು ಪಂಚಾಗ್ನಿ ಮಧ್ಯದಲ್ಲಿ ತಪಶ್ಚರಣ ಗೆಯ್ವಂದು ( ೬೧ ), ಆತನ ಬಳಿಗೆ ಇಬ್ಬರು ಜ್ಯೋತಿಷ್ಕ ದೇವತೆಗಳು ಬಂದು—

> ಕೌಮಾರ ಬ್ರಹ್ಮಚಾರಿತ್ವಂ ತವ ಸಂತತಿ ವಿಚ್ಛಿದೇ ।
> ಸಂತಾನಘಾತಿನಃ ಪುಂಸಃ ಕಾ ಗತಿರ್ನರಕಾದ್ವಿನಾ । ೭೮ ।
> ಅಪುತ್ರಸ್ಯ ಗತಿರ್ನಾಸ್ತೀತ್ಯಾರ್ಷಂ ಕಿಂ ನ ತ್ವಯಾ ಶ್ರುತಮ್ ।
> ಕುತೋಽವಿಚಾರಯನ್ನೇವಂ ಕ್ಲಿಶ್ನಾಸಿ ಜಡಧೀರಿತಿ । ೭೯ ।

ಎಂದಾಡಿದ ಮಾತುಗಳಿಂದ ಆತನು ಮೋಸಹೋಗಿ ಅಲ್ಲಿಂದೆದ್ದು ಕಾನ್ಯಕುಬ್ಜ ದೇಶದ ಅರಸನ ಬಳಿಗೆ ಹೋಗಿ ತಾನು ಕನ್ಯಾರ್ಥಿಯಾಗಿ ಬಂದೆನೆಂದು ಹೇಳಿದನು ( ೮೩ ). ಆತನಿಗಾ ಅರಸನು ತನ್ನ ೧೦೦ ಕನ್ನೆಯರಲ್ಲಿ ಯಾವಾಕೆಯನ್ನು ಬೇಕೊ ಆಕೆಯನ್ನು ವರಿಸೆಂದಾಗ (೮೫), ಅವರಲ್ಲಿ ೯೯ ಮಂದಿ ತಪೋದಗ್ಧನಾದ ಆತನನ್ನು ನೋಡಿ ಇದೊಂದು ಅರಿಸುಟ್ಟ ಹೆಣವೆಂದು ಹೇವರಿಸೆ, ಆತನು ಶಾನೆ ನಾಚಿ ಅವರನ್ನು ಬಿಟ್ಟು ಅಲ್ಲಿ ದೂಳಾಟದಲ್ಲಿ ಮಗ್ನಳಾಗಿದ್ದ ಕಿರೇಯವಳನ್ನು ಕಂಡು, ಆಕೆಯನ್ನು ಆ ಕಾರಣದಿಂದಲೆ ರೇಣುಕೆ ಎಂದು ಕರೆದು, ಅವಳೊಂದಿಗೆ ಮದುವೆ ಯಾದನು (೯೦). ಆಕೆಯಲ್ಲಿ ಆತನಿಗೆ ಇಂದ್ರರಾಮ ( ಅಂದರೆ ಭಾವಿ ಪರಶುರಾಮ)

ಮತ್ತು ಶ್ವೇತರಾಮ ಎಂಬ ಇಬ್ಬರು ಮಕ್ಕಳಾದರು (೯೨). ಒಂದು ದಿನ ರೇಣುಕೆಯ ಅಣ್ಣನಾದ ಅರಿಂಜಯನೆಂಬ ಮುನಿ ಆಕೆಯನ್ನು ಕಂಡು ಹೋಗಲೆಂದು ಅವಳಲ್ಲಿಗೆ ಬಂದಾಗ ಆತನು ಆಕೆಗೆ ಈಪ್ಸಿತಾರ್ಥ ಪ್ರದಾಯಿನಿಯಾದ ಕಾಮಧೇನು ಎಂಬೊಂದು ವಿದ್ಯೆಯನ್ನೂ ಮಂತ್ರಪುರಸ್ಸರವಾದ ಒಂದು ಕೊಡಲಿಯನ್ನೂ ಕೊಟ್ಟನು—

ಕಾಮಧೇನ್ವಭಿದಾಂ ವಿದ್ಯಾಮೀಪ್ಸಿತಾರ್ಥ ಪ್ರದಾಯಿನೀಮ್ ।
ತಸ್ಯೈ ವಿಶ್ರಾಣಯಾಂ ಚಕ್ರೇ ಸಮಂತ್ರಂ ಪರಶುಂ ಚ ಸಃ । ೯೮ ।

ಆ ಬಳಿಕ ಕೆಲ ಕಾಲನಂತರ ಸಹಸ್ರಬಾಹು ತನ್ನ ಮಗನಾದ ಕೃತವೀರನೊಂದಿಗೆ ತನ್ನ ಭ್ರಾತೃವಾದ ಜಮದಗ್ನಿಯ ಕುಟೀರಕ್ಕೆ ಹೋದಾಗ (೯೯) ಜಮದಗ್ನಿ ತಮಗೆ ನೀಡಿದ ದಿವ್ಯ ಭೋಜನದಿಂದ ಆಶ್ಚರ್ಯಚಕಿತನಾದ ಕೃತವೀರನು ತನ್ನ ತಾಯ ತಂಗಿಯಾದ— 'ಸ್ವಮಾತುರನುಜಾಮ್'— ರೇಣುಕೆಯೊಡನೆ (೧೦೧) ಇಂಥಾ ಭೋಜನವನ್ನು ಹೇಗೆ ಒದಗಿಸಿದೆ ಎಂದು ವಿಚಾರಿಸಿದಾಗ, ಅದೆಲ್ಲವೂ ಕಾಮಧೇನು ಎಂಬಾ ವಿದ್ಯೆಯಿಂದ ಪ್ರಾಪ್ತಿಸಿತು ಎಂದಳು (೧೦೨). ಒಡನೆಯೇ ಆತನು ತನಗೆ ಆ ಧೇನುವನ್ನು ಕೊಡಬೇಕೆಂದಾಗ, ಅದು ವರ್ಣಾಶ್ರಮದಲ್ಲಿರುವ ನಿನ್ನ ಹಿರಿಯನ ಹೋಮಧೇನು, ಅದನ್ನು ನೀನೆಳಸುವುದು ಉಚಿತವಲ್ಲ (೧೦೩) ಎಂದು ಮರುನುಡಿದ ಆಕೆಯ ಮಾತನ್ನು ಆತನು ಧಿಕ್ಕರಿಸಿ, ಜಮದಗ್ನಿಯನ್ನು ಕೊಂದು ಆ ಧೇನುವನ್ನು ಎಳಕೊಂಡು ಹೋದನು (೧೦೬). ಆಗ್ಗೆ ವನದಲ್ಲಿ ಕಂದ ಮೂಲಾದಿಗಳನ್ನು ತರಹೋದ ಆಕೆಯ ಮಕ್ಕಳು ಮರಳಿ ಬಂದು, ಅಳುತ್ತಿರುವ ತಾಯಿಯಿಂದ ನಡೆದ ಸಮಾಚಾರವೆಲ್ಲವನ್ನು ತಿಳಕೊಂಡು, ನೆಟ್ಟಗೆ ಅಯೋಧ್ಯೆಗೆ ಹೋಗಿ ಕೃತವೀರನೊಡನೆ ಕಾದಾಡಿ (೧೧೧), ಸಹಸ್ರಬಾಹುವನ್ನು ಕೊಂದರು (೧೧೨). ಆ ಮೇಲೆ ಪರಶುರಾಮನು ಅವನ ಸಂತಾನವನ್ನು ನಿಃಶೇಷಗೆಯ್ವೆನೆಂದು ಉದ್ಯುಕ್ತನಾಗಲು (೧೧೩), ರಾಜ್ಞಿಯಾದ ಚಿತ್ರಮತಿ ಎಂಬಾಕೆ ಆಗ್ಗೆ ಬಸುರಿಯಾಗಿದ್ದುದರಿಂದ (೧೧೫), ಆ ಗರ್ಭವನ್ನು ಕಾಯಬೇಕೆಂದು ಆಕೆಯ ಸೋದರನಾದ ಶಾಂಡಿಲ್ಯನೆಂಬ ತಾಪಸನು ಅವಳನ್ನು 'ಸುಬಂಧ್ವಾಖ್ಯ ನಿರ್ಗ್ರಂಥ ಮುನೇಃ' (೧೧೭), ಸುಬಂಧು ಎಂಬ ನಿರ್ಗ್ರಂಥ (ಅಂದರೆ ದಿಗಂಬರ ಜೈನ) ಮುನಿಯ ಆರಯ್ಕೆಯಲ್ಲಿ ಇರಿಸಿದನು. ಹಾಗೆಯೆ ಅವಳು ಗಂಡು ಕೂಸನ್ನು ಹೆತ್ತಾಗ ಅದು ಮುಂದೆ ತನ್ನ ೧೬ ನೆಯ ವಯಸ್ಸಿನಲ್ಲಿ ಭರತಖಂಡದ ಚಕ್ರವರ್ತಿಯಾಗಲುಳ್ಳದೆಂದು ಅರಿತು ವನದೇವತೆಗಳು ಅದನ್ನು ಸಾಕಿದರು (೧೧೯). ಅನಂತರ ಶಾಂಡಿಲ್ಯನು ಅಲ್ಲಿಗೆ ಮರಳಿ ಬಂದು ತನ್ನ ತಂಗಿಯನ್ನೂ ಮಗುವನ್ನೂ ಮನೆಗೊಯ್ದು ಆ ಮಗುವಿಗೆ ಸುಭೌಮನೆಂದು ಹೆಸರಿಕ್ಕಿ (೧೨೫), ಅದು ಬೆಳೆದು ಬರುವಂತೆ ಸರ್ವ ಶಾಸ್ತ್ರ

ಗಳನ್ನು ಅದಕ್ಕೆ ಕಲಿಸಿ ಅದನ್ನು ಬಹಳ ಮರೆಯಾಗಿ ಸಾಕುತ್ತಿದ್ದನು (೧೨೬). ಇತ್ತ ಆ ರೇಣುಕಾ ಪುತ್ರರಿಬ್ಬರೂ ಸೇರಿ ೨೧ ಬಾರಿ ಕ್ಷತ್ರಿಯರನ್ನು ನಿರ್ಮೂಲಿಸಿ,

ತ್ರಿಸಪ್ತಕೃತ್ವೋ ನಿರ್ಮೂಲಮಾಪಾದ್ಯ ಕ್ಷತ್ರಿಯಾನ್ವಯಮ್ ।೧೨೭।

ತಾವೇ ಈ ಸಮಗ್ರ ಪೃಥ್ವಿಯ ಸಾರ್ವಭೌಮರಾಗಿ ಆಳಹತ್ತಿದರು—

ಸಾರ್ವಭೌಮೀಂ ಶ್ರಿಯಂ ಸಮ್ಯಕ್ ಸಂಭೂಯಾನುಬಭೂವತುಃ ।೧೨೯।

ಒಂದಾನೊಂದು ದಿನ ಪರಶುರಾಮನು ತಮ್ಮ ಶತ್ರು ಆ ಮುಂಚೆಯೆ ಹುಟ್ಟಿರುತ್ತಾನೆಂದೂ ತಾವು ಮಡುಹಿದ ಅರಸರೆಲ್ಲರ ಹಲ್ಲುಗಳನ್ನು ಯಾವಾತನು ಅನ್ನದಂತೆ ಸುಲಭವಾಗಿ ಮೆದ್ದು ಬಿಡುವನೋ ಆತನೇ ಆ ಶತ್ರುವೆಂದೂ

ಭವತಃ ಶತ್ರುರುತ್ಪನ್ನಃ ಪ್ರಯತ್ನೋತ್ರ ವಿಧೀಯತಾಮ್ ।
ಕಃ ಪ್ರತ್ಯಯೋಸ್ಯ ಚೇದ್ವಚ್ಮಿ ತ್ವದ್ಧತಾಖಿಲ ಭೂಭುಜಾಮ್ ।೧೩೦।
ದಂತಾ ಯಸ್ಯಾಶನಂ ಭೂತ್ವಾ ಪರಿಣಂಸ್ಯತ್ಯಸೌ ರಿಪುಃ ।೧೩೧।

ಯಾವನೊಬ್ಬ ನಿಮಿತ್ತಜ್ಞಾನಿಯಿಂದ ತಿಳಕೊಂಡು, ಆ ಶತ್ರುವನ್ನು ಕಂಡುಹಿಡಿಯಲೆಂದು ದೊಡ್ಡದೊಂದು ದಾನಶಾಲೆಯನ್ನು ನಿರ್ಮಿಸಿ (೧೩೨), ಅಲ್ಲಿಗೆ ಭೋಜನಕ್ಕೆ ಬರುವವರ ಮುಂದೆ ಆ ಹಲ್ಲುಗಳನ್ನು ಇರಿಸಿ ಅವರೆಲ್ಲರ ಪರೀಕ್ಷೆಯನ್ನು ಮಾಡಿಸುತ್ತಿದ್ದನು (೧೩೪). ಆಗ್ಗೆ ತನ್ನ ತಂದೆಯ ಮರಣದ ಬಗೆಯನ್ನು ತನ್ನ ತಾಯಿಯಿಂದ ಅರಿತುಕೊಂಡ ಸುಭೌಮನಿಗೆ ಚಕ್ರೇಶಿತ್ವವು ಸಂಪ್ರಾಪ್ತಿಸುವ ಕಾಲವು ಹತ್ತಿರವಾಗುತ್ತಲೇ (೧೩೫), ಆತನು ಒಂದು ದಿನ ರಾಜಪುತ್ರ ಸಮೂಹದಿಂದ ಒಡಗೂಡಿ ಪರಿವ್ರಾಜಕ ವೇಷದಿಂದ ಅಯೋಧ್ಯಾ ನಗರವನ್ನು ಪ್ರವೇಶಿಸಿದನು (೧೩೭).

ತದಾ ಸಾಕೇತ ವಾಸ್ತವ್ಯ ದೇವತಾ ಕ್ರಂದನಂ ಮಹತ್ ।
ಮಹೀಕಂಪೋ ದಿವಾತಾರಾದ್ವಷ್ಟ್ಯಾದಿರಭವತ್ಪುರೇ ।೧೩೮।

ಆ ಸುಭೌಮ ಕುಮಾರನು ಆ ದಾನಶಾಲೆಯನ್ನು ಹೊಕ್ಕು ಊಟಕ್ಕೆ ಕುಳಿತಂದು ಆತನ ಪ್ರಭಾವದಿಂದ ಆ ಹಲ್ಲುಗಳು ತಟ್ಟನೆ ಕಳವೆಯ ಅನ್ನವಾದುವು— 'ದಂತಾಸ್ತಸ್ಯಾನುಭಾವತಃ । ಕಲಮಾನ್ನಂ ತದಾಸನ್' (೧೪೦). ಅದನ್ನು ಕಂಡ ಪರಿವಾರದವರು ಆ ಸೋಜಿಗವನ್ನು ಪರಶುರಾಮನಿಗೆ ಅರುಹುತ್ತಲೇ ಆತನು ಸುಭೌಮನನ್ನು ತನ್ನ ಮುಂದೆ ಎಳತರುವರೆ ಭಟರನ್ನು ಕಳುಹಿಸಿದನು. ಆದರೆ ಅವರು ಅವನನ್ನು ಮುಟ್ಟಲಾರದೆ ಭಯಜ್ವರದಿಂದ ಬಿದ್ದು ಬಿಟ್ಟರು (೧೪೩). ಆಗ್ಗೆ ಪರಶುರಾಮನು ಕ್ರೋಧಾಂಧನಾಗಿ, ತಾನೇ ಅಲ್ಲಿ ಹೋಗಿ ತನ್ನ ಸೈನ್ಯವನ್ನು ಸುಭೌಮನ ಮೇಲೆ ಬಿಟ್ಟಾಗ, ಈ ಭರತಕ್ಷೇತ್ರದ ವ್ಯಂತರದೇವನು—ಜನ್ಮ ಪ್ರಭೃತಿ ತತ್ಪಾತಾ ಭರತವ್ಯಂತರಾಧಿಪಃ (೧೪೫) — ಆತನನ್ನು ಕಾದುದರಿಂದ

ಆ ಸೇನೆ ಅವನ ಮುಂದೆ ನಿಲ್ಲದೆ ಹೋಯಿತು (೧೪೬). ಅದನ್ನು ಕಂಡು ಪರಶು ರಾಮನು ತನ್ನ ಆನೆಯನ್ನು ಅವನ ಮೇಲೆ ಬಿಡುತ್ತಲೆ,

ಸಹಸೈವ ಸುಭೌಮಸ್ಯಾಭ್ಯಭವದ್ಗಂಧವಾರಣಃ ।
ಚಕ್ರಂ ಚ ಸನ್ನಿಧೌ ದಿವ್ಯಂ ಸಾರ್ವಭೌಮತ್ವ ಸಾಧನಮ್ । ೧೪೭ ।

ಸುಭೌಮನಿಗೆ ಅಕಸ್ಮಾತ್ತಾಗಿ ಒಂದು ಗಂಧವಾರಣವೂ ಸಮಗ್ರ ಭೂಮಂಡಲದ ಸಾರ್ವಭೌಮತ್ವದ ಸಾಧನವಾದ ದಿವ್ಯ ಚಕ್ರರತ್ನವೂ ಬಂದು ಸೇರಿದುವು— ಕಿಂ ನ ಸ್ಯಾತ್ ಸನ್ಮುಖೇ ವಿಧೌ (೧೪೮). ಸುಭೌಮನು ಆ ಆನೆಯನ್ನೇರಿ ಆ ಸಹಸ್ರಾರಚಕ್ರವನ್ನು ಕೈಕೊಂಡು ಪರಶುರಾಮನನ್ನು ಎದುರಾಯಿಸುವುದೇ ಪರಶುರಾಮನು ಆತನ ಚಕ್ರದಿಂದ ಹತನಾಗಿ ಲೋಕಾಂತರವನ್ನು ಅಯ್ದಿದನು—

ಚಕ್ರೇಣ ತಂ ಕುಮಾರೋಪಿ ಲೋಕಾಂತರಮಜೀಗಮತ್ । ೧೫೦ ।

ಆ ಮೇಲೆ ಸುಭೌಮನು ಜೈನಪುರಾಣಗಳ ದ್ವಾದಶ ಚಕ್ರವರ್ತಿಗಳಲ್ಲಿ ಲನೆಯ ಚಕ್ರವರ್ತಿಯಾಗಿ ಆಳಿದನು—

ಅರೇಶ ತೀರ್ಥಸಂತಾನಕಾಲೇ ದ್ವಿಶತಕೋಟಿಷು ।
ಸ ದ್ವಾತ್ರಿಂಶತ್ಸು ಜಾತೇಭೂತ್ಸುಭೌಮೋ ವತ್ಸರೇಷ್ವಯಮ್ । ೧೫೧ ।
ಅಭಿಭೂತಾಖಿಲಾರಾತಿರಷ್ಟಮಶ್ಚಕ್ರವರ್ತಿಷು ।೧೫೨।
ಷಟ್ಖಂಡಸ್ಯಾಧಿಪತ್ಯೇನ ಪ್ರಾದುರಾಸೀತ್ ಸ ಚಕ್ರಭೃತ್ । ೧೫೪ ।

ನಮ್ಮ ಪರಶುರಾಮನಂತೆಯೇ ಜೈನ ಪರಶುರಾಮನೂ ಜಮದಗ್ನಿ ರೇಣುಕೆಯರ ಮಗನು, ಜಮದಗ್ನಿಯ ಆಶ್ರಮದಿಂದ ಹೋಮಧೇನುವನ್ನು ಸೆಳಕೊಂಡು ಹೋಗಿದೆ, ಆ ಪರಶುರಾಮನೂ ೨೧ ಸಲ ಕ್ಷತ್ರಿಯರನ್ನು ನಿರ್ಮೂಲಿಸಿದ್ದಾನೆ, ಕೊನೆಗೆ ಆತನಿಗೂ ಸುಭೌಮನೆಂಬ ಕಾರ್ತವೀರ್ಯನಿಗೂ ಯುದ್ಧವಾಗಿದೆ ಎಂಬ ಇಷ್ಟೇ ವಿಷಯಗಳು ವೈದಿಕರ ಮತ್ತು ಜೈನ ಪುರಾಣಗಳಲ್ಲಿ ಸಾಮಾನ್ಯವಾಗಿವೆ ವಿನಾ ಅನ್ಯತ್ರ ನಮ್ಮ ಪುರಾಣಗಳಲ್ಲಿ ಹೇಳಿರುವಂತೆ ಮೊತ್ತಮೊದಲಲ್ಲಿ ಪರಶುರಾಮನು ಶ್ರೀಮನ್ನಾರಾಯಣನ ಅವತಾರ ('ಯಮಾಹುರ್ವಾಸುದೇವಾಂಶಮ್'— ಭಾಗವತ IX. 15. ೧೪), ಜೈನರ ಜಮದಗ್ನಿಯೇ ಕ್ಷತ್ರಿಯನೆಂಬುದರಿಂದ ಅವರ ಪರಶುರಾಮನು ಕ್ಷತ್ರಿಯನಾಗಿರುವಲ್ಲಿ ನಮ್ಮವನು ಜನ್ಮತಃ ಬ್ರಾಹ್ಮಣನು, ನಡುವೆ ನಿಮಿತ್ತತಃ ಕ್ಷತ್ರಿಯ ಧರ್ಮವನ್ನು ಆಶ್ರಯಿಸಿದರೂ ಕಡೆಯ ವರೆಗೆ ಆತನು ಬ್ರಾಹ್ಮಣನೇ, ಜಮದಗ್ನಿಯ ಕಾಮಧೇನುವನ್ನು ಸೆಳಕೊಂಡು ಹೋದಾತನು ಕೃತವೀರನಲ್ಲ, ಸಹಸ್ರಾರ್ಜುನನೆಂಬ ಕಾರ್ತವೀರ್ಯನು—ಕೃತವೀರ್ಯಾತ್ಮಜೋ । ಬಲೀ । ಅರ್ಜುನೋ ನಾಮ ತೇಜಸ್ವೀ ಕ್ಷತ್ರಿಯೋ ಹೈಹಯಾಧಿಪಃ ॥ ದತ್ತಾತ್ರೇಯ ಪ್ರಸಾದೇನ ರಾಜಾ ಬಾಹುಸಹಸ್ರವಾನ್ । (ಶಾಂತಿಪರ್ವ 49, ೩೫-೩೬), ಜೈನರ

ಸಹಸ್ರಬಾಹು ಅಯೋಧ್ಯಾಧಿಪತಿಯಾದರೆ ಬ್ರಾಹ್ಮಣರವನು 'ಹೈಹಯಾನಾಮಧಿಪತಿರರ್ಜುನಃ ಕ್ಷತ್ರಿಯರ್ಷಭಃ' (ಭಾಗವತ IX. 15. ೧೭), ಪರಶುರಾಮನೇ ಆ ಕಾರ್ತವೀರ್ಯನನ್ನು ಕೊಂದುದಲ್ಲದೆ ಕಾರ್ತವೀರ್ಯನು ಪರಶುರಾಮನನ್ನು ಕೊಂದುದಲ್ಲ --

ಜಾಮದಗ್ನ್ಯೇನ ರಾಮೇಣ ಪಿತುರ್ವಧಮನುಸ್ಮೃತಾ ।
ರಾಜಾ ಪರಶುನಾ ಪೂರ್ವಂ ಹೈಹಯಾಧಿಪತಿರ್ಹತಃ ॥
(ಆದಿಪರ್ವ 104. ೧.)

ಭುಜಾನ್ ಕುಠಾರೇಣ......ಚಿಚ್ಛೇದ ರಾಮಃ ॥
ಕೃತ್ತಬಾಹೋಃ ಶಿರಸ್ತಸ್ಯ ಗಿರೇಃ ಶೃಂಗಮಿವಾಹರತ್ ॥
(ಭಾಗವತ IX. 15 ೩೪-೩೫)

ಆ ವಧಾನಂತರ ತಾನೆ ಪರಶುರಾಮನು ೨೧ ಸಾರಿ ಕ್ಷತ್ರಿಯರನ್ನು ನಿರ್ಮೂಲಿಸಿ—

ತ್ರಿಃಸಪ್ತಕೃತ್ವೋ ಯ ಇಮಾಂ ಚಕ್ರೇ ನಿಃಕ್ಷತ್ರಿಯಾಂ ಮಹೀಮ್ ॥
(ಭಾಗವತ IX. 15. ೧೪)

ಈ ಸಮಗ್ರ ಭೂಮಂಡಲವನ್ನು ಕಶ್ಯಪನಿಗೆ ಧಾರೆ ಎರೆದಿತ್ತು—

ಪೃಥಿವೀಂ ಚಾಖಿಲಾಂ ಪ್ರಾಪ್ಯ ಕಶ್ಯಪಾಯ ಮಹಾತ್ಮನೇ ।
ಯಜ್ಞಸ್ಯಾಂತೇ ......... ದಕ್ಷಿಣಾಂ........... ದತ್ವಾ ॥
(ರಾಮಾಯಣ. ಬಾಲಕಾಂಡ 75. ೨)

ತಾನು ಪಶ್ಚಿಮ ಸಮುದ್ರದ ಕರಾವಳಿಗಯ್ದಿ ಅಲ್ಲಿ ತನ್ನ ಆಗ್ನೇಯಾಸ್ತ್ರದಿಂದ ಹೊಸ ಭೂಮಿಯನ್ನು ಸಮುದ್ರನಿಂದ ಸಂಪಾದಿಸಿಕೊಂಡು ಅಲ್ಲಿ ಚಿರಕಾಲ ತಪಸ್ಸುಗೆಯ್ಯುತ್ತಿದ್ದು ನಡುನಡುವೆ ಕಾಲಧರ್ಮೋಚಿತವಾಗಿ ಹೊರಬಂದು ತನ್ನ ಅಪರಾವತಾರವಾದ ಶ್ರೀರಾಮಚಂದ್ರನೊಡನೆ ಕಾದಿ (ರಾಮಾಯಣ, ಬಾಲಕಾಂಡ ಸರ್ಗ ೭೪-೭೬), ಆ ಬಳಿಕ ಭಾರತ ಕಾಲದಲ್ಲಿ ಭೀಷ್ಮನಿಗೆ ಗುರುವಾಗಿದ್ದು ಆತನೊಂದಿಗೂ ಕಾದಿ (ಪಂಪ ಭಾರತ I. ೬೮, ೭೯-೮೦), ಹಾಗೆಯೇ ಕರ್ಣನಿಗೂ ವಿದ್ಯಾಗುರುವಾಗಿದ್ದು (ಪಂ. ಭಾ. I. ೧೦೪), ಸಪ್ತ ಸ್ಥಿರಜೀವಿಗಳಲ್ಲಿ ಒಬ್ಬನಾದ ಕಾರಣ ತನಗೆ ಸಾವಿಲ್ಲದುದರಿಂದ—

ಅಶ್ವತ್ಥಾಮಾ ಬಲಿರ್ವ್ಯಾಸೋ ಹನೂಮಾಂಶ್ಚ ವಿಭೀಷಣಃ ।
ಕೃಪಶ್ಚ ಪರಶುರಾಮಶ್ಚ ಸಪ್ತೈತೇ ಸ್ಥಿರಜೀವಿನಃ ॥

ಕೊನೆಗೆ ತಾನು ಮಹೇಂದ್ರಾಚಲಕ್ಕೆ ಹೋಗಿ ಅಲ್ಲಿ ಇನ್ನೂ ತಪಸ್ಸನ್ನು ಮಾಡುತ್ತಾನೆ —

ಆಸ್ತೇದ್ಯಾಪಿ ಮಹೇಂದ್ರಾದ್ರೌ ನ್ಯಸ್ತದಂಡಃ ಪ್ರಶಾಂತಧೀಃ ॥
(ಭಾಗವತ IX. 16. ೨೬)

ಮಹೇಂದ್ರಸಿಲಯಸ್ತಪೋಬಲ ಸಮನ್ವಿತಃ ಸ್ಥಿತೋಸ್ಮಿ ॥
(ರಾಮಾಯಣ ಬಾಲಕಾಂಡ 76. ೨೭)

ಎಂಬ ನಮ್ಮ ನಂಬುಗೆಯ ಎಷ್ಟೋ ವಿಷಯಗಳಿಲ್ಲ ಜೈನರ ಪರಶುರಾಮಾಖ್ಯಾನದಲ್ಲಿ ಇಲ್ಲ. ಅದಲ್ಲದೆ ಜೈನರ ಪರಶುರಾಮನು ಜೈನ ಧರ್ಮದ ತ್ರಿಷಷ್ಟಿಶಲಾಕಪುರುಷರೆಂಬ ಆ ೬೩ ಶ್ರೇಷ್ಠತಮರಲ್ಲಿ ಯಾವನೊಬ್ಬನೂ ಅಲ್ಲ, ಅವನನ್ನು ಕೊಂದ ಸುಭೌಮನಾದರೊ ಆ ೬೩ ವರಲ್ಲಿ ಸೇರಿದ ಜೈನ ದ್ವಾದಶ ಚಕ್ರವರ್ತಿಗಳಲ್ಲಿ ಎಂಟನೆಯವನು (ಅಜಿತ XI. ೧೯ ಗದ್ಯ). ಇವೆಲ್ಲ ಕಾರಣಗಳಿಂದ ಯಾವ ದೃಷ್ಟಿಯಿಂದಲೂ ಶ್ರೇಷ್ಠವ್ಯಕ್ತಿ ಎನಿಸಲಾರದ ಜೈನ ಪರಶುರಾಮನನ್ನು ಉದ್ದೇಶಿಸಿ ಮಹಾಕವಿಯಾದ ರನ್ನನು ಕಾವ್ಯವನ್ನು ಬರೆದಾನೇ? ಎಂದು ಶಂಕೆಯಾಗದಿರದು.

ರನ್ನನಿಗೆ ಪರಶುರಾಮನಲ್ಲಿ ತುಂಬ ಗೌರವವಿತ್ತೆಂಬುದು ಅವನ ಗದಾಯುದ್ಧದಲ್ಲಿಯ ಈ ಮಾತುಗಳಿಂದ ವ್ಯಕ್ತವಾಗುತ್ತದೆ —

(೧) ಪರಶುರಾಮನಿನಾ ಕುವರರಂಕರಾಮನಿಂ (I. ೧೯),

(೨) ಹುತವಹಬಾಣದಿಂದೆಮಿಸೆ ತೂಳ್ದುದು..... ಆ ಪರಶುರಾಮನಿನ್ (I. ೨೪),

(೩) ಮುನಿದಿರ್ಪತ್ತೊಂದು ಸೂೞ್ ಕ್ಷತ್ರಿಯರನಱಸಿ ಕೊಂದಿಕ್ಕಿದಾ ರಾಮನಿಂ (I. ೨೮),

(೪) ಮುನ್ನಂ ಪರಶುರಾಮನೀ ನೆಲದೊಳುಳ್ಳರಸುಮಕ್ಕಳೆಲ್ಲ
ರುಮನಿರ್ಪತ್ತೊಂದು ಸೂಟ್ಟರೆಗಂ ಪಿಳ್ಳೆ ಪೆಸರಿಲ್ಲದಂತು
ಕೊಂದವಂದಿರ ನೊರೆ ನೆತ್ತರೊಳ್ ತೀವಿ ತನ್ನ ತಾಯ್ಗೆ
ನೀರಿೞಿಯುವುಂ ತಂದೆಗೆ ನೀರ್ಗುಡಲುಮೆಂದು ಮಾಡಿದ
ಸ್ಯಮಂತ ಪಂಚಕಗಳೆಂಬ ಪೆಸರ ಪೆರ್ಮಡುಗಳ್[೧] (VI. ೨೮ ಗದ್ಯ)

ಆವರೆ ಯಾವ ಪರಶುರಾಮನಲ್ಲಿ? ವೈದಿಕ ಪರಶುರಾಮನಲ್ಲಿಯೊ? ಜೈನ ಪರಶುರಾಮನಲ್ಲಿಯೊ? ಎಂಬುದನ್ನು ಕೊಂಚ ನಿಧಾನವಾಗಿ ವಿವೇಚಿಸಿದರೆ, 'ಹುತವಹ ಬಾಣದಿಂದಮಿಸೆ ತೂಳ್ದುದು' ಎಂಬ ಆದೊಂದೇ ಮಾತಿಂದ ರನ್ನನ ಮನೋಗ್ರಾಹಿಯಾದ ಪರಶುರಾಮನೆಂದರೆ ಪಶ್ಚಿಮಸಮುದ್ರವನ್ನು ತನ್ನ ಆಗ್ನೇಯಾಸ್ತ್ರದಿಂದ ಹಿಮ್ಮೆಟ್ಟಿಸಿ ಆದರೆದೆಯಿಂದ ಒಣನೆಲವನ್ನು ಸೆಳೆತೆಗೆದು ಅಲ್ಲಿ ಶೂರ್ಪಾರಕ ಕ್ಷೇತ್ರವೆಂಬ ಕೊಂಕಣದೇಶದ ಹೊಸ ಭೂಮಿಯನ್ನು ನಿರ್ಮಿಸಿದ—

ತತಃ ಶೂರ್ಪಾರಕಂ ದೇಶಂ ಸಾಗರಸ್ತಸ್ಯ ನಿರ್ಮಮೇ ।
ಸಹಸಾ ಜಾಮದಗ್ನ್ಯಸ್ಯ ಸೋಪರಾಂತ ಮಹೀತಲಮ್ ॥
(ಶಾಂತಿ ಪರ್ವ 49. ೬೭)

---

[೧] ತ್ರಿಃಸಪ್ತಕೃತ್ವಃ ಪೃಥಿವೀಂ ಕೃತ್ವಾ ನಿಃಕ್ಷತ್ರಿಯಾಂ ಪ್ರಭುಃ ।
ಸ್ಯಮಂತಪಂಚಕೇ ಚಕ್ರೇ ಶೋಣಿತೋದಾನ್ ಹ್ರದಾನ್ನವ ॥
(ಭಾಗವತ IX. 16. ೧೯)

ವೈದಿಕ ಪರಶುರಾಮನೇ ವಿನಾ ಜೈನ ಪುರಾಣದಾತನಲ್ಲವೆಂದು ನಿಶ್ಚಿತವಾಗುತ್ತದೆ. ಅಥವಾ ಒಂದೇ ಮಾತಿಂದ ಹೇಳುವುದಾದರೆ, ರನ್ನನಂಥಾ ವೀರಕವಿ ತನ್ನ ಕಾವ್ಯದ ನಾಯಕನನ್ನಾಗಿ ಆಯ್ದುಕೊಳ್ಳುವುದಾದರೆ, ಅಂಥಾ ನಾಯಕನಾಗ ತಕ್ಕವನು ಸ್ವಯಂ ಅವತಾರಪುರುಷನೂ ಅಪ್ರತಿಮವೀರನೂ ಜಗಜ್ಜೇತನೂ ಸ್ಥಿರಜೀವಿಯೂ ಮೊದಲಾದ ವೈದಿಕ ಪರಶುರಾಮನಾಗಿರಬೇಕೊ ? ಅಲ್ಲ, ಜೀವವನ್ನು ಕೈಯ್ಯಲ್ಲಿ ಕಟ್ಟಿಕೊಂಡು ತನ್ನ ಶತ್ರು ಎಲ್ಲಿ ಹುಟ್ಟಿರುವನೆಂದು ತಿಳಕೊಳ್ಳಲಿಕ್ಕೆ ಪರ್ಯುತ್ಸುಕನಾಗಿರುವ, ತಿಳಕೊಂಡು ಆತನನ್ನು ಯುಕ್ತಿ ವಿಶೇಷದಿಂದ ಶೋಧಿಸಿ ತೆಗೆವುದಕ್ಕೆ ಕಳವಳಿಸುತ್ತಿರುವ, ಆ ಬಳಿಕ ಅವನೊಡನೆ ವಿನಾಕಾರಣದಿಂದ ಕಾದಾಡಿ ಮಡಿವ ಜೈನ ಪರಶುರಾಮನೊ ? ಇಷ್ಟನ್ನೇ ಆಲೋಚಿಸಿದರೆ ಸಾಕು, ರನ್ನನು ತನ್ನ ಪರಶುರಾಮಚರಿತದಲ್ಲಿ ವೈದಿಕ ಪರುಶುರಾಮನ ಕಥೆಯನ್ನೇ ಹೇಳಿರಬೇಕಲ್ಲದೆ ಜೈನ ಪರಶುರಾಮನ ಕಥೆಯನ್ನಲ್ಲ ಎಂದು ವ್ಯಕ್ತವಾಗುತ್ತದೆ. ಆದಕಾರಣ ಜೈನ ಪರಶುರಾಮನನ್ನು ಸದೆಬಡಿದ ಸುಭೌಮನು ತ್ರಿಷಷ್ಟಿ ಶಲಾಕಪುರುಷರಲ್ಲಿ ಒಬ್ಬನಲ್ಲದೆ ಜೈನ ಪರಶುರಾಮನೇ ಆ ೬೩ ಮಹಾಪುರುಷರಲ್ಲಿ ಯಾವೊಬ್ಬನೂ ಅಲ್ಲ, ರನ್ನನ ಕೃತಿಯ ಹೆಸರೂ ಪರಶುರಾಮಚರಿತ ಎಂದಿರುವಲ್ಲಿ ಅದರ ಕಥಾನಾಯಕನು ಪ್ರಥಮ ದೃಷ್ಟಿಗೆ ತೋರುವ ಮಟ್ಟಿಗೆ ಪರಶುರಾಮನಾಗಿರಬೇಕಲ್ಲದೆ ಬೇರೊಬ್ಬನಾಗಿರನೆಂಬುದರಿಂದ, ಅದು ಅವನ ವಿಜಯದ ಕಥೆಯಾಗಿರಬೇಕಲ್ಲದೆ ಅಪಜಯದ ಕಥೆಯಲ್ಲ, ಅತಏವ ಅದು ಸುಭೌಮನಿಂದ ಮಡುಹಲ್ಪಟ್ಟ ಪರಶುರಾಮನನ್ನು ಕುರಿತಲ್ಲ ಎಂದು ತೋರುವುದರಿಂದ, ಅದರ ನಾಯಕನು ರನ್ನನ ವೀರರಸೋಪಾಸನೆಗೆ ತಕ್ಕಂತೆ ಕೇವಲ ವೀರರಸಮೂರ್ತಿಯಾದ ವೈದಿಕ ಪರಶುರಾಮನೇ ವಿನಾ ಅವನ ತೂಕಕ್ಕೆ ಬಾರದ ಜೈನ ಪರಶುರಾಮನಲ್ಲ ಎಂದು ನಾನು 'ದೇಶರಂಜನ' ದಲ್ಲಿ (I. 2. ಪು. ೯-೧೦) ಹೇಳಿದೆ. ಆದರೆ ಈಗಲಾದರೊ ಇಲ್ಲಿ ಹೇಳಲ್ಪಡುವ ಈ ಕಾರಣಗಳಿಂದ ರನ್ನನ ಪರಶುರಾಮಚರಿತವು ಜೈನ ಕಾವ್ಯವೆಂದೇ ನನಗೆ ತೋರುತ್ತದೆ.

ಅಜಿತಪುರಾಣದಲ್ಲಿಯ (XII. ೪೨)

ಕರಮೆಸೆದುವು ರತ್ನತ್ರಯ
ಪರಿಕಲ್ಪದೆ ಪರಶುರಾಮಚರಿತಂ ಚಕ್ರೇ ।
ಶ್ವರಚರಿತಮಜಿತ ತೀರ್ಥೇ
ಶ್ವರಚರಿತಂ ರತ್ನನಿಂದೆ ಭುವನತ್ರಯದೊಳ್ ॥

ಎಂಬೀ ಹೇಳಿಕೆಯಿಂದ ಇವೈದು ಬಲವಾದ ಹಾಗೂ ಹೆಚ್ಚುಕಡಿಮೆ ಅಸಂದಿಗ್ಧವೆನಿಸುವ ಅನುಮಾನಗಳು ಉಂಟಾಗುತ್ತವೆ—

(೧) ಅಜಿತಪುರಾಣವು ರಚಿಸಲ್ಪಟ್ಟ ಕ್ರಿ. ಶ. 993 ಕ್ಕಿಂತ ಮುಂಚೆಯೇ ಪರಶುರಾಮಚರಿತವೂ ಚಕ್ರೇಶ್ವರಚರಿತವೂ ರಚಿತವಾಗಿರಬೇಕು;

(೨) ಈ ಕಂದದಲ್ಲಿ ಪರಶುರಾಮಚರಿತವನ್ನು ಚಕ್ರೇಶ್ವರಚರಿತದ ಮುಂಚೆ ಹೇಳಿರುವುದರಿಂದ, ಪರಶುರಾಮಚರಿತವು ಚಕ್ರೇಶ್ವರಚರಿತಕ್ಕಿಂತ ಮುಂಚೆ ರಚಿಸಲ್ಪಟ್ಟಿರಬೇಕು;

(೩) ಅಜಿತಪುರಾಣವನ್ನು ರಚಿಸುವ ಮುಂಚೆ ಕನ್ನಡ ಸಾಹಿತ್ಯದ ಮಟ್ಟಿಗೆ ರನ್ನನು ಇವೆರಡೇ ಕಾವ್ಯಗಳನ್ನಲ್ಲದೆ ಮತ್ತಾವ ಕಾವ್ಯವನ್ನೂ ರಚಿಸಿರಲಾರನು.

ಈ ಮೂರು ನಿರ್ಣಯಗಳೂ ಸ್ವಯಂವ್ಯಕ್ತವಿರುವುದರಿಂದ ಇವನ್ನು ಬೇರೆ ವಿವರಿಸಬೇಕೆಂದಿಲ್ಲ.

(೪) ಈ ಮೂರೂ ಕಾವ್ಯಗಳನ್ನು ಜೈನ ಸಮಯದಲ್ಲಿ ಅತ್ಯಂತ ಪವಿತ್ರವೆನಿಸುವ ತ್ರಿರತ್ನಗಳಿಗೆ ಏಕರೀತಿಯಾಗಿ ಹೋಲಿಸಿರುವುದರಿಂದ, ಇವಲ್ಲಿ ಜೈನ ಧರ್ಮಗ್ರಂಥವೆಂದು ಪ್ರತ್ಯಕ್ಷವಿರುವ ಅಜಿತಪುರಾಣವೆಂತೋ ಅಂತೆಯೇ ಪರುಶುರಾಮಚರಿತವೂ ಚಕ್ರೇಶ್ವರಚರಿತವೂ ಜೈನಧರ್ಮದ ಕಾವ್ಯಗಳಾಗಿರಬೇಕು;

(೫) ಆದರೆ ಪ್ರತ್ಯಕ್ಷ ತೀರ್ಥಂಕರ ಚರಿತ್ರವಾಗಿರುವ ಅಜಿತಪುರಾಣದಂತೆ ಪರುಶುರಾಮಚರಿತವೂ ಚಕ್ರೇಶ್ವರಚರಿತವೂ ತೀರ್ಥಂಕರರ ಆಖ್ಯಾನಗಳಾಗಿರದೆ, ಜೈನ ಧರ್ಮದ ತೀರ್ಥಂಕರರಿಂದ ಭಿನ್ನರಾದ ಇತರ ಶಲಾಕ ಪುರುಷರನ್ನು ಕುರಿತಾಗಿರಬೇಕು.

ಈಗ ಕೊನೆಯ ಇವೆರಡು ಅನುಮಾನಗಳನ್ನು ವಿಶದೀಕರಿಸೋಣ. ಪುರಾಣ ತಿಲಕವೆಂಬ ಅಜಿತಪುರಾಣವು ( ಅಜಿತ I. ೭೮ ) ಹೇಗೂ ಜಿನಾಗಮಗ್ರಂಥವೆಂದೂ ತೀರ್ಥಂಕರ ಚರಿತ್ರವೆಂದೂ ಪ್ರತ್ಯಕ್ಷವಿರುವುದರಿಂದ, ಜೈನ ಸಮಯ ದೃಷ್ಟಿಯಿಂದ ಲೋಕೋತ್ತರವೆನಿಸುವ ಅದರೊಂದಿಗೆ, ಹಾಗೂ ಅದರಲ್ಲಿ, ಹೇಳಲ್ಪಟ್ಟಿರುವ ಪರುಶುರಾಮಚರಿತವೂ ಚಕ್ರೇಶ್ವರಚರಿತವೂ ಅದರಂತೆಯೇ ಲೋಕೋತ್ತರವೇ ಆಗಿರಬೇಕೋ ? ಜೈನೇತರವೋ ? ಪಂಪನ ಲೌಕಿಕ ಕಾವ್ಯವಾದ ವಿಕ್ರಮಾರ್ಜುನ ವಿಜಯವೆಂಬ ಪಂಪಭಾರತದಲ್ಲಿ (XIV. ೬೦) ಆತನ ಜಿನಾಗಮಕೃತಿಯಾದ ಆದಿಪುರಾಣದ ಹೆಸರೂ ಪೊನ್ನನ ಲೋಕೋತ್ತರ ಕೃತಿಯಾದ ಶಾಂತಿಪುರಾಣದಲ್ಲಿ (XII. ೬೫) ಆತನ ಲೌಕಿಕ ಗ್ರಂಥವಾದ ಭುವನೈಕರಾಮಾಭ್ಯುದಯದ ಹೆಸರೂ ಇವೆಯಾದರೂ ಅವರಂತೆಯೇ ಜಿನಸಮಯದೀಪಕನೆಂಬ (ಅಜಿತXI. ೩೭)ರನ್ನನ ಲೌಕಿಕ ಕೃತಿಯಾದ ಗದಾಯುದ್ಧದಲ್ಲಿ (I. ೩೮)

ಆರಾತೀಯ ಕವೀಶ್ವರ
ರಾರುಂ ಮುನ್ನಾರ್ತರಿಲ್ಲ ವಾಗ್ದೇವಿಯ ಭಂ ।
ಡಾರದ ಮುದ್ರೆಯನೊಡೆದಂ
ಸಾರಸ್ವತಮೆನಿಪ ಕವಿತೆಯೊಳ್ ಕವಿರತ್ನಂ ॥

ಎಂಬ ಕಂದದ 'ಸಾರಸ್ವತಮೆನಿಪ ಕವಿತೆ' ಎಂಬಲ್ಲಿ ಅನಂತನಾಥ ಪುರಾಣದಲ್ಲಿ (XIV. ೭೭) 'ರನ್ನಂ ವೈಯಾಕರಣಂ' ಎಂದೂ ತನ್ನ ಅಜಿತಪುರಾಣದಲ್ಲಿಯೇ (XII. ೪೧)

ಅಭಿಮತ ಜೈನೇಂದ್ರವಚೋ
ವಿಭವಂ ಶಬ್ದಾನುಶಾಸನಪ್ರಭವವಚೋ ।
ವಿಭವವೊಡನಸೆಯೆ ರಂಜಿಪ
ನುಭಯ ವ್ಯಾಕರಣ ಪಂಡಿತಂ ಕವಿರತ್ನಂ ॥

ಎಂದೂ ಇರುವೀತನು, ನಾನು ಈ ಮೊದಲು ಹೇಳಿರುವಂತೆ (ಉದಯಭಾರತ II. 3 ಪು ೬೮--೬೯) ತಾನು ರಚಿಸಿದ ಉಭಯವ್ಯಾಕರಣವನ್ನು ಕುರಿತು ಹೇಳಿರುವನಲ್ಲದೆ, ಗದಾಯುದ್ಧದ ಆ ಕಂದದಲ್ಲಾಗಲಿ, ಆ ಕಾವ್ಯದಲ್ಲಿ ಬೇರೆಲ್ಲಿಯಾಗಲಿ ಸ್ವಧರ್ಮಗ್ರಂಥವಾದ ಅಜಿತಪುರಾಣವನ್ನು ಹೇಗೂ ಹೇಳಿಲ್ಲವಷ್ಟೇ, ಪರಶುರಾಮಚರಿತವನ್ನೂ ಚಕ್ರೇಶ್ವರಚರಿತವನ್ನೂ ಹೇಳಿಲ್ಲದಿರುವುದರಿಂದ ಅವೂ ಅವನ ಅಜಿತಪುರಾಣದಂತೆ ಜೈನಸಮಯದ ಕಾವ್ಯಗಳೇ ಆಗಿರಬೇಕೊ? ಜೈನೇತರವೊ? ಇವೆಲ್ಲವಕ್ಕೂ ಮೇಲಾಗಿ ವೈದಿಕಧರ್ಮಿಯನಾದ ಪಡುವಣ ಚಾಳುಕ್ಯ ತೈಲಪನಿಂದ ಕವಿಚಕ್ರವರ್ತಿ ಎಂಬ ಬಿರುದನ್ನು ಪಡೆದ ರನ್ನನು (ಗದಾ. I. ೩೭) ಅವನ ಆಶ್ರಯದಲ್ಲಿ ಅವನ ಆಸ್ಥಾನದಲ್ಲಿಯೇ ಇದ್ದಂದು ಕೂಡ ರಚಿಸಿದ ಅಜಿತ ಪುರಾಣದ (II)

ಪೊಲ್ಲಮೆ ಪರಮತವೊಳ್ ಫಲ
ಮಿಲ್ಲವಱಿಕೊಳ್ತೊಡರ್ದು ಕಿಡದಿರೆಲೆ ಜೀವನೆ ನೀ । ೬೪ ।
ಮೇಲೆನಿಸುವ ಜಿನಧರ್ಮಂ
ಪೋಲದು ಪೆಱಪೆಱರ ಪೇೞ್ದ ಧರ್ಮದ ತೆಱನಂ ।
ಪಾಲೆಂಬ ತೆಱವೆ ಪಶುವಿನ
ಪಾಲಂ ಪೋಲುವುದೆ ನಾಯ ಕಳ್ಳಿಯ ಪಾಲ್ಗಳ್ । ೭೭ ।
ಭವಭವದೊಳ್ ಪೆರ್ಚಿದ ಕೆ
ರ್ಚುವಿರ್ದ ಮಿಥ್ಯಾತ್ವದವರ್ಗೆ ಜಿನಧರ್ಮಕಥಾ ।
ಶ್ರವಣಂ ಪ್ರೈತ್ತಿಕವಾಗಿ
ರ್ದವರ್ಗೆ ಪಾಲ್ ಕಯ್ಪೆಯಪ್ಪವೊಲ್ ಕಯ್ಪೆ ವಲಂ । ೯೨ ।

ಎಂಬೀ ಮಾತುಗಳಲ್ಲಿಯ 'ಪರಮತ,' 'ಪೆಱಪೆಱರ ಪೇೞ್ದ ಧರ್ಮ,' 'ಮಿಥ್ಯಾತ್ವ' ಎಂದರೆ ಕರ್ಣಾಟಕದ ಮಟ್ಟಿಗಾದರೂ ಸನಾತನ ವೈದಿಕ ಧರ್ಮವಲ್ಲವೆ ಮತ್ತಾ

ವುದು? ಅದನ್ನಲ್ಲವೆ ರನ್ನನು ನಾಯು ಹಾಲು-ಕಳ್ಳಿಯ ಹಾಲು ಎಂದಿರುವನು? ಎಂದಷ್ಟೇ ಮನವರಿಸಿದರೆ ಸಾಕು, ಆಗಲಾದರೂ ವೈದಿಕ ಧರ್ಮದಲ್ಲಿ ಇಷ್ಟು ಹೇವ ವಿದ್ದು ತನ್ನ ಧರ್ಮವಷ್ಟೇ ಧರ್ಮವೆಂದು ನಂಬಿ 'ಅನ್ಯಮತ ಪ್ರಚಂಡವಿಷ' (ಅಜಿತ I. ೯೩) ಎಂದು ಹೀಗಳೆದಾತನು ಆವರೆಗೆ ಜೈನೇತರ ಕೃತಿಗಳನ್ನು ಬರೆದಾನೆ ? ಅಥವಾ ಒಂದು ವೇಳೆ ಬರೆದಿದ್ದನೆಂದು ವಿತರ್ಕಮಾತ್ರವಾಗಿ ಒಪ್ಪಿ ಕೊಂಡರೂ ಅವನ್ನು ಸ್ವಧರ್ಮದ ಪೂಜ್ಯತಮವಾದ ತ್ರಿರತ್ನಗಳಿಗೆ ಹೋಲಿಸುವನೆ? ಅವನ್ನು ಸ್ವಧರ್ಮದ ಪವಿತ್ರ ಗ್ರಂಥವಾದ ಪುರಾಣತಿಲಕವೆಂಬ ಅಜಿತಪುರಾಣದಲ್ಲಿ ಹೆಸರಿಸುತ್ತಿದ್ದನೆ? ಎಂದು ಸಹಜವಾಗಿ ಸಕಾರಣವಾಗಿ ಶಂಕೆಯಾಗುವುದರಿಂದ ಅವನ ಪರಶುರಾಮಚರಿತವೂ (ನಾನು ಈ ಮೊದಲು ಹೇಳಿರುವಂತೆ) ಚಕ್ರೇಶ್ವರ ಚರಿತವೂ ಜೈನ ಧರ್ಮ ಗ್ರಂಥಗಳೇ ವಿನಾ ಅವನ ಗದಾಯುದ್ಧದಂತೆ ಜೈನೇತರ ವಲ್ಲ ಎಂದೇ ಕಂಡಿತವೆಂದು ನನಗೀಗ ತೋರುತ್ತದೆ.

ಹೀಗೆ ಇವು ಜೈನಧರ್ಮಗ್ರಂಥಗಳೇ ಆದರೂ ಇವಲ್ಲಿ ಯಾವುದೂ ತೀರ್ಥಂಕರ ಚರಿತ್ರವಲ್ಲ. ಏಕೆಂದರೆ ಪರಶುರಾಮಚರಿತವೆಂಬ ಆ ಹೆಸರಿಂದಲೆ ತೀರ್ಥಂಕರ ಚರಿತ್ರವಲ್ಲ ಎಂದು ಸ್ಪಷ್ಟವಾಗುವ ಪರಶುರಾಮಚರಿತದಲ್ಲಿ ಯಾವೊಬ್ಬ ತೀರ್ಥಂಕ ರನ, ಪ್ರಾಯಶಃ ಜೈನಪರಶುರಾಮನ ಹಿಂದೆಯೇ ಆಗಿ ಹೋದ ಅರನಾಥ ತೀರ್ಥಂ ಕರನ, ಕಥೆಯೂ ಹೇಳಲ್ಪಟ್ಟಿದ್ದರೆ, ಜೈನರ ಧರ್ಮದೃಷ್ಟಿಯಿಂದ ತೀರ್ಥಂಕರರ ಕಥೆಗಳೇ ಮಿಕ್ಕವುಗಳಿಗಿಂತ, ಮಿಕ್ಕ ಶಲಾಕ ಪುರುಷರ ಕಥೆಗಳಿಗಿಂತಲೂ, ಪವಿತ್ರವೂ ಪ್ರಧಾನವೂ ಆಗಿರುವುದರಿಂದ, ರನ್ನನದೇ ಅಜಿತಪುರಾಣದಲ್ಲಿ (IX ರಿಂದ XI) ಅಜಿತತೀರ್ಥಂಕರನ ಕಥೆಗೆ ಉಪಕಥೆಯಾಗಿ ಸಗರಚಕ್ರೇಶ್ವರನ ಕಥೆಯೂ ಜನ್ನನ ಅನಂತನಾಥ ಪುರಾಣದಲ್ಲಿ (XII ರಿಂದ XIV) ತೀರ್ಥಂಕರನಾದ ಅನಂತನಾಥನ ಕಥೆಗೆ ಉಪಕಥೆಯಾಗಿ ತ್ರಿಷಷ್ಟಿ ಶಲಾಕಪುರುಷರಲ್ಲಿಯ ನವ ವಾಸುದೇವರಲ್ಲಿ ಒಬ್ಬ ನಾದ (ಅಜಿತ XI. ೨೦ ಗದ್ಯ, ಪು. ೧೮೩) ಜೈನ ಕೃಷ್ಣನ ಕಥೆಯೂ ಗೌಣವಾಗಿ ಹೇಳಲ್ಪಟ್ಟಿರುವಂತೆ, ಪರಶುರಾಮಚರಿತದಲ್ಲಿ ಅರನಾಥನ ಕಥೆ ಪ್ರಧಾನವಾಗಿಯೂ ತ್ರಿಷಷ್ಟಿಶಲಾಕಪುರುಷರಲ್ಲಿ ಯಾವೊಬ್ಬನೂ ಅಲ್ಲದ ಜೈನಪರಶುರಾಮನಕಥೆ ಗೌಣವಾ ಗಿಯೂ ಹೇಳಲ್ಪಟ್ಟು ಆ ಕವಿತೆ ಅರನಾಥಪುರಾಣವೊ ಅರನಾಥಚರಿತಪುರಾಣವೊ[1]

---

೧. ಜೈನ ಪಂಪನು ತನ್ನ ವೈದಿಕ ಭಾರತವನ್ನು ಪುರಾಣವೆಂದಿಲ್ಲ, ಜೈನ ರನ್ನನೂ ತನ್ನ ಗದಾ ಯುದ್ಧವನ್ನು ಪುರಾಣವೆಂದಿಲ್ಲ. ಜೈನ ನಾಗಚಂದ್ರನು ತನ್ನ ರಾಮಾಯಣವನ್ನು ರಾಮ ಚಂದ್ರಚರಿತಪುರಾಣ ಎಂದಿರುವನಾದರೆ, ಅದು ಜೈನರ ತ್ರಿಷಷ್ಟಿ ಶಲಾಕಪುರುಷರಲ್ಲಿಯ ಒಂಬತ್ತು ಬಲದೇವರಲ್ಲಿ (ಅಜಿತ XI. ೨೦ ಗದ್ಯ) ಒಬ್ಬನಾದ ರಾಮ ಜಿನನ (ಪಂ. ರಾ. XVI. ೯೫) ಅಭಿರಾಮ ಜೈನ ಕಥೆಯಲ್ಲದೆ (ಪಂ. ರಾ. XVI. ೯೭) ವೈದಿಕಧರ್ಮಿಯರ ರಾಮಾಯಣವಲ್ಲ.

ಎಂದು ತಾನೆ ಕರೆಯಲ್ಪಡುತ್ತಿತ್ತಲ್ಲದೆ, ಆ ತೀರ್ಥಂಕರನ ಕಥೆಯನ್ನು ಅದರಲ್ಲಿ ಗೌಣವಾಗಿಸುತ್ತಲೂ ಇದ್ದಿಲ್ಲ, ಆತನ ಹೆಸರನ್ನು ಬಿಟ್ಟು ಅದಕ್ಕೆ ಪರಶು ರಾಮನ ಹೆಸರನ್ನು ಕೊಡುತ್ತಲೂ ಇದ್ದಿಲ್ಲ. ಹಾಗೆಯೇ ೨೪ ತೀರ್ಥಂಕರರಲ್ಲಿ ಶಾಂತಿನಾಥ, ಕುಂಥುನಾಥ ಹಾಗೂ ಅರನಾಥ ಎಂಬೀ ೧೬, ೧೭ ಮತ್ತು ೧೮ನೆಯವರು ತೀರ್ಥಂಕರರಷ್ಟೇ ಅಲ್ಲ, ಜೈನರ ದ್ವಾದಶ ಚಕ್ರವರ್ತಿಗಳಲ್ಲಿ ಕ್ರಮವಾಗಿ ೫, ೬ ಮತ್ತು ೭ನೆಯ ಚಕ್ರೇಶ್ವರರೂ ಆಗಿರುವುದರಿಂದ ( ಅಜಿತ XI. ೨೦ ಗದ್ಯ), ಚಕ್ರೇಶ್ವರಚರಿತ ಎಂಬ ಹೆಸರಿಂದಲೆ ಯಾವನೊಬ್ಬ ಚಕ್ರೇಶ್ವರನ ಕಥೆ ಎಂದು ಸ್ಪಷ್ಟವಿರುವ ರನ್ನನ ಚಕ್ರೇಶ್ವರಚರಿತವು ಇವರಲ್ಲಿ ಯಾರೊಬ್ಬನನ್ನು ಕುರಿತು ರಚಿಸಲ್ಪಟ್ಟಿದ್ದರೆ, ಅವೇ ಮೇಲಣ ಕಾರಣಗಳಿಂದ ಅದೂ ಆತನ ಹೆಸರಿಂದ ಅಮುಕನಾಥ ಚಕ್ರೇಶ್ವರ ಪುರಾಣವೊ ಚರಿತಪುರಾಣವೊ ಎಂದು ಕರೆಯಲ್ಪಡುತ್ತಿತ್ತಲ್ಲದೆ ಬರೀ ಚಕ್ರೇಶ್ವರಚರಿತ ಎಂದಲ್ಲ.

ಅದಲ್ಲದೆ ತನ್ನ ಅಜಿತನಾಥ ತೀರ್ಥಂಕರನ ಚರಿತ್ರವಲ್ಲಿ ಅದನ್ನು ಅಜಿತ ಪುರಾಣವೆಂದೂ ( ಅಜಿತ XII. ೩೫; ೩೬; ೩೯; ೫೪ ) ಪುರಾಣತಿಲಕವೆಂದೂ ( I. ೭೮; ೭೯ ) ಹೇಳಿರುವ ರನ್ನನ ಪರಶುರಾಮುಚರಿತವೂ ಚಕ್ರೇಶ್ವರಚರಿತವೂ ಅದರಂತೆಯೇ ತೀರ್ಥಂಕರ ಕಥಾತ್ಮಕವಾಗಿದ್ದರೆ, ಅವನ್ನೂ ಆತನು ತೀರ್ಥಂಕರರ ಕಥೆಗಳಿಗೆ ವಾಡಿಕೆಯಾಗಿರುವಂತೆ ಪುರಾಣ ಎಂದೇ ಹೇಳುತ್ತಿದ್ದನಷ್ಟೇ ಅಲ್ಲ, ತೀರ್ಥಂಕರರೆಲ್ಲರೂ ಸಮಾನರು, ಅವರಲ್ಲಿ ಹೆಚ್ಚು ಕುಂದಿಲ್ಲ, ಆತಏವ ಕಾವ್ಯದ ದೃಷ್ಟಿಯಿಂದ ಅವರೆಲ್ಲರ ಕಥೆಗಳು ಸಮಾನರಸವಾಗಿರದೆ ಕೆಲವು ಸರಸ ಕೆಲವು ವಿರಸವಾಗಿರಬಹುದಾದರೂ ಜೈನಧರ್ಮದ ದೃಷ್ಟಿಯಿಂದ ಅವೆಲ್ಲವೂ ಏಕರೀತಿಯಾಗಿ ಪವಿತ್ರವೆಂಬ ಕಾರಣದಿಂದ, ತನ್ನ ಅಜಿತಪುರಾಣದಲ್ಲಿ (XII. ೩೫).

ಜಗದೊಳಗಾದಿಪುರಾಣಂ
ನೆಗಟ್ದುದು ಮುಂ ಪಂಪನಿಂದೆ ಪೊನ್ನಿಗನಿಂದಂ ।
ನೆಗಟ್ದುದು ಶಾಂತಿಪುರಾಣಂ
ನೆಗಟ್ದುದು ಕವಿರತ್ನನಿಂದಮಜಿತಪುರಾಣಂ ॥

ಎಂಬಲ್ಲಿ ಅಜಿತಪುರಾಣವನ್ನು ಮಾತ್ರವಲ್ಲ, ಅದರೊಂದಿಗೆ ತಾನು ಆಮೊದಲೇ ರಚಿಸಿದ ಪರಶುರಾಮುಚರಿತ ಹಾಗೂ ಚಕ್ರೇಶ್ವರಚರಿತಗಳಲ್ಲಿ ಯಾವುದು ಪುರಾಣವೊ, ಅಂದರೆ ತೀರ್ಥಂಕರ ಕಥೆಯೊ, ಅದನ್ನೂ ಅಥವಾ ಅವೆರಡೂ ಪುರಾಣಗಳಾಗಿದ್ದರೆ ಅವೆರಡನ್ನೂ ಹೇಳುತ್ತಿದ್ದನು. ಆ ಮೇಲೆ ನಾಗಚಂದ್ರನೂ ತನ್ನ ಮಲ್ಲಿನಾಥ ಪುರಾಣದಲ್ಲಿ ( I. ೨೫ )—

ಮನ್ನಿಸುಗೆ ಕೃತಿಗೆ ಸೌಭಾ
ಗ್ಯೋನ್ನತಿಯಂ ಸುಕವಿ ಪಂಪನಾದಿಪುರಾಣಂ ।
ಪೊನ್ನನ ಶಾಂತಿಪುರಾಣಂ
ರನ್ನನ ಕೃತಿರತ್ನಮೆನಿಸಿದಜಿತಪುರಾಣಂ ॥

ಎಂದಿರುವಲ್ಲಿ ರನ್ನನ ಅಜಿತಪುರಾಣವನ್ನೇ ಅಲ್ಲ, ಅವನ ತೀರ್ಥಂಕರ ಪುರಾಣಗಳು ಮತ್ತೂ ಇದ್ದರೆ ಅವನ್ನೂ ಹೇಳುತ್ತಿದ್ದನು; ಆದರೆ ಹಾಗೇನೂ ಇಲ್ಲದಿರುವುದರಿಂದ, ಪಂಪ-ಪೊನ್ನರಂತೆ ರನ್ನನೂ ತೀರ್ಥಂಕರಚರಿತ್ರಾತ್ಮಕವಾದ ಅದೊಂದೇ ಅಜಿತ ಪುರಾಣವನ್ನು ರಚಿಸಿದನೆಂಬಲ್ಲಿಯೂ ಅತಏವ ಅವನ ಪರಶುರಾಮಚರಿತವಾಗಲಿ ಚಕ್ರೇಶ್ವರಚರಿತವಾಗಲಿ ತೀರ್ಥಂಕರರ ಚರಿತ್ರವಲ್ಲ ಎಂಬಲ್ಲಿಯೂ ಇನ್ನು ಸಂಶಯವಿಲ್ಲ.

ಇನ್ನು ಚಕ್ರೇಶ್ವರಚರಿತ ಎಂಬ ಹೆಸರಿನಿಂದಲೆ ಜೈನರ ದ್ವಾದಶ ಚಕ್ರವರ್ತಿಗಳಲ್ಲಿ ಯಾವನೊಬ್ಬ ಚಕ್ರೇಶ್ವರನ ಕಥೆ ಎಂದು ಸ್ಪಷ್ಟವಿರುವ ಆ ಚಕ್ರೇಶ್ವರಚರಿತದ ಕಥಾನಾಯಕನು ಯಾರೆಂಬಲ್ಲಿ, ಮೇಲೆ ಹೇಳಿರುವಂತೆ ಆಬಗ್ಗೆ ಸಲ್ಲದ ಶಾಂತಿನಾಥ, ಕುಂಥುನಾಥ ಹಾಗೂ ಅರನಾಥ ಎಂಬೀ ಮೂರು ತೀರ್ಥಂಕರ ಚಕ್ರವರ್ತಿಗಳನ್ನೆಂತೋ ಅಂತೆಯೇ ಅಜಿತಪುರಾಣದಲ್ಲಿ ( IX–XI ) ವಿವರವಾಗಿ ಹೇಳಿರುವ 'ಎರಡನೆಯ ಚಕ್ರನಾಥ' ( ಅಜಿತ IX. ೪ ), 'ದ್ವಿತೀಯ ಚಕ್ರೇಶ್ವರ' ( IX. ೩೫ ಗದ್ಯ ) ನಾದ ಸಗರನ ಕಥೆಯನ್ನೇ ರನ್ನನು ಆ ಮುಂಚೆಯೂ ಹೇಳಿರಲೊಲ್ಲನೆಂಬುದರಿಂದ ಸಗರ ಚಕ್ರೇಶ್ವರನನ್ನೂ ನಮ್ಮ ವಿಚಾರದಿಂದ ಸುಲಭವಾಗಿ ವಿಸರ್ಜಿಸಬಹುದು. ಮಿಕ್ಕುಳಿದ ಚಕ್ರೇಶ್ವರರಲ್ಲಿ ಆದಿತೀರ್ಥಂಕರನ ಹಿರೇ ಮಗನೂ, ಪ್ರಥಮ ಚಕ್ರೇಶ್ವರನೂ, 'ಚಕ್ರವರ್ತಿ ಪ್ರಧಾನ'ನೂ ( ಆದಿ VIII. ೩೪ ), 'ಆದಿ ಭೂಭುಜ'ನೂ ( ಆದಿ XV. ೩ ) ಆದ ಭರತನೇ ಸರ್ವಶ್ರೇಷ್ಠನೆನಿಸುವುದರಿಂದ ಇತರ ಚಕ್ರವರ್ತಿಗಳು ಆತನಿಗೆ ಯಾವ ವಿಧದಿಂದಲೂ ಸಮತೂಕರಲ್ಲವೆಂಬುದಕ್ಕೆ ಅನುಮಾನವಿಲ್ಲ. ಅದಲ್ಲದೆ ಭರತನು ಸರ್ವಶ್ರೇಷ್ಠನಾದ ಚಕ್ರೇಶ್ವರನೆಂದು ರನ್ನನಿಗೇ ಆತನಲ್ಲಿ ಪೂಜ್ಯ ಭಾವವಿದ್ದಿತೆಂಬುದಕ್ಕೆ ಅವನ ಅಜಿತಪುರಾಣದಲ್ಲಿಯೇ ಈ ಆಧಾರಗಳಿವೆ—

( ೧ ) 'ಚಕ್ರವರ್ತಿಗೆ ನಾಭೇಯತನೂಭವಂಗೆ ಭರತಂಗೆ' ( V. ೭ ),

( ೨ ) ಭರತನ ದೊರೆಯನನುವರ್ೀ
ಭರಸಹನಂ ಮಗನೆ ಪಡೆಯವೇಳ್ಪುದು ಮಗನಂ । ( V. ೯೫ ),

( ೩ ) ದ್ವಿಜವಂಶಮನಾ ಭರತಂ
ಸೃಜಿಯಿಸಿದಂ ಚಕ್ರವರ್ತಿ.......... । ( X. ೧೬ ),

(೪) ಪುರುದೇವಾಜಿತದೇವರೀರ್ವರೆ ದಲಾದೋಪಾದ್ಯ ತೀರ್ಥೇಶ್ವರರ್
ಭರತೇಶಂ ಸಗರೇಶರೀರ್ವರೆ ದಲಾದೋಪಾದ್ಯ ಚಕ್ರೇಶ್ವರರ್।

(XII. ೭).

ಇವೆಲ್ಲಕ್ಕೂ ಮೇಲಾಗಿ ಅಜಿತಪುರಾಣದಲ್ಲಿ (IX. ೩೪ ಗದ್ಯ) 'ಭರತೇಶ್ವರ ಚಕ್ರವರ್ತಿಯ ಪ್ರಶಸ್ತಿಯಂ ಕಾಕಿಣೀ ರತ್ನದೊಳ್ ಕವಿರತ್ನನಿಂ ಬರೆಯಿಸಿ' ಎಂದಿರುವಲ್ಲಿಯ ಕವಿ ರತ್ನನಾದರೊ ಅಜಿತಪುರಾಣದಿಂದಲೂ (I. ೯-೪೪; XII. ೩೪; ೩೫; ೩೭; ೪೦-೪೩; ೪೫; ೪೭; ೪೯; ೫೧-೫೪) ಗದಾಯುದ್ಧದಿಂದಲೂ (I. ೩೨; ೩೮; ೪೧; ೪೬) ಕವಿರತ್ನನೆಂದು ನಾವು ಬಾರಿಬಾರಿಗೂ ಬಲ್ಲ ರನ್ನನೇ ವಿನಾ ಮತ್ತಾರೂ ಅಲ್ಲವೆಂಬುದೂ ಕಂಡಿತ; ಈಗ ಗದ್ಯದಲ್ಲಿಯ 'ಬರೆಯಿಸಿ' ಎಂಬ ಭೂತನ್ಯೂನವು ಆಗಿಹೋದ ವಿಷಯವನ್ನು ಸೂಚಿಸುತ್ತದೆಂಬುದೂ ಕಂಡಿತ. ಹಾಗಾದರೆ ಅಜಿತಪುರಾಣಕ್ಕೆ ಮುಂಚೆ ರನ್ನನು ಬರೆದ ಚಕ್ರೇಶ್ವರಚರಿತವು ಭರತೇಶ್ವರ ಚಕ್ರವರ್ತಿಯ ಚರಿತ್ರವಲ್ಲವಾದರೆ ಬೇರಾವುದಾಗಿರಬೇಕು?

ಈ ಗದ್ಯಕ್ಕೆ 'ಭರತೇಶ್ವರ ಚಕ್ರವರ್ತಿಯ ಪ್ರಶಸ್ತಿಯ ಸಮಾಪದೊಳ್ ನಿಜಂ ಕಾಕಿಣೀ ರತ್ನದೊಳ್ ಕವಿ ರತ್ನನಿಂ ಬರೆಯಿಸಿ' ಎಂದು ಪಾಠಾಂತರವಿರುವಂತೆ (ಅಜಿತ. ಪು. ೧೫೪, ಅಡಿಬರೆಹ ೬) ಕಾಣುತ್ತದೆ. ಇದರಿಂದಲಾದರೂ ಈ ಮೇಲಣ ಅಷ್ಟು ಸ್ಪಷ್ಟವಿರುವ ಅರ್ಥಕ್ಕೆ ತೊಡಕಾಗುವಂತಿಲ್ಲ. ಏಕೆಂದರೆ ಸಮಾಪ ಎಂದರೆ ಮುಗಿತಾಯ; 'ಭರತೇಶ್ವರ ಚಕ್ರವರ್ತಿಯ ಪ್ರಶಸ್ತಿಯ ಸಮಾಪದೊಳ್ ನಿಜಂ ಕಾಕಿಣೀ ರತ್ನದೊಳ್ ಕವಿರತ್ನನಿಂ ಬರೆಯಿಸಿ' ಅಂದರೆ ಭರತೇಶ್ವರ ಚಕ್ರವರ್ತಿಯ ಪ್ರಶಸ್ತಿಯನ್ನು ಬರೆದು ಮುಗಿಸುತ್ತಲೇ ತನ್ನ ಪ್ರಶಸ್ತಿಯನ್ನು ಕವಿ ರನ್ನನಿಂದ ಬರೆಯಿಸಿ ಎಂಬಲ್ಲಿ ಅವೆರಡೂ ಪ್ರಶಸ್ತಿಗಳನ್ನು ಬರೆದವನೊಬ್ಬನೇ ಎಂದು ಸ್ವಯಂ ಸಿದ್ಧವಾಗುವುದರಿಂದ, ಅಜಿತಪುರಾಣದಲ್ಲಿ ಸಗರ ಚಕ್ರವರ್ತಿಯ ಪ್ರಶಸ್ತಿಯನ್ನು ಬರೆದ ರನ್ನನು ಆ ಮುಂಚಿನ ಚಕ್ರೇಶ್ವರಚರಿತದಲ್ಲಿ ಭರತೇಶ್ವರನ ಪ್ರಶಸ್ತಿಯನ್ನು ಬರೆದಿರಬೇಕೆಂಬಲ್ಲಿ ಸಂಶಯವಿಲ್ಲ. ಅತಏವ ರನ್ನನ ಚಕ್ರೇಶ್ವರಚರಿತವು ಜೈನರ ದ್ವಾದಶ ಚಕ್ರವರ್ತಿಗಳಲ್ಲಿ ಪ್ರಥಮ ಚಕ್ರೇಶ್ವರನೂ ಪ್ರಥಮತೀರ್ಥಂಕರನಾದ ಋಷಭನಾಥನ ಹಿರೇ ಮಗನೂ ಆದ ಭರತ ಚಕ್ರವರ್ತಿಯನ್ನು ಕುರಿತ ಜೈನ ಧರ್ಮದ ಕಾವ್ಯವೇ ಸರಿ ಎಂದು ದೃಢವಾಗುತ್ತದೆ.

ಇನ್ನೂ ಹೇಳುವುದಾದರೆ, ಶಾ. ಶ. ೧೦೨೫ ಸುಭಾನು ಸಂ| ಕಾರ್ತಿಕ ಶುದ್ಧ ದಶಮಿ ಬೃಹಸ್ಪತಿವಾರ = ಕ್ರಿ. ಶ. 1102 ಅಕ್ಟೋಬರ 23 ನೆಯ ತಾರೀಖಿನಂದಿನ ಚಿಕ್ಕಮಗಳೂರು 160ನೆಯ (EC. VI) ಶಿಲಾಶಾಸನದಲ್ಲಿಯ (ಬಂ. ೫೩)

ಭರತೇಶ್ವರ ಚಕ್ರೇಶ್ವರ
ಚರಿತಮೆ ನಿಜಚರಿತಮೆನೆ ಚಮೂಪತಿ ಭರತೇ।
ಶ್ವರನೆಸೆವನನ್ವಿತಾಖಿಳ
ಪುರುಷಾರ್ಥಂ ಭವ್ಯಸೇವ್ಯ ಜಂಗಮತೀರ್ಥಂ ॥

ಎಂಬೀ ಕಂದಪದ್ಯದಲ್ಲಿ ಚಕ್ರೇಶ್ವರಚರಿತ ಎಂದಿರುವೊಂದಿಗೆ ಆ ಚಕ್ರೇಶ್ವರನು ಭರತೇಶ್ವರನೆಂದಿರುವಲ್ಲಿ ಕಥೆ ಎಂದೂ ಶೀಲ ಎಂದೂ ಅರ್ಥ ಉಳ್ಳ ಚರಿತ ಎಂಬ ಶ್ಲಿಷ್ಟಪದದಿಂದ ರನ್ನನ ಕಾವ್ಯದ ಹೆಸರನ್ನು ಧ್ವನಿಸಿರುವಂತೆ ಸಾಕಷ್ಟು ಸ್ಪಷ್ಟವಿರುವುದರಿಂದ, ಅದು ಭರತೇಶ್ವರನ ಚರಿತ್ರಾತ್ಮಕವಾದ ಕಾವ್ಯವಾಗಿರಬೇಕೆಂದು ತಿಳಿವಂತೆಯೆ ಪ್ರಾಯಶಃ ಈ ಶಾಸನ ಕಾಲದವರೆಗಾದರೂ ರನ್ನನ ಚಕ್ರೇಶ್ವರಚರಿತವು ನಷ್ಟವಾಗಿರದೆ ಆಗಣವರು ಅದನ್ನು ಓದಿ ಬಲ್ಲವರಾಗಿದ್ದರೆಂದೂ ಊಹಿಸಲಾಗುತ್ತದೆ.

ಇನ್ನು ರನ್ನನು ತನ್ನ ಪರಶುರಾಮಚರಿತವನ್ನೂ ಚಕ್ರೇಶ್ವರಚರಿತವನ್ನೂ ಎಲ್ಲೆಲ್ಲಿ ಮತ್ತು ಎಂದೆಂದು ರಚಿಸಿದನೆಂದು ಗೊತ್ತುಹಚ್ಚಲಾಗುತ್ತದೊ ನೋಡೋಣ.

ಸಾಮಂತರಿಗಿಂತ ಮಂಡಳಿಕರೆಂದೂ ಕರೆಯಲ್ಪಡುವ ಮಂಡಳೇಶ್ವರರು ಮೇಲು, ಅವರಿಗಿಂತ ಚಕ್ರವರ್ತಿಗಳು ಮೇಲು ಎಂಬುದರಿಂದ, ಉದಿತೋದಿತನೆನಿಸತಕ್ಕ ಕವಿಯಾದರೊ ಸಾಮಂತರ ಆಸ್ಥಾನದಿಂದ ಮಂಡಳಿಕರ ಆಸ್ಥಾನಕ್ಕೂ ಅಲ್ಲಿಂದ ಚಕ್ರವರ್ತಿಗಳ ಆಸ್ಥಾನಕ್ಕೂ ಹೋಗಬೇಕಲ್ಲದೆ ಅದಕ್ಕೆ ವಿಪರೀತವಾಗಿಯೂ ಅಲ್ಲ, ಭಿನ್ನವಾಗಿಯೂ ಅಲ್ಲವೆಂದು ಸುನಿಶ್ಚಿತವಿದೆ; ರನ್ನನ ಅಜಿತಪುರಾಣದ (I. ೮೧).

ಕೊಂಡಾಟದ ಸಾಮಂತರ
ಮಂಡಳಿಕರ ಸಕಲ ಚಕ್ರವರ್ತಿಗಳ ಸಭಾ।
ಮಂಡಲದೊಳುಭಯಕವಿಮುಖ
ಮಂಡನಮಾಗಿರ್ಪ ರತ್ನವಿೀ ಕವಿರತ್ನಂ ॥

ಎಂಬ ಪದ್ಯದಿಂದ ಆತನು ಮೊತ್ತಮೊದಲಲ್ಲಿ ಸಾಮಂತರ ಆಸ್ಥಾನದಲ್ಲಿದ್ದು, ಆ ಬಳಿಕ ಮಂಡಳೇಶ್ವರರ ಆಸ್ಥಾನಕ್ಕಯ್ದಿ, ಅಲ್ಲಿಂದ ಸಕಲ ಚಕ್ರವರ್ತಿಗಳ ಆಸ್ಥಾನವನ್ನು ಸೇರಿದನೆಂದು ವ್ಯಕ್ತವೂ ಇದೆ. ಅಜಿತಪುರಾಣದಲ್ಲಿಯ

ಚಕ್ರಿಗಳೊಳಾಹವಮಲ್ಲಂ। (I. ೨೦),
ಅವನಿಪರೊಳ್ ನಿಜ ಭುಜ ಚ
ಕ್ರವರ್ತಿ ರಣಜಯಕೆ ತೈಲನಂತಸಹಾಯಂ। (I. ೮೪),
ಜಗತೀ ಚಕ್ರಮನಾಳ್ಗೆ ತೈಲಪ್ಪನೇಕಚ್ಛತ್ರದಿಂ...... .....। (XII. ೨೬)

ಎಂಬಿತ್ಯಾದಿ ಮಾತುಗಳಿಂದ ಆ ಕಾವ್ಯವನ್ನು ರನ್ನನು ಕರ್ಣಾಟಕದ ಸಕಲ ಚಕ್ರವರ್ತಿಯಾದ ಪಡುವಣ ಚಾಳುಕ್ಯ ಆಹವಮಲ್ಲ ತೈಲಪನ (ಕ್ರಿ. ಶ. 973-997) ಆಸ್ಥಾನದಲ್ಲಿದ್ದಂದು ರಚಿಸಿದನೆಂಬುದು ಎಷ್ಟು ಕಂಡಿತವೊ ಪಂಪಭಾರತದಲ್ಲಿ (IX. ೫೨ ೧; XIV. ೩೭ ೧) 'ಗೊಜ್ಜಿಗನೆಂಬ ಸಕಲ ಚಕ್ರವರ್ತಿ' ಎಂಬಾ ರಾಷ್ಟ್ರ

ಕೂಟ III ಗೋವಿಂದನ ( ಕ್ರಿ. ಶ. 783 - 815 ) ವಂಶಜನಾದಕಾರಣ ತಾನೂ ಸಕಲ ಚಕ್ರವರ್ತಿ ಎನಿಸತಕ್ಕ ಅಮೋಘವರ್ಷ II ಕಕ್ಕನನ್ನು ( 972 - 973 ) ಗೆದ್ದು ಚಾಳುಕ್ಯ ತೈಲಪನು ಸಕಲ ಚಕ್ರವರ್ತಿಯಾಗಿ ಕರ್ಣಾಟಕದ ಸಿಂಹಾಸನ ವನ್ನೇರಿದ ಕ್ರಿ. ಶ. 973 ರಲ್ಲಿ ಅಜಿತಪುರಾಣದಿಂದ ( XII. ೪೭ ) ತಿಳಿವ ಮೇರೆಗೆ ಸೌಮ್ಯ ಸಂವತ್ಸರದಲ್ಲಿ, ಅಂದರೆ ಕ್ರಿ. ಶ. 949 ರಲ್ಲಿ, ಹುಟ್ಟಿದ ರನ್ನನಿಗೆ ಬರೇ ೨೪ ವರ್ಷಗಳಷ್ಟೇ ವಯಸ್ಸಾಗುವುದರಿಂದ, ಸಕಲ ಚಕ್ರವರ್ತಿಗಳ ಆಸ್ಥಾನಕ್ಕೆ ತೆರಳುವ ಮುಂಚೆ ಮಂಡಳಿಕರ ಆಸ್ಥಾನದಲ್ಲಿಯೂ ಅದಕ್ಕೂ ಮುಂಚೆ ಸಾಮಂತರ ಆಸ್ಥಾನ ದಲ್ಲಿಯೂ ಇದ್ದನೆಂಬುದರಿಂದ ಅಲ್ಲಲ್ಲಿ ಕೆಲಕೆಲವು ವರ್ಷವಾದರೂ ಇದ್ದಿರಬೇಕಾದ ರನ್ನನು II ಕಕ್ಕನ ಆಸ್ಥಾನವನ್ನು ಹೊಕ್ಕಿಲ್ಲವೆಂಬುದೂ ಶ್ರವಣಬೆಳ್ಗೊಳ 133 ನೆಯ ಶಾಸನದಿಂದ ( EC. II ) ತಿಳಿವ ಮೇರೆಗೆ II ಕಕ್ಕನ ಸಾಮ್ರಾಜ್ಯವನ್ನು ತೈಲಪನು ಸೆಳಕೊಂಡಮೇಲೆ ತನ್ನ ಸೋದರಮಾವನಾದ ಗಂಗ ಮಾರಸಿಂಹನಿಂದ ರಾಷ್ಟ್ರಕೂಟ ಅರಸನೆಂದು ಪಟ್ಟಾಭಿಷೇಕಿಸಲ್ಪಟ್ಟು, ಶಾ. ಶ. ೯೦೪ ಚಿತ್ರಭಾನು ಸಂ| ಚೈತ್ರ ಬಹುಳ ೮ ಭೌಮವಾರ, ಅಂದರೆ ಇದರಲ್ಲಿ ಹೇಳಿದ ತಿಥಿ ಸರಿಯಾದರೆ ಕ್ರಿ. ಶ. 982 ಮಾರ್ಚಿ 20 ಸೋಮವಾರ, ವಾರ ಸರಿಯಾದರೆ ಮರುದಿನ ಮಾರ್ಚಿ 21 ಕುಜವಾರ, ದಿವಂಗತನಾದ ' ಕೃಷ್ಣ ರಾಜೇನ್ದ್ರನ ಮಗನ ಮಗಂ.... ಶ್ರೀ ಗಂಗ ಗಾಂಗೇಯನ ಮಗಳ ಮಗಂ........ ಶ್ರೀ ರಾಜಚೂಡಾಮಣಿಯಳಿಯ ' ( ಬಂ. ೩-೬ ), ಅಂದರೆ ರಾಷ್ಟ್ರಕೂಟ III ಕೃಷ್ಣನ ( 937 – 966 ) ಮಗನ ಮಗನೂ, ಗಂಗ ಗಾಂಗೇಯನೆಂಬ ಗಂಗರಸನಾದ ಬೂತುಗನ ಮಗಳ ಮಗನೂ, ಆ ಬೂತುಗನ ಮಗನಾದ ರಾಜಚೂಡಾಮಣಿ ಎಂಬ ಬಿರುದಿದ್ದ ಗಂಗ ಮಾರಸಿಂಹನ ಅಳಿಯನೂ ಆದ ( IV ) ಇಂದ್ರನು ತನ್ನ ಹಿರಿಯರಾದ ರಾಷ್ಟ್ರಕೂಟರ ರಾಜ್ಯವು ಚಾಳುಕ್ಯ ತೈಲಪನ ಕೆಯ್ಸೇರಿದ ಮೇಲೆ ೯ ವರ್ಷ ಬದುಕಿದ್ದರೂ ಅವನಿಗೆ ರಾಜ್ಯವಿದ್ದಿ ಲ್ಲದಕಾರಣ ಸರ್ವಥಾ ಸಕಲ ಚಕ್ರವರ್ತಿಯಲ್ಲದ ಅವನ ಆಸ್ಥಾನದಲ್ಲೂ ರನ್ನನು ಇದ್ದಿಲ್ಲವೆಂಬುದೂ ಅಷ್ಟೇ ಕಂಡಿತ. ಅತಏವ ಸಾಮಂತರ ಹಾಗೂ ಮಂಡಳಿ ಕರ ಆಸ್ಥಾನಗಳನ್ನು ಹಿಂದಿಕ್ಕಿ ಬಂದ ರನ್ನನು ಅಜಿತಪುರಾಣವನ್ನು ರಚಿಸಿದ ಕ್ರಿ. ಶ. 993 ರ ವರೆಗೆ ಒಬ್ಬನೇ ಸಕಲ ಚಕ್ರವರ್ತಿಯ ಆಸ್ಥಾನದಲ್ಲಿ, ಅಂದರೆ ಚಾಳುಕ್ಯ ತೈಲಪನ ಆಸ್ಥಾನದಲ್ಲಿ ಮಾತ್ರ, ಇದ್ದನೆಂದು ಸ್ಪಷ್ಟವಾಗುವುದರಿಂದ, ಅಜಿತಪುರಾಣದ ( I. ೮೧ )

ಕೊಂಡಾಟದ ಸಾಮಂತರ
ಮಂಡಳಿಕರ ಸಕಲ ಚಕ್ರವರ್ತಿಗಳ

ಎಂಬಲ್ಲಿಯ ಸಕಲ ಚಕ್ರವರ್ತಿಗಳ ಎಂಬ ಬಹುವಚನವು ಅಂದಿನಮಟ್ಟಿಗೆ ಬಹು ಮಾನಾರ್ಥಕವೇ ವಿನಾ ಸಂಖ್ಯಾವಾಚಕವಲ್ಲ.

ಇದೇ ಬಗೆಯ ಪದ್ಯವು ಗದಾಯುದ್ಧದಲ್ಲಿಯೂ ( I. ೩೪ ) ಇದೆ—

ಮೊದಲೊಳ್ಸಾಮಂತರಿನಿಸಿ
ಸುದಿತೋದಿತನಾಗಿ ಮಂಡಲೇಶ್ವರನಿಂದ|
ಭ್ಯುದಯಪರನೆನಿಸಿ ಚಕ್ರಿಯಿ
ನುದಯ ಪರಂಪರೆಯನೆಯ್ದಿದಂ ಕವಿರನ್ನಂ ||

ಈ ಮುಂದೆ ತಿಳಿವಂತೆ ಗದಾಯುದ್ಧವನ್ನು ರಚಿಸುವಂದಿಗೆ ತೈಲಪನು ದಿವಂಗತನಾಗಿದ್ದು ಆತನ ಮಗನೂ ಆ ಕಾವ್ಯದ ಕಥಾನಾಯಕನೂ ( ಗದಾ I. ೩೧ ) ಆದ ಸತ್ಯಾಶ್ರಯನು ಆಗ್ಗೆ ಚಕ್ರವರ್ತಿಯಾಗಿದ್ದ ಕಾರಣ, ರನ್ನನು ತೈಲಪನೊಬ್ಬನವೇ ಅಲ್ಲ, ಸತ್ಯಾಶ್ರಯನ ಆಸ್ಥಾನದಲ್ಲಿಯೂ, ಅಂದರೆ ಇಬ್ಬರು ಚಕ್ರವರ್ತಿಗಳ ಆಸ್ಥಾನದಲ್ಲಿ ಇದ್ದನೆಂದು ತಿಳಿಯುತ್ತದಾದರೂ ತನ್ನ ಅಭ್ಯುದಯ ಪರಂಪರೆಯನ್ನು ಹೇಳುವ ಈ ಕಂದದಲ್ಲಿ ಚಕ್ರವರ್ತಿಯನ್ನು ಮಿಕ್ಕಿ ಬಿರುದೂ ಇಲ್ಲ, ಕವಿಗೆ ಕವಿಚಕ್ರವರ್ತಿತ್ವವನ್ನು ಮಿಕ್ಕಿ ಪದವಿಯೂ ಇಲ್ಲದುದರಿಂದ, ಆ ಅನುತ್ತಮವಾದ ಪದವಿಯನ್ನು ಆ ಮುಂಚೆಯೇ ತೈಲಪನಿಂದ ಹೊಂದಿ ( ಗದಾ I. ೩೭ ) ತನ್ನ ಅಭ್ಯುದಯದ ಪರಾಕಾಷ್ಠೆಯನ್ನೆಯ್ದಿದ ರನ್ನನು ಅದಕ್ಕೆ ಕಾರಣಭೂತನಾದ ತೈಲಪನನ್ನಷ್ಟೇ ಕುರಿತು 'ಚಕ್ರಿಯಿನ್' ಎಂದು ಏಕವಚನವನ್ನು ಪ್ರಯೋಗಿಸಿರುವುದು ಸಮಂಜಸವೇ. ಆದರೆ ತೈಲಪನ ಆಸ್ಥಾನದಲ್ಲಿ ರಚಿಸಿದ ಅಜಿತಪುರಾಣದಲ್ಲಿ ( I. ೮೧ ) 'ಸಾಮಂತರ ಮಂಡಳಿಕರ' ಎಂದು ಅವೆರಡೂ ಹೆಸರುಗಳು ಬಹುವಚನದಲ್ಲಿಯೂ ಆ ಮೇಲೆ ಸತ್ಯಾಶ್ರಯನ ಆಸ್ಥಾನದಲ್ಲಿ ರಚಿಸಿದ ಗದಾಯುದ್ಧದಲ್ಲಿ ( I. ೩೪ ) ಸಾಮಂತರಿನ್.... ಮಂಡಳೇಶ್ವರನಿಂದ' ಎಂದು ಮೊದಲಣ ಹೆಸರು ಬಹುವಚನದಲ್ಲಿಯೂ ಮತ್ತಿನದು ಏಕವಚನದಲ್ಲಿಯೂ ಇರುವುದನ್ನು ಹೋಲಿಸಿದರೆ, ಗದಾಯುದ್ಧದಲ್ಲಿಯ 'ಮಂಡಲೇಶ್ವರನಿಂದ' ಎಂಬ ಏಕವಚನವು ಪ್ರಾಯಶಃ ಸಂಪ್ರತಿಕಾರರಿಂದಾದ ಕೆಯ್ತಪ್ಪು ಎಂದು ವ್ಯಕ್ತವಾಗುವುದರಿಂದ ಅದೂ ಅಜಿತಪುರಾಣದಲ್ಲಿರುವಂತೆಯೇ ಬಹುಮಾನಾರ್ಥಕವೊ ಸಂಖ್ಯಾವಾಚಕವೊ ಆದ ಬಹುವಚನವೇ ಆಗಿರಬೇಕು.

ಅಜಿತಪುರಾಣದ ಪ್ರತ್ಯಾಶ್ವಾಸದ ಕೊನೆಯ ಗದ್ಯದಲ್ಲಿ ಹಾಗೂ ಆ ಕಾವ್ಯಶರೀರದಲ್ಲಿ ( XII. ೩೮ ) ರನ್ನನು ತನ್ನನ್ನು ಅಭಿನವ ಕವಿಚಕ್ರವರ್ತಿ ಎಂದೂ ಗದಾಯುದ್ಧದ ಆಶ್ವಾಸಾಂತ್ಯದ ಗದ್ಯಗಳಲ್ಲಿ ಕವಿಚಕ್ರವರ್ತಿ ಎಂದೂ ಹೇಳಿಕೊಂಡಿರುವುದರಿಂದ, ಅಜಿತಪುರಾಣವನ್ನು ಬರೆವ ಹೊತ್ತಿಗೆ ಕವಿಚಕ್ರವರ್ತಿ ಎಂಬಾ ಬಿರುದಿಗೆ ಅಭಿನವ ಅಂದರೆ ಹೊಸಬನಾಗಿದ್ದ ಆತನು ಆ ಬಿರುದನ್ನು ಹೊತ್ತು ಆಗ್ಗೆ ಬಹಳ ಹೆಚ್ಚಾದರೆ ೧–೨ ವರ್ಷಗಳೇನೋ ಆಗಿರಬೇಕಷ್ಟೇ. ಅಜಿತಪುರಾಣದಿಂದ ( I. ೮೦ ) ತಿಳಿವಂತೆ ಆತನಿಗಿದ್ದ—

ಕವಿಮುಖಚಂದ್ರಂ ಕವಿಚ
ಕ್ರವರ್ತಿ ಕವಿರಾಜಶೇಖರಂ ಕವಿರಾಜಂ ।
ಕವಿಜನ ಚೂಡಾರತ್ನಂ
ಕವಿತಿಲಕಂ ಕವಿಚತುರ್ಮುಖಂ ಕವಿರತ್ನಂ ॥

ಎಂಬ ಬಿರುದುಗಳಲ್ಲಿ ಕವಿಚಕ್ರವರ್ತಿ ಎಂಬ ಬಿರುದನ್ನಾದರೂ ಆತನು ಚಕ್ರವರ್ತಿಯಾದ ತೈಲಪನಲ್ಲಿ ಪಡೆದನೆಂದು ಗದಾಯುದ್ಧದ ( I. ೩೭ )

ಪಡೆಯೆಡೆಯು ಕಡೆಯು ಬಡವ
ರ್ಕುಡೆ ಪಡೆದನೊ ಚಕ್ರವರ್ತಿಯೊಳ್ ತೈಲಪನೊಳ್ ।
ಪಡೆದಂ ಮಹಿಮೋನ್ನತಿಯುಂ
ಪಡೆದಂ ಕವಿಚಕ್ರವರ್ತಿವೆಸರಂ ರನ್ನಂ॥

ಎಂಬಲ್ಲಿಂದ ವ್ಯಕ್ತವಾಗುತ್ತದೆ. ರನ್ನನು ತೈಲಪನ ಆಸ್ಥಾನವನ್ನು ಯಃಕಶ್ಚಿತ್ ವ್ಯಕ್ತಿಯಂತೇನೂ ಹೊಕ್ಕವನಲ್ಲ. ಆ ಮೊದಲು ಸಾಮಂತರ ಹಾಗೂ ಮಂಡಳೇಶ್ವರರ ಆಸ್ಥಾನಗಳಲ್ಲಿಯೂ ಇದ್ದು ಅಲ್ಲಿಂದ ಹೆಸರುವಾಸಿಯಾಗಿ ಬಂದವನು. ಪ್ರಾಯಶಃ ಅರಸಿ ಬಂದವನಲ್ಲ, ಕರಸಿ ಬಂದವನು. ಅತಏವ ಆತನಿಗಿದ್ದ ಕವಿಮುಖಚಂದ್ರ ( ಅಜಿತ I. ೮೦ ) ಇತ್ಯಾದಿ ಬಿರುದುಗಳಲ್ಲಿ ಹಲವನ್ನಾದರೂ, ಅಥವಾ ಗದಾಯುದ್ಧದಲ್ಲಿ ಕವಿಚಕ್ರವರ್ತಿ ಎಂಬ ಆದೊಂದು ಬಿರುದನ್ನುಳಿದು ಮತ್ತಾವುದನ್ನೂ ಹೇಳಿಲ್ಲದಿರುವುದರಿಂದ ಮಿಕ್ಕೆಲ್ಲವನ್ನೇನೋ, ಆತನು ತೈಲಪನ ಆಸ್ಥಾನಕ್ಕೆ ನಡೆತರುವ ಮೊದಲೇ ತಾನಿದ್ದ ಇತರ ಆಸ್ಥಾನಗಳಲ್ಲಿ ಪಡೆದಿರಬೇಕು, ಮತ್ತು ಆ ಸಾಮಂತರ ಹಾಗೂ ಮಂಡಳೇಶ್ವರರ ಆಸ್ಥಾನಗಳಲ್ಲಿ ಹಾಗೆ ಬಿರುದುಗಳನ್ನು ಪಡೆದಿರಬೇಕಾದರೆ ಆ ತಕ್ಕಂತೆ ಆಯಾ ಆಸ್ಥಾನಗಳಲ್ಲಿ ಆತನು ಕಾವ್ಯಗಳನ್ನು ರಚಿಸಿರಲೂ ಬೇಕು. ತಾನು ಯಾವಾವ ಸಾಮಂತರ, ಯಾವಾವ ಮಂಡಳಿಕರ ಆಸ್ಥಾನಗಳಲ್ಲಿ ಇದ್ದೆನೆಂದು ಆತನು ಹೇಳಿಲ್ಲವಾದರೂ ಸಾಮಂತರು ಬೇರೆ, ಅವರಿಗಿಂತ ಮೇಲಣ ಮಂಡಳೇಶ್ವರರು ಬೇರೆ ಎಂದು ಖಚಿತವಿರುವುದರಿಂದ, ಸಾಮಂತರಿಂದ ಉದಿತೋದಿತನೂ ಮಂಡಳೇಶ್ವರರಿಂದ ಅಭ್ಯುದಯಪರನೂ ಆದನೆಂಬ ರನ್ನನು ಹಾಗೆನಿಸಬೇಕಾದರೆ ಅವರವರ ಆಸ್ಥಾನಗಳಿಂದ ಹೊರಡುವ ಮುಂಚೆ ಅವರಲ್ಲೊಂದು ಇವರಲ್ಲೊಂದು ಎಂದರೂ ಎರಡಕ್ಕೆ ಕಡಿಮೆಯಿಲ್ಲದ ಕಾವ್ಯಗಳನ್ನು ಅವನು ತೈಲಪನ ಆಸ್ಥಾನವನ್ನು ಸೇರುವ ಮೊದಲೇ ರಚಿಸಿರಬೇಕು. ಹೀಗೆ ಆ ಮುಂಚೆಯೇ ಕಾವ್ಯಗಳನ್ನು ರಚಿಸಿ ಆ ಬಗ್ಗೆ ಬಿರುದುಗಳನ್ನೂ ಪಡೆದು ಪ್ರಖ್ಯಾತನಾದ ರನ್ನನು ತನ್ನ ಆಸ್ಥಾನಕ್ಕೆ ಬರುತ್ತಲೋ, ಅಥವಾ ಆತನನ್ನು ತನ್ನಲ್ಲಿಗೆ ಬರಿಸಿಕೊಳ್ಳುತ್ತಲೋ, ತೈಲಪನು ಆತನಿಗೆ ಅಚಿರೇಣ ಕವಿಚಕ್ರವರ್ತಿ ಎಂಬ ಬಿರುದನ್ನು ಇತ್ತಿರಬೇಕು. ಹಾಗಾದರೆ ಅಜಿತಪುರಾಣವನ್ನು ರಚಿಸುವ ಹೊತ್ತಿಗೆ ರನ್ನನು ತೈಲಪನಿಂದ ಕವಿಚಕ್ರವರ್ತಿ ಎಂಬ ಬಿರುದನ್ನು ಪಡೆದಾದ ಆ ೧–೨ ವರ್ಷಕ್ಕಿಂತ ಈಷನ್ಮಾತ್ರ ಹೆಚ್ಚೇನೋ ಆತನು ತೈಲಪನ

ಆಸ್ಥಾನವನ್ನು ಹೊಕ್ಕೂ ಆಗಿರಬೇಕು, ಅಂದರೆ ರನ್ನನು ಕ್ರಿ. ಶ. ಸು. 990 ರಲ್ಲಿ ತನ್ನ ವಯಸ್ಸಿನ ೪೧ನೆಯ ವರ್ಷದಲ್ಲಿ, ತೈಲಪನ ಆಸ್ಥಾನವನ್ನು ಪ್ರವೇಶಿಸಿರಬೇಕು, 991—92 ರಲ್ಲಿ ಅವನಿಂದ ಕವಿಚಕ್ರವರ್ತಿ ಎಂಬ ಬಿರುದನ್ನು ಪಡೆದಿರಬೇಕು.

ಯಾವ ಕವಿಯೇ ಆದರೂ ಕನಿಷ್ಠಪಕ್ಷಕ್ಕೆ ತನ್ನ ೨೧-೨೨ ರ ವಯಸ್ಸಿನ ಮುಂಚೆ ಆಸ್ಥಾನದಲ್ಲಿ ಸೇರಿಸಲ್ಪಡಲಾರನೆಂದು ಒಪ್ಪಿದರೆ, ರನ್ನನು ತಾನು ಮೊತ್ತ ಮೊದಲಲ್ಲಿದ್ದ ಸಾಮಂತರ ಆಸ್ಥಾನಕ್ಕೆ ಕ್ರಿ. ಶ. 970-71 ರ ಮುಂಚೆ ಹೋಗಿರ ಲಾರನು. ಆತನು ಸಾಮಂತರಲ್ಲಿ ಎಷ್ಟು, ಮಂಡಳಿಕರಲ್ಲಿ ಎಷ್ಟು ಕಾಲವಿದ್ದನೆಂದು ತಿಳಿಯದುದರಿಂದ, ಆತನು ಸಾಮಂತರ ಆಸ್ಥಾನವನ್ನು ಸೇರಿದ ಕ್ರಿ. ಶ. 971ರಿಂದ ಕೊನೆಗೆ ತೈಲಪನ ಆಸ್ಥಾನಕ್ಕೆ ತೆರಳಿದ 990ರ ನಡುವಣ ಆ ೨೦ ವರ್ಷಗಳಲ್ಲಿ ಹೆಚ್ಚುಕಡಿಮೆ ಅರೆವಾಸಿ ಹೊತ್ತನ್ನು ಸಾಮಂತರಲ್ಲಿಯೂ ಮಿಕ್ಕ ಅರೆವಾಸಿಯನ್ನು ಮಂಡಳೇಶ್ವರರಲ್ಲಿಯೂ ಕಳೆದನೆಂದು ಊಹಿಸಿದರೆ, ಅವನು 971ರಿಂದ 980ರ ವರೆಗೆ ಸಾಮಂತರಲ್ಲಿಯೂ 980ರಿಂದ 990ರ ವರೆಗೆ ಮಂಡಳಿಕರಲ್ಲಿಯೂ ಇದ್ದ ನೆಂದು ಭಾವಿಸಬಹುದು. ಅವನು ತೈಲಪನ ಆಸ್ಥಾನದಲ್ಲಿ ಇದ್ದಂದು ರಚಿಸಿದ ಅಜಿತ ಪುರಾಣಕ್ಕಿಂತ ಮುಂಚೆ ಬರೆದ ಅವೆರಡೇ ಕಾವ್ಯಗಳಲ್ಲಿ ಪರಶುರಾಮಚರಿತವು ಮೊದ ಲಿನದೆಂದೂ ಚಕ್ರೇಶ್ವರಚರಿತವು ಮತ್ತಿನದೆಂದೂ ಹಾಗೆಯೇ ತೈಲಪನ ಆಸ್ಥಾನ ವನ್ನು ಸೇರುವ ಮುಂಚೆ ಆತನು ಸಾಮಂತರ ಆಸ್ಥಾನದಲ್ಲೊಂದು ಮಂಡಳಿಕರ ಆಸ್ಥಾನದಲ್ಲೊಂದು ಹೀಗೆ ಎರಡಕ್ಕಾದರೂ ಕಡಿಮೆಯಾಗದ ಕಾವ್ಯಗಳನ್ನು ಬರೆದಿರ ಬೇಕೆಂದೂ ಮೇಲೆ ಕಂಡಿರುವುದರಿಂದ, ಎರಡಷ್ಟೇ ಇರುವ ಆ ಕಾವ್ಯಗಳಲ್ಲಿ ಪರಶು ರಾಮಚರಿತವನ್ನು ಆತನು ಸಾಮಂತರ ಆಸ್ಥಾನದಲ್ಲಿಯೂ ಚಕ್ರೇಶ್ವರಚರಿತವನ್ನು ಮಂಡಳೇಶ್ವರರ ಆಸ್ಥಾನದಲ್ಲಿಯೂ ಬರೆದಿರಬೇಕೆಂದು ದೃಢವಾಗಿ ಹೇಳಬಹುದು.

ರನ್ನನು ಯಾವ ಮಂಡಳೇಶ್ವರರಲ್ಲಿ ಇದ್ದನೆಂದು ಗೊತ್ತುಹಚ್ಚುವುದು ಅಷ್ಟು ದುಷ್ಕರವಲ್ಲ, ಏಕೆಂದರೆ ಅವನ ಗದಾಯುದ್ಧದ ( I. ೪೦-೪೧ )

ದೊರೆಯುಱುವ ವಸ್ತುಪುರುಷ
ಪರೀಕಿಸಿ ಬೆಲೆಮಾಡೆ ಗಂಗಮಂಡಲ ಚಕ್ರೇ ।
ಶ್ವರ ಕಟಕೋತ್ತಮ ನಾಯಕ
ವಿರಚನೆಯಿನನರ್ಘರತ್ನಮಾದಂ ರತ್ನಂ ॥
ವಸುಧಾಧಿಪತಿಯ ಕಟಕದೊ
ಳೆಸೆದೊಪ್ಪೆ ಸುವರ್ಣರಚನೆ ಕೇವಣದೊಳ್ ಸೇ ।
ರಿಸಿದುದಱಿಂದೀಗಳ್ ರಂ
ಜಿಸಿದ ಮಹಾರತ್ನಮೆನಿಸಿದಂ ಕವಿರತ್ನಂ ॥

ಎಂಬೀ ಪದ್ಯಗಳಲ್ಲಿ ನಾನು ಈ ಮೊದಲು ಹೇಳಿರುವಂತೆ ( ಜಯಕರ್ನಾಟಕ

IX. ಪು ೬೬೬-೬೬೭ ) ಮೊದಲನೆಯ ಪದ್ಯದಿಂದ ಗಂಗ ಮಂಡಲೇಶ್ವರರ ಕಟಕದಲ್ಲಿ ಅಂದರೆ ಅವರ ರಾಜಧಾನಿಯಲ್ಲಿ, ಅಥವಾ ಶ್ಲೇಷೆಯಿಂದ[೧] ಗಂಗ ಮಂಡಲೇಶ್ವರರೆಂಬ ಕೆಯ್ಕಡಗದಲ್ಲಿ, ಶ್ರೇಷ್ಠವಾದ ನಾಯಕರತ್ನದಂತೆ ತುಡಿಸಲ್ಪಟ್ಟ ಕಾರಣದಿಂದ ಕವಿರತ್ನನೆಂಬ ತಾನು ಅನರ್ಘವಾದ ರತ್ನವಾದೆನೆಂದೂ ಮತ್ತಿನದರಿಂದ ವಸುಧಾಧಿಪತಿಯ ಅಂದರೆ ( ಚಾಳುಕ್ಯ ) ಚಕ್ರವರ್ತಿಯ ಆಸ್ಥಾನವನ್ನು ಸೇರಿ, ' ಈಗಳ್ ' ಎಂದರೆ ಗದಾಯುದ್ಧವನ್ನು ಬರೆವಂದು ಆ ವಸುಧಾಧಿಪತಿಯ ಕಟಕದಲ್ಲಿ, ಅಂದರೆ ರಾಜಧಾನಿಯಲ್ಲಿ ಅಥವಾ ಕೆಯ್ಕಡಗದಲ್ಲಿ, ಅದೇ ರೀತಿಯಾಗಿ ನಾಯಕರತ್ನವಾಗಿರುತ್ತೇನೆಂದೂ ಆತನು ಹೇಳಿಕೊಂಡಿರುವುದರಿಂದ, ಆತನಿದ್ದ ಮಂಡಳೇಶ್ವರರ ಆಸ್ಥಾನವೆಂದರೆ, ಅಜಿತಪುರಾಣದಲ್ಲಿ (I. ೭) ಗಂಗ ಮಂಡಲೇಶ್ವರ ಎಂದಿರುವಂತೆ ಇತಿಹಾಸದಿಂದಲೂ ಮಂಡಳೇಶ್ವರರೆಂದು ನಿಶ್ಚಿತವಾಗುವ ತಲಕಾಡಿನ ಪಶ್ಚಿಮಗಂಗರೆಂಬ ಆ ಮಂಡಳೇಶ್ವರರದೇ ಎಂದೂ ಅವರ ಒತ್ತಿನಲ್ಲಿಯೇ ಚಕ್ರವರ್ತಿಯನ್ನು ಹೇಳಿರುವುದರಿಂದ ಅವರಲ್ಲಿಂದಲೇ ಆತನು ನೆಟ್ಟಗೆ ಚಾಳುಕ್ಯ ಚಕ್ರವರ್ತಿಯ ಆಸ್ಥಾನಕ್ಕೆ ಹೋದನೆಂದೂ ಖಚಿತವಾಗುತ್ತದೆ.

ಇಷ್ಟೇ ಅಲ್ಲ, ಅಜಿತಪುರಾಣದ ( XII. ೯ )

ಪಿರಿಯಂ ಬೂತುಗನಾತನಿಂ ಮರುಳನಾತಂಗಂ ನೊಳಂಬಾಂತಕಂ
ಪಿರಿಯಂ ನೆಟ್ಟನೆ ದಾನಧರ್ಮದೆಡೆಯೊಳ್ ಚಾವುಂಡರಾಯಂ ಕರಂ ।

ಎಂಬಲ್ಲಿ ಗಂಗ ಮಂಡಳೇಶ್ವರರಾದ ಬೂತುಗ, ಅವನ ಹಿರೇ ಮಗನಾದ ಮರುಳ ಹಾಗೂ ಬೂತುಗನ ಮಗನೂ ಮರುಳನ ತಮ್ಮನೂ ಆದ ನೊಳಂಬಾಂತಕನೆಂಬ ಮಾರಸಿಂಹ ಎಂಬೀ ಮೂವರನ್ನು ಹೊಗಳಿ, ಅದರ ಒತ್ತಿನಲ್ಲಿಯೇ ಆ ಗಂಗ ಮಾರಸಿಂಹನಲ್ಲಿಯೂ ( ಕ್ರಿ. ಶ. 962-973 ) ಅವನ ತಮ್ಮಂದಿರಾದ ರಾಚಮಲ್ಲ ( 973-986 ) ಮತ್ತು ನೀತಿಮಾರ್ಗ ( 986-1003 ) ರಲ್ಲಿಯೂ ಮಂತ್ರಿಯೂ ಸೇನಾನಿಯೂ ಆಗಿದ್ದ ಪ್ರಸಿದ್ಧನಾದ ಆ ಚಾವುಂಡರಾಯನನ್ನು ಅಲ್ಲಿಯೂ ' ಅಜಿತ ಶೌರ್ಯ ಸ್ವಾಮಿ ಚಾವುಂಡರಾಯಂ ವರದ ' ನೆಂದು ಆ ಮುಂದೆಯೂ ( ಅಜಿತ XII. ೪೮ ) ಹೊಗಳಿದೆ ಮಾತ್ರವಲ್ಲ, ಅವನು ಬಿರುದಾಗಿ ಪಡೆದಿದ್ದ ರಾಯ ಎಂಬ ಹೆಸರನ್ನೂ ರನ್ನನು ತನ್ನ ಮಗನಿಗೆ ಇಕ್ಕಿದುದರಿಂದ ( ಅಜಿತ XII. ೫೩ ), ರನ್ನನಿಗೆ ಗಂಗರಸರಲ್ಲಿಯೂ ಚಾವುಂಡರಾಯನಲ್ಲಿಯೂ ಅಷ್ಟು ಗೌರವ, ಅಷ್ಟು ಶ್ರದ್ಧೆ, ಅಷ್ಟು ಭಕ್ತಿ ಇತ್ತೆಂದು ವ್ಯಕ್ತವಾಗುತ್ತದೆ. ಅದೇ ಕಾವ್ಯದಲ್ಲಿ ' ಸುರಪತಿ ಪೂಜಿತಂ ನೃಪತಿ ಸೇವಿತಮುನ್ನತ ಗಂಗ ಮಂಡಲೇಶ್ವರ ಮಕುಟಾರ್ಚಿತ '

---

೧. ಕಟಕಸ್ತ್ವದ್ರಿನಿತಂಬೇ ಬಾಹುಭೂಷಣೇ ॥ ಸೇನಾಯಾಂ ರಾಜಧಾನ್ಯಾಂ ಚ ।
( ಹೇಮಚಂದ್ರನ ಅನೇಕಾರ್ಥಸಂಗ್ರಹ, ಶ್ಲೋ. ೬೨೨-೬೨೩ )

ನೆಂದೂ ( ಅಜಿತ I. ೭) 'ಗುರುಗಳಜಿತಸೇನಾಚಾರ್ಯರಿಂದ್ರಾದಿವಂದ್ಯಾಚರಿತ' ರೆಂದೂ ( ಅಜಿತ XII. ೪೮ ) ಅದರ ಪ್ರತ್ಯಾಶ್ವಾಸದ ಕೊನೆಯಲ್ಲಿಯೂ 'ಸಕಲ ಮುನೀಂದ್ರ ವೃಂದ ವೃಂದಾರಕ ಶ್ರೀಮದಜಿತಸೇನ ಭಟ್ಟಾರಕ' ಎಂದೂ ಹೇಳಿರುವಲ್ಲಿ ರನ್ನನ ಗುರುವೆಂದು ಪ್ರತ್ಯಕ್ಷವಿರುವ ಆ ಅಜಿತಸೇನನು ಗಂಗ ಮಾರಸಿಂಹನ ಹಾಗೂ ಚಾವುಂಡರಾಯನ ಗುರುವೂ ಆಗಿದ್ದನೆಂದು ಚಾವುಂಡರಾಯನ ಚಾವುಂಡರಾಯಪುರಾಣದಲ್ಲಿಯ ( ಪು. ೪ ) 'ಪೆರ್ಮಾಡಿಯುಮಣ್ಣನುಮಜಿತಸೇನದೇವರ ಗುಡ್ಡರ್' ( ಪೆರ್ಮಾಡಿ ಅಂದರೆ ಮಾರಸಿಂಹ, ಅಣ್ಣನೆಂದರೆ ಚಾವುಂಡರಾಯ ) ಎಂಬ ಮಾತಿನಿಂದಲೂ 'ಶ್ರೀಮದಜಿತಸೇನ ಭಟ್ಟಾರಕ ಚರಣಕಮಲ ಚಂಚರೀಕ ಧರ್ಮವಿಜಯ ಶ್ರೀಮಚ್ಚಾವುಂಡ ರಾಜ' ಎಂಬ ಅದರ ಆಶ್ವಾಸಾಂತ್ಯದ ಗದ್ಯದಿಂದಲೂ ( ಪು. ೧೧೮ ), ಕೊನೆಗೆ ಆ ಗಂಗಮಾರಸಿಂಹನು 'ಒನ್ದು ವರ್ಷಂ ರಾಜ್ಯಮಂ ಪತ್ತುವಿಟ್ಟು ಬಂಕಾಪುರದೊಳಜಿತಸೇನ ಭಟ್ಟಾರಕರ ಶ್ರೀಪಾದ ಸನ್ನಿಧಿಯೊಳಾರಾಧನಾ ವಿಧಿಯಿಂ ಮೂಱು ದಿವಸಂ ನೋನ್ತು ಸಮಾಧಿಯಂ ಸಾಧಿಸಿದಂ' ಎಂಬ ಶ್ರವಣಬೆಳ್ಗೊಳ 59 ನೆಯ ಶಾಸನದ ( EC. II ) ಹೇಳಿಕೆಯಿಂದಲೂ ತಿಳಿಯುತ್ತದೆ. ಅತಏವ ರನ್ನನು ಓಲಗಿಸಿದ ಮಂಡಳೇಶ್ವರರು ತಲಕಾಡಿನ ಪಶ್ಚಿಮ ಗಂಗರಸರೆಂಬಲ್ಲಿ ಹೇಗೋ ಹಾಗೆಯೇ ಅವನು ತೈಲಪನ ಆಸ್ಥಾನದಲ್ಲಿದ್ದಾಗ ಅತ್ತಿಮಬ್ಬೆ ಅವನ ಪೋಷಕಳಾಗಿದ್ದಂತೆ, ಅವನು ಗಂಗರ ಆಸ್ಥಾನದಲ್ಲಿದ್ದಾಗ ಚಾವುಂಡರಾಯನು ಅವನ ಪೋಷಕನಾಗಿದ್ದನೆಂಬಲ್ಲಿಯೂ ಸಂಶಯವಿಲ್ಲ.

ನಮ್ಮ ವಿಚಾರಕ್ಕೆ ಒಳಪಟ್ಟ ಕಾಲದಲ್ಲಿದ್ದ ಜೈನರಾದ ಗಂಗರಸರ ಪೀಳಿಗೆಯೂ ಆಳ್ವಿಕೆಗಳೂ ಹೀಗಿವೆ[೧]—

ಬೂತುಗ

| ಮರುಳ | ಸತ್ಯವಾಕ್ಯ, ನೊಳಂಬಾಂತಕ, ಮಾರಸಿಂಹ ಪೆರ್ಮಾ(ನ)ಡಿ ಕ್ರಿ. ಶ. 962-973 | ಸತ್ಯವಾಕ್ಯ, I ರಕ್ಕಸಗಂಗ, ರಾಚಮಲ್ಲ ಪೆರ್ಮಾ(ನ)ಡಿ ಕ್ರಿ. ಶ. 973-986 | ಗೋವಿಂದರ, ನೀತಿಮಾರ್ಗ ಪೆರ್ಮಾ(ನ)ಡಿ ಕ್ರಿ. ಶ. 986-1003 | ವಾಸವ |
|---|---|---|---|---|
| | | | | ಗೋವಿಂದರ ಸತ್ಯವಾಕ್ಯ, II ರಕ್ಕಸಗಂಗ ಪೆರ್ಮಾನಡಿ ಕ್ರಿ. ಶ. 1003-1004 |

೧. ಕಂಠೀರವದ ದಸರಾ ಸಂಚಿಕೆ ( 1937 ), ಪು. ೯೭

ನೊಳಂಬಾಂತಕನೆಂಬ ಗಂಗ ಮಾರಸಿಂಹನ ಹೆಸರು ಅಜಿತಪುರಾಣದಲ್ಲಿ (XII. ೯) ಇದೆಯಾದರೂ, ಅವನು ಕ್ರಿ. ಶ. 973ರಲ್ಲಿ ರಾಜ್ಯವನ್ನು 'ಪತ್ತುವಿಟ್ಟು' ಅಂದರೆ ಆ ರಾಜ್ಯಭಾರದಲ್ಲಿ ತನಗಿದ್ದ ಸಂಬಂಧವನ್ನು ಕಳಚಿಬಿಟ್ಟು, ಬಂಕಾಪುರಕ್ಕೆ ಅಜಿತಸೇನನಿದ್ದಲ್ಲಿಗೆ ಹೋಗುವಾಗ ರನ್ನನಿಗೆ ೨೪ ರಷ್ಟೇ ವಯಸ್ಸಾಗುವುದರಿಂದ, ಆ ವಯಂಚೆ ತಕ್ಕಷ್ಟಾದರೂ ಕಾಲಕ್ಕೆ ಸಾಮಂತರ ಆಸ್ಥಾನದಲ್ಲಿ ಇದ್ದಿರಬೇಕಾದ ಈತನು ಗಂಗರ ಆಸ್ಥಾನವನ್ನು ಮಾರಸಿಂಹನ ಆಳಿಕೆಯಲ್ಲಿ ಅಲ್ಲ, ಅವನ ತಮ್ಮನಾದ I ರಕ್ಕಸಗಂಗನೂ ಎಂಬ ಸತ್ಯವಾಕ್ಯ ರಾಚಮಲ್ಲನ ಆಳಿಕೆಯಲ್ಲಿ (973-986) ಸೇರಿರಬೇಕು. ತನ್ನ 'ಅರಸಂ ರಕ್ಕಸಗಂಗಂ' ಎಂದಿರುವ ಛಂದೋಂಬುಧಿಯ (I. ೨೭) ಬ್ರಾಹ್ಮಣ ನಾಗವರ್ಮನೂ ಇದೇ I ರಕ್ಕಸಗಂಗ ರಾಚಮಲ್ಲನ ಆಸ್ಥಾನದಲ್ಲಿದ್ದನು.[೧] ಛಂದೋಂಬುಧಿಯಲ್ಲಿ (I. ೨೭; ೨೮) ಆತನು ತನ್ನ 'ಗುರುಗಳ್ ನೆಗಟ್ದ ಜಿತಸೇನದೇವ'ರೆಂದೂ ತನ್ನನ್ನು 'ನೃಪನಣ್ಣ'ನೆಂಬ ಆ 'ಮಂಡಳಿಕರ ಮಂತ್ರಿ ಸಂಧಿವಿಗ್ರಹಿರಾಯುಂ ಕೊಂಡಾಡಿ ಪೊರೆದ'ನೆಂದೂ ಹೇಳಿರುವುದರಿಂದ, ರನ್ನನ ಗುರುವಾದ ಅಜಿತಸೇನನೇ ಆತನ ಗುರುವೂ ರನ್ನನ ಪೋಷಕನಾದ ನೃಪ=ರಾಯ ಎಂದೂ ಅಣ್ಣನೆಂದೂ ಬಿರುದೊ ಉಪನಾಮವೊ ಇದ್ದ ಆ ಚಾವುಂಡರಾಯನೇ ಆತನ ಪೋಷಕನೂ ಆಗಿದ್ದರೆಂದು ತಿಳಿಯುತ್ತವೆ. ಛಂದೋಂಬುಧಿಯ ಗ್ರಂಥಾವತಾರದ (I. ೧) ವಿಷ್ಣುಸ್ತುತಿಯಲ್ಲಿ

.... ಅಶೇಷ ಭೂ ಭುವನ ಮಂಡಲವಲ್ಲಭನಾದ ದೇವನೀ
ಗಾವಗಮೆಮ್ಮ ಬೇಳ್ಪ ವರದುನ್ನತಿಯುಂ ಸುಕವೀಂದ್ರವಲ್ಲಭಂ ॥

ಎಂದು ನಾಗವರ್ಮನು 'ಮಂಡಲ ವಲ್ಲಭನಾದ' ಅಂದರೆ ಮಂಡಲೇಶ್ವರನಾದ ತನ್ನ ಅರಸನನ್ನು ವಿಷ್ಣುವೊಡನೆ ಹೋಲಿಸಿರುವ ಆ ಶ್ಲೇಷೆಯಲ್ಲಿ ಆತನನ್ನು 'ಸುಕವೀಂದ್ರವಲ್ಲಭ'ನೆಂದೂ ಶಾ. ಶ. ೯೯೯ ಪಿಂಗಳ ಸಂ| ಜ್ಯೇಷ್ಠ ಶುದ್ಧ ೨ ಬೃಹಸ್ಪತಿವಾರ=ಕ್ರಿ. ಶ. 1077 ಎಪ್ರಿಲ್ 27 ನೆಯ ತಾರೀಕಿನ ನಗರ 35 ನೆಯ ಹೊಂಬಚ್ಚದ ಶಿಲಾಶಾಸನದಲ್ಲಿ (EC VIII) ರುವ ಗಂಗರಸರ ಪ್ರಶಸ್ತಿಯಲ್ಲಿ ಬೇರೆ ಯಾವೊಬ್ಬ ಗಂಗರಸನನ್ನೂ ಹೊಗಳಿಲ್ಲದಂತೆ ಆತನನ್ನು ಮಾತ್ರ (ಪಂ. ೪೧-೪೨)

ಶ್ರೀರಾಚಮಲ್ಲ ದೇವಂ
ಭಾರತಿಕೇಯೂರ ರಾಜಶೇಖರನಾತಂ ।
ಭಾರವಿ ಸಾಕ್ಷಾದ್ಬಾಣ ಮ
ಯೂರಂ ವಾಲ್ಮೀಕಿ ಕಾಳಿದಾಸ ವ್ಯಾಸಂ ॥

---

೧. ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ XX ಪು. ೩೦-೩೨, ೩೯-೪೫; ಕಂಠೀರವದ ದಸರಾ ಸಂಚಿಕೆ (1937), ಪು. ೯೧.

ಎಂದೂ ಇರುವುದರಿಂದ ವಾಲ್ಮೀಕಿ-ವ್ಯಾಸ-ಕಾಳಿದಾಸಾದಿ ಸಂಸ್ಕೃತ ಮಹಾಕವಿಗಳಿಗೆ ಸಮಾಕೃತನಾದ ಹಾಗೂ ಸುಕವೀಂದ್ರವಲ್ಲಭನೆಂಬ ಆ ರಾಚಮಲ್ಲನು ತಾನೂ ಮಹಾಕವಿಯಾಗಿದ್ದು ಅವರಂತೆಯೇ ಪ್ರಾಯಃಶಃ ಸಂಸ್ಕೃತದಲ್ಲೇ ಏನೋ ಕಾವ್ಯಗಳನ್ನು ರಚಿಸಿರಬೇಕು.

ಗಂಗರಲ್ಲಿಂದ ಚಾಳುಕ್ಯರಲ್ಲಿಗೆ ತೆರಳಿ ಅಲ್ಲಿದ್ದಂದು ರನ್ನನು ರಚಿಸಿದ ಆತನ ಧರ್ಮಕಾವ್ಯವಾದ ಅಜಿತಪುರಾಣದಲ್ಲಿ ಆತನ ಗುರುವಾದ ಅಜಿತಸೇನನ ಹೆಸರು ಹೇಗೂ ಇದೆಯಷ್ಟೇ, ಚಾವುಂಡರಾಯನ ಹೆಸರೂ ಇದೆಯಾದರೂ ತಾನೂ ಚಾವುಂಡರಾಯನೂ ಸ್ವತಃ ಓಲಗಿಸಿದ್ದ ತಮ್ಮೊಡೆಯನೂ ತಮ್ಮಂತೆಯೇ ಸ್ವಯಂ ಕವಿಯೂ ಆಗಿದ್ದ ಗಂಗರಸನಾದ ಜೈನ ರಾಚಮಲ್ಲನ ಹೆಸರಿಲ್ಲಮದರಿಂದ, ರನ್ನನಿಗೆ ತನ್ನ ಅರಸನಾದ ರಾಚಮಲ್ಲನಿಗಿಂತ ಹೆಚ್ಚಾದ ಒಲವರವು ಅವನ ಮಂತ್ರಿಯೂ ಸೇನಾನಿಯೂ ಮಾತ್ರವಲ್ಲ, ಗಂಗರ ಆಸ್ಥಾನದಲ್ಲಿ ಪ್ರಾಯಃಶಃ ಎಲ್ಲವೂ ತಾನೇ ಆಗಿದ್ದ ಚಾವುಂಡರಾಯನಲ್ಲಿ ಇದ್ದಿರಬೇಕು, ರನ್ನನು ರಾಚಮಲ್ಲನಿಗಿಂತ ಹೆಚ್ಚಾಗಿ ಚಾವುಂಡರಾಯನ ಆಳಾಗಿರಬೇಕು; ಹಾಗಾದರೆ ರನ್ನನು ಪ್ರಾಯಃಶಃ ಚಾವುಂಡರಾಯನ ಪ್ರೇರಣೆಯಿಂದಲೇ ರಾಚಮಲ್ಲನ ಆಸ್ಥಾನವನ್ನು ಪ್ರವೇಶಿಸಿ ಆತನಿಂದಲೇ ಅಲ್ಲಿ ಅಭ್ಯುದಿತನಾಗಿರಬೇಕು.೧

ರಾಚಮಲ್ಲನ ಆಳಿಕೆಯಲ್ಲಿ (ಕ್ರಿ. ಶ. 973–986) ಚಾವುಂಡರಾಯನು ತನ್ನ ಗುರುವಾದ ಅಜಿತಸೇನನಿಂದ ಶ್ರವಣಬೆಳ್ಗೊಳದಲ್ಲಿ ಜರುಗಿಸಿದ ಲೋಕವಿಖ್ಯಾತವಾದ ಆ ಗೋಮಟೇಶ್ವರ ಮಹಾಮೂರ್ತಿಯ ಪ್ರತಿಷ್ಠೆಯನ್ನು ಕುರಿತು ಕ್ರಿ ಶ. 978ರಲ್ಲಿ ರಚಿಸಿ ಮುಗಿಸಿದ ತನ್ನ ಚಾವುಂಡರಾಯ ಪುರಾಣದಲ್ಲಿ ಹೇಳಿಲ್ಲಮದರಿಂದ, ಕ್ರಿ. ಶ. 978 ರಿಂದ 986 ರೊಳಗೆ ನಡೆದಿರಬೇಕಾದ ಆ ಪ್ರತಿಷ್ಠೆಯ ಮುಹೂರ್ತವನ್ನು ಕುರಿತು ಅಲ್ಲಿಂದ ಎಷ್ಟೋ ಈಚೆಯ ಕ್ರಿ. ಶ. ಸು 1550 ರಲ್ಲಿ ಇದ್ದನೆಂದು ಊಹಿಸಲ್ಪಟ್ಟಿರುವ, ಹೇಗೂ ತನ್ನ ಚಂದ್ರಪ್ರಭಚರಿತೆ ಎಂಬ ಕನ್ನಡ ಸಾಂಗತ್ಯ ಕಾವ್ಯದಲ್ಲಿ ಕನ್ನಡ ಕವಿ ಮಧುರನನ್ನು ಸ್ಮರಿಸಿರುವುದರಿಂದ ಕ್ರಿ. ಶ 14 ನೆಯ ಶತಕಕ್ಕಿಂತ ಈಚೆಯವನಾದ ಪಿರಿಯಪಟ್ಟಣದ ದೊಡ್ಡಯ್ಯನೆಂಬವನ (ಕರ್ಣಾಟಕ ಕವಿಚರಿತೆ II. ಪು. 251) ಬಾಹುಬಲಿಚರಿತ್ರ ಅಥವಾ ಭುಜಬಲಿ ಶತಕವೆಂಬ ಸಂಸ್ಕೃತ ಕವಿತೆಯಲ್ಲಿಯ

೧. ಹೀಗೆಯೇ ರೋಮಿಯ ಪ್ರಥಮ ಚಕ್ರವರ್ತಿಯಾದ ಔಗುಸ್ತನ (Augustus) ಪ್ರಾಯಃಶಃ ಆಸ್ಥಾನ ಕವಿಗಳೆನಿಸುವ ವರ್ಗಿಲನೂ (Virgil) ಹೊರಾಸನೂ (Horace) ತಮ್ಮ ಅರಸನಿಗಿಂತ ಹೆಚ್ಚಾಗಿ ಅವನ ಆಸ್ಥಾನಿಕರಲ್ಲಿ ಪ್ರಮುಖನೊಬ್ಬನಾದ ಮೇಸೀನ (Maecenas) ನಿಗೆ ಹೊಂದಿಕೆಯಾಗಿದ್ದು ಆತನಿಂದ ಅಭ್ಯುದಿತರಾದರು.

ಕಲ್ಕ್ಯಬ್ದೇ ಷಟ್ಛತಾಖ್ಯೇ ವಿನುತ ವಿಭವ ಸಂವತ್ಸರೇ ಮಾಸಿ ಚೈತ್ರೇ
ಪಂಚಮ್ಯಾಂ ಶುಕ್ಲಪಕ್ಷೇ ದಿನಮಣಿ ದಿವಸೇ ಕುಂಭಲಗ್ನೇ ಸುಯೋಗೇ।
ಸೌಭಾಗ್ಯೇ ಮಸ್ತ ನಾಮ್ನಿ ಪ್ರಕಟಿತ ಭಗಣೇ ಸುಪ್ರಶಸ್ತಾಂ ಚಕಾರ
ಶ್ರೀಮಚ್ಚಾಮುಂಡರಾಜೋ ಬೆಳುಗುಳನಗರೇ ಗೋಮಟೇಶ
ಪ್ರತಿಷ್ಠಾಮ್[೧] ॥ ೫೫ ॥

ಎಂಬೀ ಸ್ರಗ್ಧರೆಯಲ್ಲಿ ಆ ಪ್ರತಿಷ್ಠೆ ಕಲ್ಕಿ ಸಂವತ್ಸರದ ೬೦೦ ನೆಯ ( ಅಥವಾ ೬ನೆಯ ಶತಮಾನದಲ್ಲಿಯ ? ) ವಿಭವ ಸಂವತ್ಸರದ ಚೈತ್ರ ಶುಕ್ಲ ಪಂಚಮಿ ರವಿವಾರ ಮೃಗಶಿರಾ ನಕ್ಷತ್ರವೂ ಸೌಭಾಗ್ಯಯೋಗವೂ ಇದ್ದಂದಿನ ಕುಂಭ ಲಗ್ನದಲ್ಲಿ ನೆರವೇರಿತೆಂಬಲ್ಲಿ ಕಲ್ಕಿ ಸಂವತ್ಸರ ಎಂದರೆ ಏನೆಂದು ಕಂಡಿತವಾಗಿ ತಿಳಿಯದಾದರೂ, ರಾಚಮಲ್ಲನ ಆಳಿಕೆಯ ಕ್ರಿ. ಶ. 973 ನೆಯ ಶ್ರೀಮುಖದಿಂದ 986 ನೆಯ ವ್ಯಯದವರೆಗಣ ದಕ್ಷಿಣ ಸಂಪ್ರದಾಯದ ಸಂವತ್ಸರಗಳಲ್ಲಿ ವಿಭವ ಸಂವತ್ಸರವು ಸರ್ವಥಾ ಬಾರದಾದರೂ, ಸಂವತ್ಸರದ ಹೆಸರನ್ನು ಬಿಟ್ಟು ಮಿಕ್ಕಮಟ್ಟಿಗೆ ದೊಡ್ಡಯ್ಯನ ಹೇಳಿಕೆಯನ್ನು ನಚ್ಚಬಹುದಾದರೆ, ಮತ್ತು ಹಾಗಾದರೆ ಮಾತ್ರ, ಕ್ರಿ. ಶ. 978 ರಿಂದ 986 ರೊಳಗಣ ಅವಷ್ಟೂ ವರ್ಷಗಳಲ್ಲಿ ಚೈತ್ರ ಶುಕ್ಲ ಪಂಚಮಿಯ ತಿಥಿ ಕ್ರಿ. ಶ. 981 ನೆಯ ವಿಷು ( ವೃಷ ) ಸಂವತ್ಸರದಲ್ಲಿ ಮಾತ್ರ ಮಾರ್ಚಿ 13 ನೆಯ ತಾರೀಕಿನಂದು ಆದಿತ್ಯವಾರ ಬಂದಿದ್ದು ಅಂದು ಮೃಗಶಿರಾ ನಕ್ಷತ್ರವೂ ಸೌಭಾಗ್ಯಯೋಗವೂ ಇದ್ದುದರಿಂದ, ಆ ಪ್ರತಿಷ್ಠೆ ಪ್ರಾಯಶಃ ಆ 981 ಮಾರ್ಚಿ 13 ನೆಯ ತಾರೀಕು ರವಿವಾರದಂದು ನೆರವೇರಿರಬೇಕು. ಅದುವರೆಗೆ ಸಾಮಂತರ ಆಸ್ಥಾನದಲ್ಲಿದ್ದ ರನ್ನನು ಪ್ರಾಯಶಃ ಆ ಮಹೋತ್ಸವಕ್ಕಾಗಿ ಶ್ರವಣಬೆಳ್ಗೊಳಕ್ಕೆ ಹೋಗಿರಬೇಕು. ಹೆಚ್ಚಾಗಿ ಉತ್ತರ ಕರ್ಣಾಟಕದಲ್ಲಿಯ ಬಂಕಾಪುರದತ್ತಕಡೆಯಲ್ಲಿದ್ದ ಅಜಿತಸೇನನು ಆ ಗೋಮಟೇಶ್ವರ ಪ್ರತಿಷ್ಠೆಯನ್ನು ಸ್ವಹಸ್ತದಿಂದ ನೆರವೇರಿಸುವ ಬಗ್ಗೆ ಚಾವುಂಡರಾಯನಿಂದ ಪ್ರಾರ್ಥಿತನಾಗಿ ದಕ್ಷಿಣ ಕರ್ಣಾಟಕದಲ್ಲಿಯ ಶ್ರವಣಬೆಳ್ಗೊಳಕ್ಕೆ ಪಯಣಿಸುತ್ತಿದ್ದ ದಾರಿಯಲ್ಲಿ ರನ್ನನೂ ಆ ಪಂಗಡದಲ್ಲಿ ಸೇರಿ ಆತನನ್ನು ತನ್ನ ಗುರುವೆಂದು ಸ್ವೀಕರಿಸಿ ಆತನ ಜತೆಯಲ್ಲಿ ಶ್ರವಣಬೆಳ್ಗೊಳಕ್ಕೆ ಹೋದನೇನೋ; ಅಲ್ಲಿ ಈತನ ಕವಿತಾಶಕ್ತಿಯನ್ನು ಕಂಡ ಸ್ವಯಂ ಕವಿಯಾದ ಚಾವುಂಡರಾಯನು ಅಲ್ಲಿಂದ ಈತನನ್ನು ತನ್ನ ಅರಸನ ಆಸ್ಥಾನಕ್ಕೆ ಕೊಂಡೊಯ್ದನೇನೋ, ಅಥವಾ ಸಾಮಂತರ ಆಸ್ಥಾನದ ಯೋಗ್ಯತೆಗೆ ಮಿಕ್ಕಿದ ಈತನನ್ನು ಮಂಡಳೇಶ್ವರರ ಆಸ್ಥಾನದಲ್ಲಿ ಇರಿಸಿಕೊಳ್ಳುವಂತೆ ಅಜಿತಸೇನನೇ ರಾಚಮಲ್ಲನಿಗೂ ಚಾವುಂಡರಾಯನಿಗೂ

೧. ಈ ಸ್ರಗ್ಧರೆಯ ೨-೩ನೆಯ ಚರಣಗಳಿಗೆ ' ಕುಂಭಲಗ್ನೇ ಮನೋಜ್ಞೇ ಸೌಭಾಗ್ಯಾಖ್ಯಾನುಯೋಗೇ ಮೃಗಶಿರ ಭಗಣೇ ಸುಪ್ರಶಸ್ತಾಂ ಚಕಾರ' ಎಂದೂ ೪ ನೆಯ ಚರಣದಲ್ಲಿಯ ' ಗೋಮಟೇಶ' ಎಂಬುದಕ್ಕೆ ' ಗೊಮ್ಮಟೇಶ' ಎಂದೂ ಪಾಠಾಂತರಗಳಿವೆ.

ರನ್ನನನ್ನು ಒಪ್ಪಿಸಿರಬಹುದೇನೋ. ಹೇಗೂ ರನ್ನನು ಕೆಲಕಾಲಕ್ಕಾದರೂ ಶ್ರವಣ ಬೆಳ್ಗೊಳದಲ್ಲಿ, ಅಲ್ಲಿ ಪ್ರಾಯಶಃ ತನ್ನ ಗುರುವಾದ ಅಜಿತಸೇನನ ಸನ್ನಿಧಿಯಲ್ಲಿ, ಇದ್ದನೆಂಬುದಕ್ಕೆ ಅಲ್ಲಿಯ ಚಿಕ್ಕಬೆಟ್ಟದಲ್ಲಿ ಕ್ರಿ. ಶ. 9–10 ನೆಯ ಶತಮಾನದ ಅಕ್ಷರಗಳಲ್ಲಿ ಕೆತ್ತಿರುವ 'ಶ್ರೀ ಕವಿರತ್ನ' ಎಂಬ ನಂ. 40 ಮತ್ತು 449 ನೆಯ ಶಾಸನಗಳ (EC II) ಬೇಕಾದಷ್ಟು ಆಧಾರವಿದೆ.

ಆ ಗೋಮಟೇಶ್ವರ ಮಹಾಮೂರ್ತಿಯಲ್ಲಿ ಬಿಂಬಿತನಾದ ಬಾಹುಬಲಿ ಕುಮಾರನು ಜೈನರ ಆದಿಜಿನನಾದ ಋಷಭನಾಥ ತೀರ್ಥಂಕರನ ಮಗನು, ಮತ್ತು ಆ ತೀರ್ಥಂಕರನ ಹಿರೇ ಮಗನೂ ದ್ವಾದಶ ಚಕ್ರವರ್ತಿಗಳಲ್ಲಿ ಮೊತ್ತ ಮೊದಲಿಗನೂ ಆದ ಭರತೇಶ್ವರನ ಕಿರೇ ತಮ್ಮನು. ಆ ಬಾಹುಬಲಿಯ ಲೋಕಾತಿ ಶಯವಾದ ಆ ಉತ್ತುಂಗ ವಿಗ್ರಹವೆಂತೋ ಅಂತೆಯೇ ತ್ಯಾಗಮೂರ್ತಿಯಾದ ಆತನ ಅಲೌಕಿಕ ಚರಿತ್ರವೂ ಯಾರ ಮನಸ್ಸನ್ನೂ ಸೆಳೆಯಬೇಕು, ಕವಿಯ ಮನಸ್ಸನ್ನು ಹೇಗೂ ಸೆಳೆಯಲೇಬೇಕು. ಆದರೆ ಅವನ ಕಥೆಯಾದರೊ ಆದ್ಯ ತೀರ್ಥಂಕರನ ಕಥೆಯಲ್ಲಿ ಉಪಕಥೆಯಾಗಿ ಪ್ರಸ್ತಾವಿಸಲ್ಪಡುವ ಭರತ ಚಕ್ರವರ್ತಿಯ ಕಥೆಯಲ್ಲಿ ತಾನೇ ಒದಗುತ್ತದಲ್ಲದೆ, ಜೈನಪುರಾಣಗಳಲ್ಲಿ ಅನ್ಯಥಾ ಬಾರದು. ಋಷಭನಾಥನ ಕಥೆಯನ್ನು ಹೇಗೂ ಪಂಪನ 'ಉಪಮಾತೀತಮೆನಿಪ್ಪ' (ಅಜಿತ XII. ೨೬) ಆದಿಪುರಾಣದಲ್ಲಿ ಹೇಳಿ ತೀರಿದೆ; ಅದರಲ್ಲಿ ಭರತೇಶ್ವರನ ಕಥೆಯನ್ನೂ ಹೇಳಿದೆ ಯಾದರೂ ಉಪಕಥೆಯಾಗಿ ತಾನೆ, ಅದನ್ನಾದರೆ ವಿಸ್ತರಿಸಿ ಸ್ವತಂತ್ರ ಕಾವ್ಯವಾಗಿ ಬರೆಯಲಿಕ್ಕೆ ಬೇಕಾದಷ್ಟು ಅನುಕೂಲವಿದೆ. ಅತಏವ ಭರತನ ಕಥೆಯಲ್ಲಿ ಕೋವಲ್ಲದೆ ಬಾಹುಬಲಿಯ ಚರಿತ್ರವನ್ನು ಗ್ರಂಥಿಸಲಾಗದ ಕಾರಣ ಶ್ರವಣಬೆಳ್ಗೊಳ ದಲ್ಲಾದ ಆ ಬಾಹುಬಲಿಯ ಗೋಮಟೇಶ್ವರ ಪ್ರತಿಷ್ಠೆಯ ಸ್ಮಾರಕವಾಗಿ ರನ್ನನು ಭರತ-ಬಾಹುಬಲಿಯರ ಕಥಾತ್ಮಕವಾದ ಕಾವ್ಯವನ್ನು ರಚಿಸಿ, ಅದರ ಉದ್ದೇಶವು ಬಾಹುಬಲಿಯ ಮೂರ್ತಿಯ ಆ ಪ್ರತಿಷ್ಠೆಯನ್ನು ಕುರಿತೇ ಆದರೂ ಅದರ ವಾಸ್ತವಿಕ ಕಥಾನಾಯಕನು ಚಕ್ರೇಶ್ವರನಾದ ಭರತನಾಗುವುದರಿಂದ,ಅದನ್ನು ಆತನ ಹೆಸರಿಸಿಂದ ಚಕ್ರೇಶ್ವರಚರಿತ ಎಂದಿರಬೇಕು. ಅದಲ್ಲದೆ ಗಂಗರು ಮಂಡ ಳೇಶ್ವರರೆಂದು ಅವರ ಶಾಸನಗಳಿಂದಲೂ ಅಜಿತಪುರಾಣದಲ್ಲಿಯ (I. ೭) 'ಗಂಗ ಮಂಡಳೇಶ್ವರ' ಎಂಬುದರಿಂದಲೂ ತಿಳಿಯುತ್ತದಾದರೂ, ಮಂಡಲಚಕ್ರ ಎಂಬ ವೀಪ್ಸೆಗೆ ಮಂಡಲವೆಂದೇ ಅರ್ಥವಾಗುವುದರಿಂದ ಮಂಡಲೇಶ್ವರರೇ ಎಂದೋ, ಇಲ್ಲವೆ ಸ್ವಯಂ ಚಕ್ರೇಶ್ವರರೇ ಅಲ್ಲದಿದ್ದರೂ ತಮ್ಮ ರಾಜ್ಯಮಂಡಲದಲ್ಲಿ ಚಕ್ರೇಶ್ವರರಂತೆ ಸ್ವತಂತ್ರರಾಗಿರುವರೆಂಬ ಅರ್ಥದಲ್ಲಿ ಮಂಡಲೇಶ್ವರರಾಗಿದ್ದರೂ ಇತರ ಅಧಿರಾಜರಿಗೆ ಒಳಪಟ್ಟವರಲ್ಲ ಸ್ವತಂತ್ರರಾದವರೆಂದೋ, ಅವರನ್ನು ತನ್ನ ಗದಾಯುದ್ಧದಲ್ಲಿ (I.೪೦)

'ಗಂಗಮಂಡಲ ಚಕ್ರೇಶ್ವರ' ಎಂಬ ಅದೊಂದು ವಿಶೇಷ ಬಿರುದಿನಿಂದ ಹೇಳಿರುವ ರನ್ನನು ಅವರ ಆಸ್ಥಾನದಲ್ಲಿ ರಚಿಸಿದ ಕಾವ್ಯವನ್ನು ಭರತೇಶ್ವರಚರಿತ ಎನ್ನದೆ ಚಕ್ರೇಶ್ವರಚರಿತ ಎಂದಿರುವಲ್ಲಿ ತನ್ನ ಗಂಗರಸನ ಆ ಬಿರುದನ್ನೂ ಧ್ವನಿಸಿರ ಬಹುದು.

ಇನ್ನು ಚಕ್ರೇಶ್ವರಚರಿತದ ರಚನಕಾಲವನ್ನು ಕುರಿತು ವಿಚಾರಿಸುವಲ್ಲಿ ಮೇಲೆ ಕಂಡಿರುವಂತೆ ದೊಡ್ಡಯ್ಯನ ಹೇಳಿಕೆಯನ್ನು ಒಪ್ಪಿದರೆ, ಶ್ರವಣಬೆಳ್ಗೊಳದ ಪ್ರತಿಷ್ಠೆ ಕ್ರಿ. ಶ. 981 ಮಾರ್ಚಿ 13ನೆಯ ತಾರೀಕಿನಂದು ಆಯಿತೆಂದು ಸಿದ್ಧವಾಗುವುದರಿಂದ, ಆ ಪ್ರತಿಷ್ಠೆಯ ಸ್ಮಾರಕವಾಗಿ ರನ್ನನು ಬರೆದ ಚಕ್ರೇಶ್ವರಚರಿತವು ಕ್ರಿ. ಶ. 981-982 ರೊಳಗೆ ರಚಿತವಾಗಿರಬೇಕೆಂದು ನಿಶ್ಚಯಿಸಬಹುದು.

ಅಜಿತಪುರಾಣದ ( XII. ೯ )

ಪಿರಿಯಂ ಬೂತುಗನಾತನಿಂ ಮರುಳನಾತಂಗಂ ನೊಳಂಬಾಂತಕಂ
ಪಿರಿಯಂ ನೆಟ್ಟನೆ ದಾನಧರ್ಮದೆಡೆಯೊಳ್ ಚಾವುಂಡರಾಯಂ ಕರಂ ।
ಪಿರಿಯಂ ಶಂಕರಗಂಡನಲ್ತೆ ಪಿರಿಯಂ ತದ್ವಾರಮಂ ಪೊತ್ತು ನಿ
ತ್ತರಿಸುತ್ತಿರ್ಪುದಱಿಂದೆ ನೀನೆ ಪಿರಿಯೈ ಶ್ರೀದಾನ ಚಿಂತಾಮಣೀ ॥

ಎಂಬ ಮತ್ತೇಭವಿಕ್ರೀಡಿತದಲ್ಲಿ ಹೇಳಿರುವ ಆ ಜಿನಭಕ್ತರಲ್ಲಿ ನೆಟ್ಟನೆಯಲ್ಲಿಯೂ ದಾನಧರ್ಮದಲ್ಲಿಯೂ ಒಬ್ಬರಿಂದ ಒಬ್ಬರು ಹೆಚ್ಚಿಗೆ ಎಂದಿರುವಲ್ಲಿ ಹಿಂದಣವನು ಬದುಕಿದ್ದಂದೇ ಮುಂದಣವನು ಆತನನ್ನು ಹಿಂದಿಕ್ಕಿದನೆಂದರೆ,ಕೊನೆಯಲ್ಲಿ ಹೆಸರಿಸಿದ ದಾನಚಿಂತಾಮಣಿ ಎಂಬ ಅತ್ತಿಮಬ್ಬೆಯೊಬ್ಬಳನ್ನು ಬಿಟ್ಟು ಮಿಕ್ಕೆಲ್ಲವರನ್ನು ತೆಗಳಿ ದಂತಲ್ಲದೆ ಹೊಗಳಿದಂತಾಗದು. ಆದರೆ ತಂತನ್ನ ಕಾಲದಲ್ಲಿ ಅದ್ವಿತೀಯ ಧರ್ಮಿಷ್ಠ ನೆಂದಿದ್ದ ಒಬ್ಬನು ಕಾಲವಾದ ಮೇಲೆ ತಾನೆ ಮತ್ತೊಬ್ಬನು ಆತನನ್ನು ಮಿಕ್ಕಿದ ನೆಂದರೆ ಅವರೆಲ್ಲರನ್ನೂ ಹೊಗಳಿದಂತಲ್ಲದೆ ತೆಗಳಿದಂತಾಗದು. ಇಲ್ಲಿ ರನ್ನನ ಉದ್ದೇಶ ವಾದರೂ ಸ್ವಜ್ಞಾತೀಯ ಆ ಧರ್ಮವೀರರನ್ನೂ ದಾನಶೂರರನ್ನೂ ಹೊಗಳುವದಲ್ಲದೆ ತೆಗಳುವದೆಂದಿಗೂ ಅಲ್ಲ. ಅಥವಾ ಯಾರನ್ನು ತೆಗಳಿದರೂ ತಾನು ಓಲಗಿಸಿದ ಗಂಗ ರಾಚಮಲ್ಲನ ತಂದೆಯಾದ ಬೂತುಗನನ್ನೂ ಬೂತುಗನ ಹಿರೀ ಮಗನಾದ ಮರುಳ ನನ್ನೂ ಬೂತುಗನ ಮತ್ತೊಬ್ಬ ಮಗನೂ ತನ್ನ ಗುರುವಾದ ಅಜಿತಸೇನನ ಶಿಷ್ಯ ನಾಗಿದ್ದ ಕಾರಣ ತನ್ನ ಸಧರ್ಮನೂ ಆದ ನೊಳಂಬಾಂತಕನೆಂಬ ಮಾರಸಿಂಹನನ್ನೂ ಗಂಗರ ಆಸ್ಥಾನದಲ್ಲಿ ತನ್ನ ಪೋಷಕನಾಗಿದ್ದ ಹಾಗೂ ಅಜಿತಪುರಾಣದಲ್ಲಿ (XII.೪೮) 'ಅಜಿತಶೌರ್ಯಸ್ವಾಮಿ ಚಾವುಂಡರಾಯಂ ವರದ' ನೆಂದ ಆ ಚಾವುಂಡರಾಯ ನನ್ನೂ ತೆಗಳುವನೆ? ಹಾಗೆಯೇ ಅವರೊಂದಿಗೆ ಹೆಸರಿಸಿದ ಶಂಕರಗಂಡನನ್ನೂ ತೆಗಳುವನೆ? ಅತಏವ ಅಜಿತಪುರಾಣವನ್ನು ಬರೆವ ಹೊತ್ತಿಗೆ ಈ ಪದ್ಯದಲ್ಲಿ

ಹೇಳಿರುವ ಬೂತುಗನೂ ಆ ಮೇಲೆ ಮರುಳನೂ ಆ ಮೇಲೆ ಮಾರಸಿಂಹನೂ ಆ ಮೇಲೆ ಚಾವುಂಡರಾಯನೂ ಆ ಮೇಲೆ ಶಂಕರಗಂಡನೂ ಕ್ರಮವಾಗಿ ದಿವಂಗತರಾಗಿ ಆಗ್ಗೆ ಅವರೆಲ್ಲರ ನೆಟ್ಟನೆಯ ಹಾಗೂ ದಾನಧರ್ಮದ ಕಾರ್ಯಭಾರವನ್ನು ದಾನ ಚಿಂತಾಮಣಿಯಾದ ಅತ್ತಿಮಬ್ಬೆ ಹೊತ್ತಿದ್ದಳೆಂದು ನಿಷ್ಪನ್ನವಾಗುತ್ತದೆ. ಹಾಗಾದರೆ ಆಗ್ಗೆ ಚಾವುಂಡರಾಯನು ಗತಿಸಿ ಕೆಲವಾದರೂ ವರ್ಷಗಳಾಗಿರಬೇಕು.

ರನ್ನನಿಂದ ಅಜಿತಪುರಾಣವನ್ನು ಬರೆಯಿಸಿದ ಕ್ರಿ. ಶ. 993 ರಲ್ಲಿ ನಾಗದೇವನ ಹೆಂಡತಿ ಎಂದೂ ಪಡೆವಳ ತೈಲನ ತಾಯಿ ಎಂದೂ ಅದರಿಂದಲೇ (I. ೩೮ ಗ; ೪೮) ತಿಳಿವ ದಾನಚಿಂತಾಮಣಿ ಅತ್ತಿಮಬ್ಬೆ ಹೇಗೂ ಇದ್ದಳಷ್ಟೇ. ಆ ಮೇಲೂ ಲಕ್ಕುಂಡಿಯ ಜೈನ ಬಸದಿಯಲ್ಲಿಯ ಶಾ. ಶ. ೯೨೯ ಪ್ಲವಂಗ ಸಂ| ಫಾಲ್ಗುಣ ನಂದೀಶ್ವರದ ಅಷ್ಟಮಿ, ಅಂದರೆ ಫಾಲ್ಗುಣ ಶುಕ್ಲ ಅಷ್ಟಮಿ, ಗುರುವಾರ= ಕ್ರಿ. ಶ. 1007 ಫೆಬ್ರುವರಿ 27 ರ ಶಿಲಾಶಾಸನದಲ್ಲಿ[೧] ಆಕೆಯ ಮಗನಾದ ಪಡೆವಳ ತೈಲನು ಮಾಸವಾಡಿ ೧೪೦ ನ್ನು ಆಳುತ್ತಿರುವಂದು ಆಕೆಯೇ ಬಿಟ್ಟ ದತ್ತಿಯನ್ನು ಹೇಳಿರುವುದರಿಂದ, ಆಕೆ ಆಗಲೂ ಇದ್ದಿರಬೇಕು. ಹಾಗಾದರೆ ರನ್ನನು ಕ್ರಿ. ಶ. 993 ರಲ್ಲಿ ಹುಟ್ಟಿದ ತನ್ನ ಮಗಳಿಗೆ ಅತ್ತಿಮಬ್ಬೆ ಎಂದು ಹೆಸರಿಕ್ಕಿದುದು (ಅಜಿತ XII. ೫೨; ೫೩) ತನ್ನ ಪೋಷಕಳಾದ ಅತ್ತಿಮಬ್ಬೆಯ ಜೀವಿತ ಕಾಲದಲ್ಲಿಯೇ ಹೇಗೋ ಹಾಗೆಯೇ ಆತನು ತನ್ನ ಆ ಮುಂಚಿನ ಪೋಷಕನಾದ ಚಾವುಂಡರಾಯನ ರಾಯ ಎಂಬ ಹೆಸರನ್ನು ಕ್ರಿ. ಶ. 989 ರಲ್ಲಿ ಹುಟ್ಟಿದ ತನ್ನ ಮಗನಿಗೆ ಇಟ್ಟುದೂ ( ಅಜಿತ XII. ೫೧; ೫೨ ) ಚಾವುಂಡರಾಯನು ಇದ್ದಂದೇ ಎಂದು ಭಾವಿಸಿದರೆ, ಕ್ರಿ. ಶ. 989 ರ ಮುಂಚೆ ಕಾಲವಾಗಿರದ ಚಾವುಂಡರಾಯನು ಅವನ ಅವಸಾನಾನಂತರ ಅವನನ್ನು ಮಿಕ್ಕ ಧರ್ಮವೀರನೆಂದು ಪೆಸರಾದ ಶಂಕರಗಂಡನಿಗೆ ಆಬಗ್ಗೆ ತಕ್ಕ ಎಡೆದೊರೆವಂತೆ ಕ್ರಿ. ಶ. 989 – 90 ರಲ್ಲಿ ದಿವಂಗತನಾಗಿರಬೇಕು; ಕ್ರಿ. ಶ. 993 ರಲ್ಲಿ ರಚಿಸಲ್ಪಟ್ಟ ಅಜಿತಪುರಾಣದಲ್ಲಿ ( XII. ೭ – ೧೬ ) ದಾನಚಿಂತಾಮಣಿ ಎನಿಸಿದ ಅತ್ತಿಮಬ್ಬೆಗೆ ಎಡೆದೊರೆವಂತೆ ಶಂಕರಗಂಡನು ಕ್ರಿ ಶ. 993 ರೊಳಗೆ ಕಾಲವಾಗಿರಬೇಕು. ಗಂಗರ ಆಸ್ಥಾನದಲ್ಲಿ ಇದ್ದಾಗ ಅಲ್ಲಿ ತಾನು ಓಲಗಿಸಿದ ಒಬ್ಬನೊ ಇಬ್ಬರೊ ಅರಸರಿಗಿಂತ ಹೆಚ್ಚಾಗಿ ತನ್ನ ಯಥಾರ್ಥ ಪೋಷಕನಾಗಿದ್ದ ಚಾವುಂಡರಾಯನಲ್ಲಿ ಅನುರಕ್ತನಾಗಿದ್ದ ರನ್ನನು ಚಾವುಂಡರಾಯನ ಕಾಲಾನಂತರ ಇನ್ನು ಗಂಗರ ಆಸ್ಥಾನದಲ್ಲಿ ಉಳಕೊಳ್ಳದೆ ಅಲ್ಲಿಂದ ಹೊರಟು ಪ್ರಾಯಶಃ ತನ್ನಂತೆಯೇ ಜೈನನಾದ ಅತ್ತಿಮಬ್ಬೆಯ ಮಗನಾದ ಪಡೆವಳ ತೈಲಪನ ಪ್ರೇರಣೆಯಿಂದೇನೋ ತೈಲಪನ ಆಸ್ಥಾನ

೧ Supplement to the Report on South Indian Epigraphy 1927, ಪು. 3. ನಂ. 28

ವನ್ನು ಕ್ರಿ ಶ. 989 – 90 ರಲ್ಲಿ ಸೇರಿರಬೇಕು. ಹಾಗಾದರೆ ರನ್ನನು ಗಂಗ ರಾಚಮಲ್ಲನ ( 973–986 ) ಆಸ್ಥಾನದಲ್ಲಿ ಮಾತ್ರವಲ್ಲ, ಅವನ ತಮ್ಮನೂ ಉತ್ತರಾಧಿಕಾರಿಯೂ ಆದ ನೀತಿಮಾರ್ಗನ ( 986 – 1003 ) ಆಸ್ಥಾನದಲ್ಲಿಯೂ ಕೆಲಕಾಲ ಇದ್ದಿರಬೇಕು.

ರನ್ನನು ಗಂಗರ ಆಸ್ಥಾನಕ್ಕೆ ಹೋಗುವ ಮುಂಚೆ ಯಾವ ಸಾಮಂತರಲ್ಲಿ ಇದ್ದನೆಂದು ಕಂಡುಹಿಡಿಯುವುದಾದರೊ ಅಷ್ಟು ಸುಕರವಲ್ಲ. ಆದರೂ ಹುಡುಕಾಡೋಣ.

ರನ್ನನ ಪರಶುರಾಮುಚರಿತವು ಜೈನಕಾವ್ಯವೆಂಬುದು ಎಷ್ಟು ನಿಶ್ಚಯವೊ ಅದರ ನಾಯಕನು ಆ ಜೈನಕಥೆಯಲ್ಲಿಯ ಸಿಸ್ತೇಜನಾದ ಪರಶುರಾಮುನಲ್ಲವೆಂಬುದೂ ಅಷ್ಟೇ ನಿಶ್ಚಯ. ಮೇಲೆ ಕಂಡಿರುವಂತೆ ಜೈನ ಪರಶುರಾಮನು ಜೈನರ ಆ ೬೩ ಮಹಾ ಪುರುಷರಲ್ಲಿ ಯಾವೊಬ್ಬನೂ ಅಲ್ಲ; ವೈದಿಕ ಧರ್ಮದ ದೃಷ್ಟಿಯಿಂದ ವಿಷ್ಣುವಿನ ವಿರೋಧಿಗಳೆನಿಸುವ ಹಾಗೂ ಅವನಿಂದ ಹತರಾದ ಮಧುಕೈಟಭ, ರಾವಣ, ಜರಾಸಂಧಾದಿ ರಾಕ್ಷಸರು ಕೂಡ ಪ್ರತಿವಾಸುದೇವರೆಂದು ಆ ತ್ರಿಷಷ್ಟಿ ಶಲಾಕಪುರುಷರಲ್ಲಿ ಗಣಿಸಲ್ಪಡುವರಾದರೂ ಪರಶುರಾಮನು ಅವರಲ್ಲಿ ತಾನೂ ಒಬ್ಬನಲ್ಲ. ಅಂಥವನು ಯಾವ ಕಾವ್ಯದ ನಾಯಕತ್ವಕ್ಕೂ ಸಲ್ಲನೆನಿಸುವಲ್ಲಿ ಜೈನ ಧರ್ಮಗ್ರಂಥದ ನಾಯಕನಾಗಿಸಲ್ಪಡುವನೆ? ಇಲ್ಲ. ಹಾಗಾದರೆ ರನ್ನನ ಈ ಧರ್ಮಗ್ರಂಥದ ನಾಯಕನು ಬೇರೊಬ್ಬನಲ್ಲ, ಆ ಪರಶುರಾಮನನ್ನು ಕೊಂದ ಸುಭೌಮನಾಗಿರಬೇಕು. 'ಸುಭೌಮುಸ್ತು ಕಾರ್ತವೀರ್ಯಃ'- ಕಾರ್ತವೀರ್ಯನೂ ಎಂಬ ಆ ಸುಭೌಮನಾದರೊ ತ್ರಿಷಷ್ಟಿ ಶಲಾಕಪುರುಷರಲ್ಲಿ ತೀರ್ಥಂಕರರ ಬಳಿಕಣವರೇ ಆದ, ಅತಏವ ಜೈನ ಬಲದೇವರಿಗಿಂತಲೂ ವಾಸುದೇವರಿಗಿಂತಲೂ ಮೇಲಣ, ಆ ೧೨ ಚಕ್ರವರ್ತಿಗಳಲ್ಲಿ ಲನೆಯವನು. ತೀರ್ಥಂಕರ ಚಕ್ರವರ್ತಿಗಳಾದ ಶಾಂತಿನಾಥ, ಕುಂಥುನಾಥ ಮತ್ತು ಅರನಾಥರ ಬಳಿಕಣವನೂ ಆದ ಈತನು ಆ ಮೂವರಂತೆ ಸ್ವಯಂ ಜಿನನೇ ಅಲ್ಲದಿದ್ದರೂ ಭರತಚಕ್ರೇಶ್ವರನಂತೆ ಸಗರಚಕ್ರವರ್ತಿಯಂತೆ ತಾನೂ ಜಿನಕಲ್ಪನು, ತಾನೂ ಅವರಂತೆಯೇ ಆ ಜೈನ ಚಕ್ರವರ್ತಿಗಳಲ್ಲಿ ಮಾತ್ರ ಹುಟ್ಟಲಾಪ ಆ ಸುದರ್ಶನವೆಂಬ ಚಕ್ರರತ್ನವನ್ನು ಪಡೆದಾತನು. ಇಂಥವನನ್ನು ರನ್ನನು ತನ್ನ ಧರ್ಮಕಾವ್ಯದ ನಾಯಕಸ್ಥಾನದಲ್ಲಿ ಇರಿಸದೆ ಪ್ರತಿನಾಯಕಸ್ಥಾನಕ್ಕೆ ತಳ್ಳುವನೆ? ಇಂಥವನನ್ನು ಬಿಟ್ಟು ಆ ಧರ್ಮಕಾವ್ಯಕ್ಕೆ ಬೇರೆ ನಾಯಕನಿರಲಾಪನೆ? ಇಲ್ಲ. ಅತಏವ ರನ್ನನ ಪರಶುರಾಮಚರಿತದ ವಾಸ್ತವಿಕ ನಾಯಕನಾದರೊ ಸುಭೌಮನೆಂಬ ಆ ಕಾರ್ತವೀರ್ಯನೇ ವಿನಾ ಪರಶುರಾಮನಲ್ಲ; ಪರಶುರಾಮನು ಅದರ ಪ್ರತಿನಾಯಕನಷ್ಟೇ. ಹಾಗಾದರೆ ಆ ಕಾವ್ಯದ ಹೆಸರು ಸುಭೌಮಚರಿತವೊ ಕಾರ್ತವೀರ್ಯಚರಿತವೊ

ಎಂದಿರಬೇಕಿತ್ತಲ್ಲ? ಪರಶುರಾಮಚರಿತ ಎಂದಾಗತಕ್ಕ ಬಗೆ ಹೇಗೆ? ಎಂದು ಶಂಕಿಸ ಬಹುದು; ಅದರ ಕಾರಣವು ಹೀಗೆಂದು ತೋರುತ್ತದೆ– ಜೈನರಲ್ಲೇ ಹೆಚ್ಚು ಮಂದಿಗೆ ಅಪರಿಚಿತನಾದ, ಅತಏವ ಅವರಿಗಿಂತ ಎಷ್ಟೋ ಹೆಚ್ಚಿನ ಮಿಕ್ಕ ಬಹುಜನರಿಗೆ ತೀರ ಅವಿದಿತನಾದ, ಜೈನ ಪರಶುರಾಮನು ಕೊಲ್ಲಲ್ಪಡುವನಾದರೂ ಅವನ ಸನಾಮನಾದ ಹಾಗೂ ಅವನಿಗಿಂತ ಎಷ್ಟೋ ಮಟ್ಟಿಗೆ ಲೋಕವಿಶ್ರುತನಾದ ವೈದಿಕ ಪರಶು ರಾಮನು ಸ್ಥಿರಜೀವಿಯಾಗಿದ್ದು ಅಮರನಾಗಿರುವ ಕಾರಣ ತನ್ನ ಕಾವ್ಯವನ್ನು ಪರಶುರಾಮವಧೆ ಎಂದರೆ ಆ ಹೆಸರನ್ನು ಯಾರೂ ಒಪ್ಪರೆಂದೊ, ಜೈನ ಕಾರ್ತ ವೀರ್ಯನು ಮಡುಹುವನಲ್ಲದೆ ಮಡುಹಲ್ಪಡನಾದರೂ ಅವನಿಗಿಂತ ಎಷ್ಟೋ ಪ್ರಸಿದ್ಧ ನಾದ ವೈದಿಕ ಕಾರ್ತವೀರ್ಯನು ವೈದಿಕ ಪರಶುರಾಮನಿಂದ ಕೊಲ್ಲಲ್ಪಡುವ ಕಾರಣ ಅದನ್ನು ಕಾರ್ತವೀರ್ಯಚರಿತ ಅಥವಾ ಅವನ ಅಪರನಾಮದಿಂದ ಸುಭೌಮಚರಿತ ಎಂದರೆ ಆ ಹೆಸರನ್ನು ಬಹುಮಂದಿ ಮೆಚ್ಚರೆಂದೊ ಆ ಇಬ್ಬಾಯಿಯ ಹೆಸರುಗಳನ್ನು ವರ್ಜಿಸಿ, ಆ ಕಥೆಯಲ್ಲಿ ತುದಿಯಿಂದ ತುದಿಯವರೆಗೆ ಮೆರೆವಾತನು ಪರಶುರಾಮನೇ ವಿನಾ ಅದರ ಒಂದೆರಡೇನೋ ಆಶ್ವಾಸಗಳಲ್ಲಿ ಬರುವ ಕಾರ್ತವೀರ್ಯನಲ್ಲ ಎಂಬು ರಿಂದ, ಆ ಕಾವ್ಯದ ಪ್ರತಿನಾಯಕನೇ ಆದರೂ ಅದನ್ನು ತುಂಬಿರುವ ಪರಶುರಾಮನ ಹೆಸರಿನಿಂದ ಅದನ್ನು ಪರಶುರಾಮಚರಿತ ಎಂದಿರಬೇಕು.

ರನ್ನನು ಗಂಗರ ಆಸ್ಥಾನಕ್ಕೆ ಕ್ರಿ. ಶ. ಸು. 980 ರಲ್ಲಿ ಹೋಗಿರಬೇಕೆಂದು ಮೇಲೆ ಕಂಡಿರುವುದರಿಂದ, ಆ ಮುಂಚೆ ಅವನು ಸಾಮಂತರಲ್ಲಿ ಇದ್ದಂದು ರಚಿಸಿದ ಪರಶುರಾಮಚರಿತವನ್ನು ಕ್ರಿ. ಶ. 949 ರಲ್ಲಿ ಹುಟ್ಟಿದ ಆತನು ತನ್ನ ೩೦ ನೆಯ ವರ್ಷಕ್ಕಿಂತಲೂ ಹಿಂದೆ, ಅಂದರೆ ತನ್ನ ೨೫ ರಿಂದ ೩೦ ರೊಳಗಣ ಪ್ರಾಯದ ಕ್ರಿ. ಶ. 974 ರಿಂದ 979 ರೊಳಗೆ, ರಚಿಸಿರಬೇಕು. ಹಾಗಾದರೆ ಆತನು ಆ ಸಾಮಂತರ ಆಸ್ಥಾನವನ್ನು ತನಗೆ ೨೫ ರ ವಯಸ್ಸು ತುಂಬುವ ಕ್ರಿ. ಶ. 974 ಕ್ಕಿಂತ ಒಂದೆರ ಡಾದರೂ ವರ್ಷಗಳ ಮುಂಚೆ, ಅಂದರೆ ತನ್ನ ಸು. ೨೩ ನೆಯ ವರ್ಷದ ಕ್ರಿ. ಶ. 972 ರಲ್ಲಿ ಸೇರಿರಬೇಕು. ೨೩ ವರ್ಷವೆಂದರೆ ಹೀಗೆ ಹಣ್ಣೂ ಅಲ್ಲ ಹಾಗೆ ಹೆದಿರೂ ಅಲ್ಲ, ಎಳವೆ ಇನ್ನೂ ತೀರ ದಾಟಿಲ್ಲದ ಎಡಪ್ರಾಯ. ಆ ಎಳೆ ಪ್ರಾಯದಲ್ಲಿ, ತನ್ನ ಪ್ರತಿಭೆ ಇನ್ನೂ ರೆಕ್ಕೆ ಬಲಿತಿಲ್ಲದ, ತನ್ನ ಹೆಸರು ತನ್ನ ಊರ ಹೊರಗಣ ನಾಲ್ಕು ಮಂದಿಗೆ ಇನ್ನೂ ತಿಳಿದಿಲ್ಲದ ಆ ನವಯೌವನದಲ್ಲಿ, ರನ್ನನು ಹೊಕ್ಕ ಸಾಮಂತರ ಆಸ್ಥಾನ ವೆಂದರೆ ತನ್ನ ಪ್ರಾಂತದ ಸಾಮಂತರದೇ ವಿನಾ ಮತ್ತೊಬ್ಬರದಲ್ಲ; ಏಕೆಂದರೆ ಆಗ್ಗೆ ಇತರ ಸಾಮಂತರಿಗೆ ಹೇಗೆ ಅವನ ಅರಿವೂ ಇರಲಾರದೊ ಅಥವಾ ತಾನೊಬ್ಬ ಕವಿ ಎಂದು ಅವನೇ ಅವರಲ್ಲಿಗೆ ಹೋದರೂ ಅವನ ಎಳವೆಯನ್ನು ಕಂಡು ಅವನನ್ನು ತಮ್ಮ ಆಸ್ಥಾನಕವಿಯಾಗಿ ಇರಿಸಿಕೊಳ್ಳುವಷ್ಟು ಅವನಲ್ಲಿ ಆಸ್ಥೆಯೂ ಅವರಿಗೆ

ಉಂಟಾಗಲಾರದೊ, ಹಾಗೆಯೇ ಅವನನ್ನು ತಮ್ಮ ಅರಸರ ಆಸ್ಥಾನಗಳಲ್ಲಿ ಕೈ ಹಿಡಿದು ಒಳಕೆಯ್ಯುವಷ್ಟು ಅವನಲ್ಲಿ ಆದರ ಉಳ್ಳ, ಅತಏವ ಅವನ ಆ ಎಳೆಪ್ರಾಯ ದಲ್ಲೇ ಅವನ ಅಷ್ಟು ಹತ್ತಿರದ ಪರಿಚಿತಿಯುಳ್ಳ, ಆಸ್ಥಾನಿಕರೂ ಇತರ ಸಾಮಂತ ರಲ್ಲಿ ಇರಲಾರರು, ಅಥವಾ ತಾನಾಗಿಯೇ ಪರಸಾಮಂತರಲ್ಲಿಗೆ ಹೋಗೋಣ ಎಂದರೆ ಆ ಪ್ರಾಯದಲ್ಲಿ ಆ ತಕ್ಕ ಧೈರ್ಯವೂ ಅವನಿಗೆ ಬಾರದು. ಆದರೆ ತನ್ನ ಪ್ರಾಂತದ ಸಾಮಂತರಲ್ಲಿಗೆ ಹೋಗುವುದಾದರೊ ಆ ಕಥೆಯೇ ಬೇರೆ; ಏಕೆಂದರೆ ಅವರು ಇಷ್ಟರೊಳಗೆ ಅವನ ಪ್ರೌಢಿಯನ್ನು ಕೇಳಿಲ್ಲದಿರುವರೇ? ಕೇಳಿದವರು ಅವನನ್ನು ತಮ್ಮಲ್ಲಿಗೆ ಕರಿಸಿಕೊಳ್ಳರೇ? ಇಲ್ಲವೆ ತಾನೇ ಅವರಲ್ಲಿಗೆ ಹೋಗಿ ಬಾಗಿಲನ್ನು ತಟ್ಟಿದರೆ ಅವನಿಗೆ ತೆರೆಯದಿರುವರೇ? ಅಥವಾ ರನ್ನನವರಿಗೊ ಅವನ ನಂಟರಿಗೊ ಬೇಕಾದ ಆಸ್ಥಾನಿಕರು ಅವನ ಪ್ರಾಂತದ ಸಾಮಂತರಲ್ಲಿ ಒಬ್ಬಿಬ್ಬರಾದರೂ ಇಲ್ಲದಿರು ವರೇ? ಅವರು ತಮಗಷ್ಟು ಪರಿಚಿತನಾದ ಆ ಯುವಕನಿಗೆ ತಮ್ಮ ಸಾಮಂತರಸನ ಆಸ್ಥಾನದಲ್ಲಿ ಬೇಕಾದಂತೆ ಎಡೆಮಾಡಿ ಕೊಡುವರಲ್ಲವೆ ಬಿಟ್ಟು ಹಾಕುವರೆ? ಅದಲ್ಲವೆ ಆಗ್ಗೆ ಪ್ರತ್ಯೇಕ ಚಕ್ರವರ್ತಿಯ ಸಾಮ್ರಾಜ್ಯದಲ್ಲಿ ಒಳಪಟ್ಟ ಅವೆಷ್ಟೋ ಪ್ರಾಂತಗಳೂ ಅವಲ್ಲಿ ಪ್ರಾಯಶಃ ಪ್ರಾಂತಕ್ಕೆ ಒಬ್ಬೊಬ್ಬನಂತೆ ಸಾಮಂತರೂ ಇಲ್ಲದುಂಟೆ?

ಅಜಿತಪುರಾಣದ (XII. ೯) 'ಪಿರಿಯಂ ಬೂತಗ' ಎಂಬ ಪದ್ಯದಲ್ಲಿ ಹೇಳಿದ ಜೈನ ಧರ್ಮಿಷ್ಠರಲ್ಲ ಒಬ್ಬನಾದ 'ಪಿರಿಯಂ ಶಂಕರಗಂಡ'ನೆಂದು ಆ ಶಂಕರಗಂಡನ ಹೆಸರನ್ನು ರನ್ನನ ಪೋಷಕರೆಂದು ಮೇಲೆ ಕಂಡಿರುವ ಚಾವುಂಡರಾಯ ಹಾಗೂ ಅತ್ತಿಮಬ್ಬೆಯರ ನಡುವೆ ಹೇಳಿರುವುದರಿಂದ, ಅವರಂತೆಯೇ ಆತನೂ ರನ್ನನ ಸಮಕಾಲೀನನೆಂದು ಮಾತ್ರವಲ್ಲ, ಅವರನ್ನೆಂತೋ ಅವನನ್ನೊ ಅಂತೆಯೇ ರನ್ನನು ಕಂಡು ಬಲ್ಲವನಾಗಿರಬೇಕೆಂದೂ ಸ್ಪಷ್ಟವಿದೆ. ಅದರಂತೆಯೇ ಆತನೂ ರನ್ನನ ಪೋಷಕನಾಗಿದ್ದನೋ ನೋಡೋಣ.

ಈ ಶಂಕರಗಂಡನನ್ನು[೧] ಕುರಿತು ನಾನು ಬಲ್ಲಷ್ಟರಮಟ್ಟಿಗೆ ಈ ನಾಲ್ಕು ಶಾಸನಗಳಿವೆ—

೧. ಅಕಾಲವರ್ಷದೇವ ಶ್ರೀ ಪೃಥ್ವೀವಲ್ಲಭ
ವೀರ ಪರಮ ಭಟ್ಟಾರಕ.... ಶ್ರೀಮತ್ ಕನ್ನರ
ದೇವನ ರಾಜ್ಯಮುತ್ತರೋತ್ತರಾಭಿವೃದ್ಧಿಯಿಂ
ಸಲುತ್ತಿರೆ ಶಕನೃಪಕಾಲಾತೀತ ಸಂವತ್ಸರ
ಶತಂಗಳ್ ೮೭೭ ನೆಯ ರಕ್ತಾಕ್ಷಿ ಸಂವತ್ಸರಂ
ಪ್ರವರ್ತಿಸುತ್ತಿರೆ ಯಾದವ ವಂಶದೊಳ್ಪಾಣ್ಮರ

೧. ಕಂಠೀರವದ ದಸರಾ ಸಂಚಿಕೆ, 1934, ಪು. ೫೮.

ರಾಜನಾತನಮಗಂ ಶಂಕರಗಂಡನಾತನ ಮಗಂ
ಬೈಚರಾಜನಾತನ ಮಗಂ ಶಂಖಪಯ್ಯನಾತನ
ಮಗಂ ಗೊಮ್ಮರಸನಾತನ ಮಗನಸಗಮರಸ
ನಾತನ ಮಗಂ ಸ್ವಸ್ತಿ ಸಮಧಿಗತ ಪಂಚ
ಮಹಾಶಬ್ದ ಮಹಾಸಾಮನ್ತಾಧಿಪತಿ ಜಯಧೀರ
ಭುವನೈಕರಾಮನಭಿಮಾನಧವಳಂ ರಟ್ಟರ ಗುರು ( ? )
ರಾಜಭೂರಿಸ್ರ( ಶ್ರ )ವ ವಿದ್ವಿಷ್ಟನಾರಾಯಣ
ಸತ್ಯಾರ್ಣ್ಣವಂ ಧರ್ಮರತ್ನಾಕರಂ ಶ್ರೀಮತ್
ಶಂಕರಗಣ್ಡರಸಂ............ ಉತ್ತರಾಯಣ ಸಂಕ್ರಾಂತಿಯೊಳ್............

ರಾಷ್ಟ್ರಕೂಟ ಅಕಾಲವರ್ಷ III ಕೃಷ್ಣನ ಆಳಿಕೆಯಲ್ಲಿ (ಕ್ರಿ. ಶ. 937–966) ಹುಟ್ಟಿದ ತಿಥಿಯೂ ವಾರವೂ ಹೇಳಿಲ್ಲದ ಈ ಬೆಟಗೇರಿಯ ಶಾಸನದಲ್ಲಿ ( ಪ್ರಾಚೀನ ಕರ್ಣಾಟಕ I. 2. ಅಕ್ಟೋಬರ 1932, ಪು. ೪೦ ) ಹೇಳಿದ ಸಂವತ್ಸರದ ಹೆಸರು ( ರಕ್ತಾಕ್ಷಿ ) ಸರಿಯಾದರೆ ಇದರ ತೇದಿ ಕ್ರಿ. ಶ. 964 ದಶಂಬರ 23 ಶುಕ್ರವಾರ, ಶಾಲಿವಾಹನ ಶಕಸಂಖ್ಯೆ ( ೮೮೭ ) ಸರಿಯಾದರೆ ಇದರ ತೇದಿ ಕ್ರಿ. ಶ. 965 ದಶಂಬರ 23 ಶನಿವಾರ. ಈ ಶಾಸನದಿಂದ ಶಂಕರಗಂಡನ ಪೀಳಿಗೆಯೂ ಅವನ ಮಹಾಸಾಮಂತಾಧಿಪತಿ ಎಂಬ ಪದವಿಯೂ ತಿಳಿಯುತ್ತದೆ.

೨. ಅಕಾಳವರ್ಷ ಶ್ರೀ ಪ್ರಿಥಿವೀವಲ್ಲಭ ಮಹಾ
ರಾಜಾಧಿರಾಜ ಪರಮೇಶ್ವರ ಪರಮ ಭಟ್ಟಾರಕ
ಕನ್ದರ ಬಲ್ಲಹಂ ರಾಜ್ಯಂಗೆಯ್ಯೆ ಬನವಾಸಿನಾಡ
........ಗಮಂ ಸಂಕರಗಣ್ಡನಾಳುತ್ತಿರೆ ಸಕನೃಪ
ಕಾಳಾತೀತ ಸಂವತ್ಸರ ಶತಂಗಳ್........ ಪ್ರವರ್ತಿಸೆ
ಭಾದ್ರಪದ ಮಾಸ.........................................

ಅದೇ ರಾಷ್ಟ್ರಕೂಟ ಅಕಾಲವರ್ಷ III ಕೃಷ್ಣನ ಆಳಿಕೆಯಲ್ಲಿ ಹುಟ್ಟಿದ ಈ ಶಾಸನದ[೧] ತೇದಿಯನ್ನು ಕಂಡಿತವಾಗಿ ನಿಶ್ಚಯಿಸಲಾಗದಾದರೂ ಇದರಿಂದ ಶಂಕರಗಂಡನು III ಕೃಷ್ಣನ ಕೆಯ್ಕೆಳಗೆ ಬನವಾಸಿ ನಾಡನ್ನು ಆಳುತ್ತಿದ್ದನೆಂದು ತಿಳಿಯುತ್ತದೆ.

೩. ಶ್ರೀ ಪೃಥಿವೀವಲ್ಲಭ ಮಹಾರಾಜಾಧಿರಾಜ
ಪರಮೇಶ್ವರ ಪರಮಭಟ್ಟಾರಕ ಶ್ರೀಮತ್
ಕನ್ದರ ವಲ್ಲಭಂ·ಪೃಥುವಿರಾಜ್ಯಂ ಗೆಯ್ಯೆ......
ಮಹಾಸಾಮನ್ತಾಧಿಪತಿ ಶ್ರೀಮತ್ ಶಂಕರಗಂಡಂ
ಬನವಾಸಿ ನಾಡಾಳುತ್ತಿರೆ.....................

---

೧. EC VII, ಶಿಕಾರಿಪುರ 183.

ತೇದಿ ಇಲ್ಲದ ಈ ಶಾಸನದಿಂದಲೂ[1] ಶಂಕರಗಂಡನು III ಕೃಷ್ಣನ ಕೈಕ್ಕೆಳಗೆ ಮಹಾಸಾಮಂತಾಧಿಪತಿಯಾಗಿ ಬನವಾಸಿನಾಡನ್ನು ಆಳುತ್ತಿದ್ದನೆಂದು ತಿಳಿಯುತ್ತದೆ.

> ೪. ನಿತ್ಯವರ್ಷ ಪೃಥುವೀವಲ್ಲಭ ಮಹಾರಾಜಾ
> ಧಿರಾಜ ಪರಮೇಶ್ವರ ಪರಮ ಭಟಾರಕಂ
> ಶ್ರೀ ಅಮೋಘವರ್ಷ ಪೃಥುವಿರಾಜ್ಯಂ ಗೆಯ್ಯೆ
> ಸಂಕರಗಂಡಂ ಬನವಾಸಿ ನಾಡಾಳುತ್ತಿರೆ.......

ಈ ಶಾಸನದಲ್ಲಿ[2] ತೇದಿ ಇಲ್ಲವಾದರೂ ರಾಷ್ಟ್ರಕೂಟ ಅಮೋಘವರ್ಷನೆಂಬ II ಕಕ್ಕನು ಆಳಿದ ಕ್ರಿ. ಶ. 972-973 ಇವೆರಡೇ ವರ್ಷಗಳಲ್ಲಿಯ ಯಾವೊಂದರಲ್ಲಿ ಹುಟ್ಟಿದ ಈ ಶಾಸನದಿಂದ ಶಂಕರಗಂಡನು 972 – 973 ರಲ್ಲಿ II ಕಕ್ಕನ ಕೆಳಗೂ ಬನವಾಸಿ ನಾಡನ್ನು ಆಳುತ್ತಿದ್ದನೆಂದು ತಿಳಿಯುತ್ತದೆ. ಹೀಗೆ ಈ ನಾಲ್ಕೂ ಶಾಸನಗಳಿಂದ ರಾಷ್ಟ್ರಕೂಟ III ಕೃಷ್ಣನಿಂದ ಆ ವಂಶದ ಕೊನೆಯ II ಕಕ್ಕನ ವರೆಗೂ ಅವರ ಮಹಾಸಾಮಂತಾಧಿಪತಿಯಾಗಿ ಬನವಾಸಿ ನಾಡನ್ನು ಆಳುತ್ತಿದ್ದನೆಂದು ತಿಳಿವ ಶಂಕರಗಂಡನು ಆ ಮೇಲೆ ಕ್ರಿ. ಶ. 992–93 ರ ವರೆಗೆ ಇದ್ದನೆಂದು ಮೇಲೆ ಕಂಡಿರುವುದರಿಂದ, ಕ್ರಿ. ಶ. 973 ರಲ್ಲಿ ಪಡುವಣ ಚಾಳುಕ್ಯ ಆಹವಮಲ್ಲ ತೈಲಪನು II ಕಕ್ಕನನ್ನು ಗೆದ್ದು ತಾನು ಕರ್ಣಾಟಕದ ಸಮ್ರಾಜನಾಗುತ್ತಲೇ ಅದುವರೆಗೆ ರಾಷ್ಟ್ರಕೂಟರ ಪಾದಪದ್ಮೋಪಜೀವಿಗಳಾಗಿದ್ದವರಲ್ಲಿ ಎಷ್ಟೋ ಮಂದಿ ಕ್ರಮೇಣ ತೈಲಪನನ್ನು ಸೇರಿದ ಮೇರೆಗೆ, ಶಂಕರಗಂಡನೂ ಅಲ್ಲಿಂದ ತೈಲಪನ ಮಹಾಸಾಮಂತಾಧಿಪತಿಯಾಗಿರಬೇಕು. ಶ್ರೀ ಪೃಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾರಕನೆಂಬ ಚಟ್ಟಿಗದೇವ ಅಂದರೆ ರಾಷ್ಟ್ರಕೂಟ ನಿತ್ಯವರ್ಷ III ಕೊಟ್ಟಿಗ (ಅಥವಾ ಖೊಟ್ಟಿಗ)ನ ಆಳಿಕೆಯ (ಕ್ರಿ. ಶ. 966-972) 'ಶಕನೃಪ ಕಾಳಾತೀತ ಸಂವತ್ಸರ........ ತೊಂಬತ್ತನೆಯ ವಿಭವ ಸಂವತ್ಸರ' ಅಂದರೆ ಶಾ. ಶ. ೮೯೦ ನೆಯ ವಿಭವ ಸಂ| ಮಾರ್ಗಶಿರದ ಅಮಾವಾಸ್ಯೆ ಮಂಗಳವಾರ (ಉತ್ತರಾಯಣ ಸಂಕ್ರಾಂತಿ) ಸೂರ್ಯಗ್ರಹಣ = ಕ್ರಿ. ಶ. 968 ದಶಂಬರ 22 ಮಂಗಳವಾರ (ಮಕರ ಸಂಕ್ರಾಂತಿ) ಸೂರ್ಯಗ್ರಹಣದಂದಿನ ಸೊರಬ 465 (EC VIII) ನೆಯ ಶಿಲಾಶಾಸನದಲ್ಲಿ ಹೇಳಿದ ಚಟ್ಟಯ್ಯದೇವನೇ ರಾಷ್ಟ್ರಕೂಟ II ಕಕ್ಕನ ಆಳಿಕೆಯ ಶಾ. ಶ. ೮೯೪ ಅಂಗಿರಸ ಸಂ| ಪೌಷ್ಯ ಶುಕ್ಲ ೭ ಆದಿತ್ಯವಾರ = ಕ್ರಿ. ಶ. 972 ದಶಂಬರ 15 ರ ಸೊರಬ 455 ಹಾಗೂ ಅದೇ ಸಂ| ಪುಷ್ಯ ಕೃಷ್ಣ ೫ ಶುಕ್ರವಾರ = ಕ್ರಿ. ಶ. 972 ದಶಂಬರ 27 ರ ಸೊರಬ 454 ರಲ್ಲಿಯೂ (EC VIII) ಆ ಮುಂದೆ ಚಾಳುಕ್ಯ

೧. Epigraphia Indica (EI) XVI, ಪು. 283. ೨. Ibid, ಪು. 284.

ತ್ರೈಲಪನ ಆಳಿಕೆಯ (ಕ್ರಿ. ಶ 973-997) ಶಾ. ಶ. ೯೦೯ ವ್ಯಯ ಸಂ| = ಕ್ರಿ. ಶ. 986-987 ರ ಸೊರಬ 413 ರಲ್ಲಿಯೂ (EC VIII) ಬನವಾಸಿ ಪನ್ನಿರ್ಚ್ಛಾಸಿರಕ್ಕೆ ರಾಜ್ಯಂಗೆಯ್ಯುತ್ತಿರ್ದ್ದನೆಂದಿರುವುದರಿಂದ, ಆತನು ಬನವಾಸಿನಾಡಿನ ಮಹಾಸಾಮಂತಾಧಿಪತಿಯಾದ ಶಂಕರಗಂಡನ ಕೆಯ್ಕೆಳಗೆ ಹೆಚ್ಚಾದರೆ ಸಾಮಂತ ನೇನೋ ಆಗಿದ್ದು ಆ ಬನವಾಸಿನಾಡಿನಲ್ಲಿ ಒಳಪಟ್ಟ ಬನವಾಸಿ ೧೨೦೦೦ ವನ್ನು ಆಳುತ್ತಿರಬೇಕು.

ಆದರೆ ರನ್ನನು ಮೊತ್ತಮೊದಲಲ್ಲಿ ಓಲಗಿಸಿದ ಸಾಮಂತನು ಈ ಶಂಕರಗಂಡ ನೆಂದು ನನಗೆನಿಸುವುದಿಲ್ಲ. ಏಕೆಂದರೆ ಅಜಿತಪುರಾಣದಲ್ಲಿಯೂ (I. ೮೧) ಗದಾ ಯುದ್ಧದಲ್ಲಿಯೂ (I. ೩೪) ಹೇಳಿರುವ ಮೇರೆಗೆ ರನ್ನನು ಓಲಗಿಸಿದುದು ಸಾಮಂತ ರನ್ನು; ಶಂಕರಗಂಡನಾದರೊ ಮಹಾಸಾಮಂತಾಧಿಪತಿ, ಅಂದರೆ ತನ್ನ ಕೆಯ್ಕೆಳಗೆ ಕೆಲವರಾದರೂ ಮಹಾಸಾಮಂತರೂ ಅತಏವ ಹಲಮಂದಿ ಸಾಮಂತರೂ ಉಳ್ಳ ಮಹಾಸಾಮಂತಾಧಿಪತಿ. ಇಂಥವನು ರನ್ನನೋಲಗಿಸಿದ ಬರೇ ಸಾಮಂತನೊ, ಇಲ್ಲವೆ ಬಹಳ ಹೆಚ್ಚಾದರೆ ಮಹಾಸಾಮಂತನೊ ಆಗಿರಲಾರನು; ಅಥವಾ ಆಗಿದ್ದರೆ, ರನ್ನನು ಒಂದು ಕಡೆಯಲ್ಲಾದರೂ ಮಹಾಸಾಮಂತಾಧಿಪತಿ ಎಂದು ಹೇಳದಿರು ವನೇ? ಅದಲ್ಲದೆ ತನ್ನ ಅಜಿತಪುರಾಣದಲ್ಲಿ (XII. ೪೩-೪೫) ಹೇಳಿರುವಂತೆ ಕೃಷ್ಣಾ ಮತ್ತು ಘಟಪ್ರಭಾ ನದಿಗಳ ಮಧ್ಯವರ್ತಿಯಾದ, ಹಾಗೂ ತರ್ದವಾಡಿಗೆ ತೆಂಕಲೂ ತೊರಗಲೆಗೆ ಬಡಗಲೂ ಇದ್ದ, ಬೆಳುಗಲಿ ೫೦೦ ರ ಜಂಬುಖಂಡಿ ೭೦ ರಲ್ಲಿಯ ಮುದುವೊಳಲ್, ಅಂದರೆ ಈಗಣ ಜಮಖಂಡಿ ಸಂಸ್ಥಾನದ ನೆರೆಯಲ್ಲಿಯ ಮುಧೋಳ ಎಂಬ ಬೇರೊಂದು ಸಂಸ್ಥಾನದ ಮುಖ್ಯ ಪಟ್ಟಣವಾದ, ಹಾಗೂ ಜಮಖಂಡಿ ಪಟ್ಟಣದಿಂದ ಸುಮಾರು ೧೨ ಮೈಲು ದಕ್ಷಿಣಕ್ಕೆ ಘಟಪ್ರಭಾ ನದಿಯ ಎಡ ಮಗ್ಗು ಲಲ್ಲಿರುವ, ಮುಧೋಳದಲ್ಲಿ, ಅತಏವ ಬನವಾಸಿನಾಡಿನ ಐಶಾನ (ಈಶಾನ್ಯ) ಎಲ್ಲೆಯಿಂದ ಸಾಕಷ್ಟು ದೂರದಲ್ಲಿ, ಹುಟ್ಟಿದ ರನ್ನನು ಶಂಕರಗಂಡನು ಆಳುತ್ತಿದ್ದ ಬನವಾಸಿನಾಡಿನಲ್ಲಿ ಹುಟ್ಟಿದವನಲ್ಲ ಎಂಬುದರಿಂದಲೂ ಆತನು ಮೊತ್ತಮೊದಲಲ್ಲಿ ಓಲಗಿಸಿದ ಸಾಮಂತನು ಶಂಕರಗಂಡನಲ್ಲ, ರನ್ನನು ಶಂಕರಗಂಡನನ್ನು ಓಲಗಿಸಿರ ಲಾರನು. ಅದೇಮೇರೆಗೆ ಶಾ. ಶ. ೮೮೬ ರಕ್ತಾಕ್ಷಿ ಸಂ| ಫಾಲ್ಗುಣ ಮಾಸ ಸೂರ್ಯ ಗ್ರಹಣ = ಕ್ರಿ. ಶ. 965 ಮಾರ್ಚಿ 5 ಆದಿತ್ಯವಾರ ಸೂರ್ಯಗ್ರಹಣದಂದಿನ ನರಸ ಲಗಿಯ ಶಿಲಾಶಾಸನದಿಂದ[1] ಆಗ್ಗೆ ರಾಷ್ಟ್ರಕೂಟ III ಕೃಷ್ಣನ ಕೆಳಗೆ ಮಹಾ ಸಾಮಂತಾಧಿಪತಿಯಾಗಿ ತರ್ದವಾಡಿ ೧೦೦೦ ವನ್ನು ಆಳುತ್ತಿದ್ದನೆಂದು ತಿಳಿವ

---

೧. Annual Report on South Indian Epigraphy, 1930: Appendix E, ಪು. 73, ನಂ. 113.

ಚಾಳುಕ್ಯ ಆಹವಮಲ್ಲ ತೈಲಪನೂ (ಅಂದರೆ ಆ ಮೇಲೆ ಕ್ರಿ.ಶ. 973ರಲ್ಲಿ ಕರ್ಣಾಟಕದ ಚಕ್ರವರ್ತಿಯಾದ ಅದೇ ತೈಲಪನು ) ರನ್ನನು ಮೊತ್ತಮೊದಲಲ್ಲಿ ಓಲಗಿಸಿದ ಸಾಮಂತನಲ್ಲ; ಏಕೆಂದರೆ ಈತನೂ ಶಂಕರಗಂಡನಂತೆಯೇ ಮಹಾಸಾಮಂತಾಧಿಪತಿಯಲ್ಲದೆ ಸಾಮಂತನಲ್ಲ ( ಮಹಾಸಾಮಂತನೂ ಅಲ್ಲ ) ಮಾತ್ರವಲ್ಲ, ಶಂಕರಗಂಡನು ಆಳುತ್ತಿದ್ದ ಬನವಾಸಿನಾಡು ರನ್ನನು ಹುಟ್ಟಿದ ಮುಧೋಳದಿಂದ ಸಾಕಷ್ಟು ದೂರ ನೈರ್ಋತ್ಯ ( ನೈರುತ್ಯ )ದಲ್ಲಿ ಇದ್ದರೆ, ತೈಲಪನು ಆಳುತ್ತಿದ್ದ ತರ್ದವಾಡಿ ಅಲ್ಲಿಂದ ತಕ್ಕಷ್ಟು ದೂರ ಉತ್ತರದಲ್ಲಿದೆ; ಏವಂಚ ಇವಲ್ಲಿ ಯಾವೊಂದೂ ಆತನು ಹುಟ್ಟಿದ ಮುಧೋಳವನ್ನು ಒಳಕೊಂಡಿರಲಿಲ್ಲ.

ಈಗಣ ಮುಧೋಳ ಸಂಸ್ಥಾನದಲ್ಲಿರುವ ಮಂಟೂರ ಎಂಬಲ್ಲಿಯ ರಾಮಲಿಂಗ ದೇವಸ್ಥಾನದ ಮುಂಗಡೆ ಚಾಳುಕ್ಯ ಜಗದೇಕಮಲ್ಲ ಜಯಸಿಂಹನ ( ಕ್ರಿ. ಶ. 1015-1042 ) ಮಹಾಸಾಮಂತನಾದ ಸೌಂದತ್ತಿಯ ರಟ್ಟವಂಶದ ಎಱೆಯಮ್ಮ ( ಅಥವಾ ಆ ರಟ್ಟರ ಬೇರೆ ಶಾಸನಗಳಿಂದ ತಿಳಿವ ಮೇರೆಗೆ ಎಱೆಗ ) ನೆಂಬವನ ಶಾ. ಶ. ೯೬೩ ವಿಕ್ರಮ ಸಂ| ಮಾರ್ಗಶಿರ ಶುಕ್ಲ ೫ ಆದಿತ್ಯವಾರ = ಕ್ರಿ. ಶ. 1041 ನವಂಬರ 1 ನೆಯ ತಾರೀಕಿನದೊಂದು ಶಿಲಾಶಾಸನವದೆ.[೧] ಅದರಲ್ಲಿ ಆ ಎಱೆಯಮ್ಮನು ರಟ್ಟಸಮುದ್ರವೆಂಬ ಕೆರೆಯನ್ನು ತೋಡಿಸುವ ಬಗ್ಗೆ ಮಂಟೂರಿನ ಮಹಾಜನರಿಗೆ ದ್ರವ್ಯದಾನವನ್ನು ಮಾಡಿದನೆಂದಿದೆ. ತಾಮ್ರಶಾಸನಗಳಂತೆ ಸುಲಭವಾಗಿ ಚಲಿಸದ ಅಥವಾ ಚಲಿಸಲ್ಪಡದ ಶಿಲಾಶಾಸನಗಳಲ್ಲಿ ಹೇಳಿದ ದತ್ತಿಗಳನ್ನು ಆ ಶಾಸನಕಾಲಗಳ ಅರಸರು ತಾವೇ ಬಿಟ್ಟಿರಲಿ ಅಥವಾ ಅವರ ಆಳಿಕೆಗಳಲ್ಲಿ ಇತರರು ಬಿಟ್ಟಿರಲಿ, ಹೇಗೂ ಆ ಅರಸರ ರಾಜ್ಯಗಳಲ್ಲಿ ತಾನೇ ಬಿಟ್ಟ ದತ್ತಿಗಳನ್ನು ಹೇಳುವ ಆ ಶಾಸನಗಳ ಕಲ್ಲುಗಳು ಆ ಅರಸರ ಸ್ವಂತ ರಾಜ್ಯಗಳಲ್ಲೇ ನಡಲ್ಪಡುವವಲ್ಲದೆ ಹೊರಗಲ್ಲ ಎಂಬುದರಿಂದ, ಮಂಟೂರು ಮಾತ್ರವಲ್ಲ ಅದರ ಸುತ್ತಣ ಸೀಮೆಯೂ ಎಱೆಯಮ್ಮನ ರಾಜ್ಯದಲ್ಲಿ ಸೇರಿರಬೇಕು, ಅಂದರೆ ಈಗಣ ೮೧ ಹಳ್ಳಿಗಳುಳ್ಳ ಮುಧೋಳ ಸಂಸ್ಥಾನವೂ, ಅತಏವ ಮಂಟೂರಿನ ಬರೀ ೯ ಮೈಲಿಗೆ ಬಡಗಲಲ್ಲಿರುವ ( ಹಾಗೂ ಆ ಸಂಸ್ಥಾನದ ಮುಖ್ಯ ಪಟ್ಟಣವಾದ ) ರನ್ನನ ಮುದುವೊಳಲೆಂಬ ಮುಧೋಳವೂ, ಆ ರಟ್ಟರ ರಾಜ್ಯದಲ್ಲಿ ಸೇರಿರಬೇಕು. ಎಱೆಯಮ್ಮನ ಪಿತಾಮಹನು I ಕಾರ್ತವೀರ್ಯನು ಅಥವಾ ಹೆಸರನ್ನು ಸಣ್ಣಿಸಿ ಕತ್ತನು. ಶಾ. ಶ. ೯೦೨ ವಿಕ್ರಮ ಸಂ| ಆಷಾಢದ ಅಮಾವಾಸ್ಯೆ ಆದಿತ್ಯವಾರ ಸೂರ್ಯಗ್ರಹಣ= ಕ್ರಿ. ಶ. 978 ಜೂನ್ 8 ಶನಿವಾರದಂದಿನ ಸೂರ್ಯಗ್ರಹಣದ ಮಾರನೆಯ

೧. Fleet's Kanarese Dynasties ( FKD ಪು. 553 ); South Indian Epigraphy Report, 1929: Appendix E, ಪು. 47; ನಂ. 91.

ಜೂನ್ 9 ಆದಿತ್ಯವಾರದ ಸೊಗಲದ ಶಿಲಾಶಾಸನದಿಂದ[೧] ರಟ್ಟಕುಲ ಭೂಷಣನಾದ I ಕಾರ್ತವೀರ್ಯನು ಆಗ್ಗೆ ಚಾಳುಕ್ಯ ತೈಲಪನ ಕೆಯ್ಕೆಳಗೆ ಕೂಂಡಿ ವಿಷಯವನ್ನು ಆಳುತ್ತಿದ್ದನೇದು ತಿಳಿಯುತ್ತದೆ. ಕತ್ತಭೂಪನೆಂದಷ್ಟೇ ವಿನಾ ಯಾವೊಂದೂ ಅಧಿಕಾರಸೂಚಕ ಸಂಜ್ಞೆಯಿಂದ ಹೇಳಲ್ಪಟ್ಟಿಲ್ಲದ ಈತನ ಪದವಿ ಪ್ರಾಯಶಃ ಸಾಮಂತರಿಗಿಂತ ಮೇಲಿನದಾಗಿರದು. ಈ ರಟ್ಟರಲ್ಲಿ ಪ್ರಾಯಶಃ ಎಱೆಯಮ್ಮನಿಗಿಂತ ಹಿಂದಣವರನ್ನು ಕುರಿತು ನಿಶ್ಚಯವಾದ ವಿವರವು ತಿಳಿದಿಲ್ಲವಾದರೂ ಇವರು ಧರ್ಮದಿಂದ ಜೈನರೆಂದೂ ಇವರ ಮೂಲಪುರುಷನು ಕಾರೆಯಗಣದ ಇಂದ್ರಕೀರ್ತಿ ಎಂಬ ಜೈನಯತಿಯ ಶಿಷ್ಯನೆಂದೂ[೨] ಗೊತ್ತದೆ ಮಾತ್ರವಲ್ಲ, ವಿಷ್ಣುದ್ವೇಷಿಯಾದ ವೈದಿಕ ಕಾರ್ತವೀರ್ಯನ ಹೆಸರನ್ನು ವೈದಿಕ ಧರ್ಮದ ಅರಸರು ಪ್ರಾಯಶಃ ತಾಳಿಕೊಳ್ಳರಾದರೂ ಜೈನರ ಶಲಾಕಪುರುಷನಾದ ಆತನ ಹೆಸರನ್ನು ಜೈನ ಅರಸರು ಅಲ್ಲಗಳೆಯರೆಂಬ ಕಾರಣದಿಂದಲೂ I ಕಾರ್ತವೀರ್ಯನೆಂಬ ರಟ್ಟರಸನು ಜೈನನೆಂದು ವ್ಯಕ್ತವಾಗುತ್ತದೆ. ಸೊಗಲದ ಶಾಸನದ ಕ್ರಿ. ಶ. 978 ರ ಆಚೀಚೆ ಕೆಲಕೆಲವಾದರೂ ವರ್ಷ ಆಳುತ್ತಿರಬೇಕಾದ ಈತನ ಆಳೊತ್ತು ರನ್ನನ ಪರಶುರಾಮ ಚರಿತದ ರಚನೆಗೆ ಮೇಲೆ ನಿಶ್ಚಯಿಸಿದ ಕ್ರಿ. ಶ. 974–979 ಕ್ಕೆ ಸರಿಗೂಡುತ್ತದೆ. ಈ ರಟ್ಟರ ರಾಜ್ಯದಲ್ಲಿ ಒಳಪಟ್ಟ ಮುದುವೊಳಲಲ್ಲಿ ಹುಟ್ಟಿದ ರನ್ನನು ಮೊತ್ತ ಮೊದಲಲ್ಲಿ ಇವರ ಆಸ್ಥಾನವನ್ನು ಸೇರಿ, ಅಲ್ಲಿ ತನ್ನೊಡೆಯನೂ ಸ್ವಜ್ಞಾತೀಯನೂ ಆದ I ಕಾರ್ತವೀರ್ಯನ ಗೌರವಾರ್ಥವಾಗಿ ಹಾಗೂ ನಾಮಸಾದೃಶ್ಯದಿಂದ ವ್ಯಕ್ತವಾಗುವಂತೆ ಆತನಿಗೆ ಅಂಕಿತವಾಗಿ, ಆತನ ಹೆಸರಿನ ಸ್ಮಾರಕವಾಗಿ, ಯಥಾರ್ಥವಾಗಿ ಕಾರ್ತವೀರ್ಯಚರಿತವಾದ ತನ್ನ ಪರಶುರಾಮಚರಿತವನ್ನು ಅವನ ಆಳಿಕೆಯಲ್ಲಿ ರಚಿಸಿರಬೇಕು. ಅಜಿತಪುರಾಣದಲ್ಲಿಯೂ (I. ೮೧) ಗದಾಯುದ್ಧದಲ್ಲಿಯೂ (I. ೩೪) 'ಸಾಮಂತರ' ಎಂದಿರುವ ಬಹುವಚನವು ಬಹುಮಾನಾರ್ಥವಾಗಿರದೆ ಸಂಖ್ಯಾವಾಚಕವಾದರೆ, ಇಬ್ಬರಾದರೂ ಸಾಮಂತರ ಆಳಿಕೆಯಲ್ಲಿ ಇದ್ದನೆಂದಾಗುವ ರನ್ನನು I ಕಾರ್ತವೀರ್ಯನ ಆಳಿಕೆಯಲ್ಲಿ ಮಾತ್ರವಲ್ಲ, ಅವನ ಪೂರ್ವಾಧಿಕಾರಿಯು ಅಥವಾ ಉತ್ತರಾಧಿಕಾರಿಯ ಆಳಿಕೆಯಲ್ಲಿಯೂ ಆ ರಟ್ಟರ ಆಸ್ಥಾನದಲ್ಲಿ ಕೆಲವೊತ್ತಿಗಾದರೂ ಇದ್ದಿರಬೇಕು. ಹಾಗಾದರೆ ಅಜಿತಪುರಾಣದ ( XII. ೯ ) 'ಪಿರಿಯಂ ಬೂತುಗ' ಎಂಬ ಪದ್ಯದಲ್ಲಿ ಈ ರಟ್ಟ I ಕಾರ್ತವೀರ್ಯನ ಹೆಸರಿಲ್ಲವೇಕೆ? ಎಂದು ಶಂಕಿಸಿದರೆ, ರನ್ನನು ಓಲಯಿಸಿದ ಗಂಗ ಮಂಡಳೇಶ್ವರನ ಅಥವಾ ಮಂಡಳೇಶ್ವರರ ಹೆಸರು ಆ ಪದ್ಯದಲ್ಲಿ ಇದೆಯೇ? ಎಂದು ಕೇಳಬಹುದು. ಆ ಪದ್ಯವಾದರೊ ಆತನು ಓಲಯಿಸಿದ ಸಾಮಂತರೇ ಮೊದಲಾದವರನ್ನು ಹೆಸರಿಸಲೆಂದು ಬರೆದುದೇ ಅಲ್ಲ; ಅಥವಾ

೧. EI, XVI ಪು. 1—9. ೨. FKD, ಪು. 552.

ಹಾಗಿದ್ದರೆ ರನ್ನನ ತೀರ ಚಿಕ್ಕಂದಿನಲ್ಲಿ ಮೃತನಾದ, ಅತಏವ ರನ್ನನು ಕಂಡಿರಲಾರದ ಬೂತುಗನ ಹೆಸರೂ ಅದರಲ್ಲೇಕೆ? ರನ್ನನು ಆಗ್ಗೆ ಓಲಯಿಸುತ್ತಿದ್ದ ಚಾಳುಕ್ಯ ತೈಲಪನ ಹೆಸರು ಅದರಲ್ಲಿ ಇಲ್ಲವೇಕೆ?

ಸೊಗಲದ ಶಾಸನದಲ್ಲಿ ಕಂಚಿಯಬ್ಬೆ ಎಂಬಾಕೆ ಸುವರ್ಣಾಕ್ಷಿ ಎಂಬ ಶೈವ ದೇವಾಲಯದಲ್ಲಿ ತಪಂಗೆಯ್ವ ತಪೋಧನರಾಹಾರದಾನಕ್ಕೆ (ಬಂ. ೪೫) ಬಿಟ್ಟ ದತ್ತಿಯನ್ನು ಹೇಳುವಲ್ಲಿ ಆಗ್ಗೆ ಆ ನಾಡೊಡೆಯನಾಗಿದ್ದ ಕತ್ತ (ಬಂ. ೪೧; ೪೨) ಎಂಬ I ಕಾರ್ತವೀರ್ಯನ ಹಾಗೂ ಅವನ ಅಧಿರಾಜನಾದ ಚಕ್ರವರ್ತಿ ಚಾಳುಕ್ಯ ತೈಲಪನ (ಬಂ. ೩೬; ೩೮) ಹೆಸರುಗಳನ್ನು ವಾಡಿಕೆಯ ಮೇರೆಗೆ ತಾನೆ ಅದರಲ್ಲಿ ಹೇಳಿದೆಯಲ್ಲದೆ, ಆ ಶಾಸನಕಾರಿಯಾದ ವ್ಯಕ್ತಿಯ ಧರ್ಮಕ್ಕೆ ಅನುರೂಪವಾಗಿ ಶಿವಸ್ತುತಿಯಿಂದ ಮೊದಲಾಗುವ ಆ ಪ್ರತ್ಯಕ್ಷ ಶೈವ ಶಾಸನವು I ಕಾರ್ತವೀರ್ಯನ ಸ್ವೀಯ ಶಾಸನವಲ್ಲ, ಅತಏವ ಆತನ ಆಸ್ಥಾನದಲ್ಲಿ ರಚಿಸಲ್ಪಟ್ಟುದಲ್ಲ. ಆದಕಾರಣ ಪ್ರೌಢಕವಿತಾಬದ್ಧವಾದ ಆ ಕನ್ನಡ ಶಾಸನವನ್ನು ರಚಿಸಿದ ಕವಿ ಕಮಲಾದಿತ್ಯನು (ಬಂ. ೬೭) ಸೊಗಲದತ್ತಣ ಯಾವೊಬ್ಬ ಹೆಸರುವಾಸಿಯಾದ ಕವಿಯಾಗಿರಬಹುದಲ್ಲದೆ, I ಕಾರ್ತವೀರ್ಯನ ಆಸ್ಥಾನಕವಿಯಲ್ಲ.

ರನ್ನನು ತನ್ನ ಗದಾಯುದ್ಧದ ರಚನೆಯಲ್ಲಿ ಪಂಪಭಾರತದ XIII ನೆಯ ಆಶ್ವಾಸಕ್ಕೆ ಋಣಿಯಾಗಿರುವಂತೆ, ತನ್ನ ಚಕ್ರೇಶ್ವರಚರಿತವೆಂಬ ಭರತೇಶ್ವರನ ಚರಿತ್ರದ ರಚನೆಯಲ್ಲಿ ಪಂಪನ 'ಉಪಮಾತೀತಮೆನಿಪ್ಪ' (ಅಜಿತ XII. ೩೬) ಆದಿಪುರಾಣದ X ರಿಂದ XV ರ ವರೆಗಣ ಆಶ್ವಾಸಗಳಲ್ಲಿ ಹೇಳಿರುವ ಆ ಕಥೆಯನ್ನು ಆಧರಿಸಿರಬಹುದಾದರೂ, ತನ್ನ ಪರಶುರಾಮಚರಿತವನ್ನೂ ಅಜಿತಪುರಾಣವನ್ನೂ ಜಿನಸೇನ–ಗುಣಭದ್ರರಿಂದ ರಚಿತವಾದ ಸಂಸ್ಕೃತ ಮಹಾಪುರಾಣದ ಉತ್ತರಭಾಗವಾದ ಹಾಗೂ ಆದಿತೀರ್ಥಂಕರನೊಬ್ಬನ ಕಥೆಯನ್ನುಳಿದು ಮಿಕ್ಕೆಲ್ಲ ತೀರ್ಥಂಕರರ ಕಥೆಗಳೂ ಆ ಕಥೆಗಳಲ್ಲಿ ಸಂದರ್ಭೋಚಿತವಾಗಿ ಬರುವ ಇತರ ಶಲಾಕ ಪುರುಷರ ಉಪಕಥೆಗಳೂ ಉಳ್ಳ ಗುಣಭದ್ರನ ಉತ್ತರಪುರಾಣದ (ಕ್ರಿ. ಶ. 897) ಆಧಾರದಿಂದ ರಚಿಸಿರಬೇಕು. ಆ ಮಹಾಪುರಾಣದಲ್ಲಿ ಆದಿ ತೀರ್ಥಂಕರನ ಕಥೆಯಾದ ಪೂರ್ವಪುರಾಣದ ರಚಕನಾದ ಜಿನಸೇನನನ್ನು ಪಂಪನು ತನ್ನ ಆದಿಪುರಾಣದಲ್ಲಿ (I. ೩೫) ಹೆಸರಿಸಿರುವಂತೆ ರನ್ನನು ಆ ಜಿನಸೇನನ ಶಿಷ್ಯನೂ ಉತ್ತರಪುರಾಣದ ರಚಕನೂ ಆದ ಗುಣಭದ್ರನನ್ನು ತನ್ನ ಅಜಿತಪುರಾಣದಲ್ಲಿ ಸ್ಮರಿಸಿಲ್ಲವಾದರೂ, ಅಜಿತಪುರಾಣದ (XII. ೨೯) 'ನೋಡಿ ನಂಬುಗೆ ಮಹಾಪುರಾಣದೆ ವಿಬುಧರ್' ಎಂಬ ಮಾತಿನಿಂದ ಉತ್ತರಪುರಾಣವನ್ನೇ ಅಲ್ಲ, ಸಮಗ್ರ ಮಹಾಪುರಾಣವನ್ನೇ ಉಲ್ಲೇಖಿಸಿರುವೀತನು ಮಹಾಪುರಾಣವನ್ನು ಉಪಯೋಗಿಸಿರಬೇಕೆಂದು ವ್ಯಕ್ತ

ವಾಗುವುದರಿಂದ, ಈತನು ತನ್ನ ಪರಶುರಾಮುಚರಿತದಲ್ಲಿಯೂ ಅಜಿತಪುರಾಣ ದಲ್ಲಿಯೂ ಉತ್ತರಪುರಾಣವನ್ನು ಆಧರಿಸಿರಬೇಕು ಮಾತ್ರವಲ್ಲ, ತನ್ನ ಚಕ್ರೇಶ್ವರ ಚರಿತದಲ್ಲಿ ಜಿನಸೇನನ ಪೂರ್ವಪುರಾಣವನ್ನೂ ಅನುಸರಿಸಿರಬೇಕೆಂದು ತೋರುತ್ತದೆ. ಹೇಗೂ ಪಂಪನೇ ತನ್ನ ಆದಿಪುರಾಣದಲ್ಲಿ ಕಥಾಭಾಗದ ಮಟ್ಟಿಗೆ ಜಿನಸೇನನ ಹೆಜ್ಜೆಯಲ್ಲಿ ಹೆಜ್ಜೆ ಇಟ್ಟು ನಡೆದಿರುವಲ್ಲಿ, ರನ್ನನು ತನ್ನ ಚಕ್ರೇಶ್ವರಚರಿತದ ಕಥೆ ಯನ್ನು ಜಿನಸೇನನಿಂದ ಎತ್ತಿಕೊಂಡರೂ ಪಂಪನಿಂದ ಎತ್ತಿಕೊಂಡರೂ ಒಂದೇ.

ನಾಗವರ್ಮನ (ಕ್ರಿ. ಶ. 1120–85) ಕಾವ್ಯಾವಲೋಕನದಲ್ಲಿ ಪರಶು ರಾಮನಿಗೆ ಸಂಬಂಧಿಸುವ ಇವೆರಡು ಪದ್ಯಗಳಿವೆ—

೧. ಒಮ್ಮೆ ಪೋಗಿ ಮೃಗಯಾನಿಮಿತ್ತದಿಂ
ಧರ್ಮ್ಮವುಂ ಮಱೆದು ನೋಡ (ಡಿ) ಬೇಡಿದೊಂ ।
ಪೆರ್ಮೆಗೆಟ್ಟು ಜಮದಗ್ನಿಯಂ ನೃಪಂ
ದುರ್ಮ್ಮದಂ ಸುರಭಿಯಂ ವಿಮೋಹದಿಂ ॥ ೩೭೩ ॥ (ಪು. 60)

೨. ಕ್ಷಿತಿಯೊಳರಾತಿ ಭೂಪತಿಗಳಂ ತವೆ ಕೊಂದು ಸಮಂತು ವಿಪ್ರಸಂ
ತತಿಗಖಿಳಾವನೀತಳಮನಿತ್ತು ನೆಗೞ್ಚಿದನಲ್ತೆ ವಿಕ್ರಮೋ ।
ನ್ನತಿಯೊಡನೊಂದು ದಾನಗುಣದುನ್ನತಿಯಂ ಭುವನಕ್ಕೆ ಭಸ್ಮಸಾ
ತ್ಕೃತರಿಪು ಪಾತ್ರಸಾತ್ಕೃತ ಜಗದ್ವಲಯಂ ಜಮದಗ್ನಿ ನಂದನಂ ॥ ೮೧೮ ॥
(ಪು. 37)

ಇವಲ್ಲಿಯ ಮೊದಲನೆಯದರಲ್ಲಿ ಮೃಗಯಾನಿಮಿತ್ತವಾಗಿ ಅರಸನು ಹೋಗಿ ಧರ್ಮವನ್ನು ಮರೆತೂ ಹಿರಿಮೆಗೆಟ್ಟೂ ಮದೋನ್ಮತ್ತನಾಗಿ ವಿಮೋಹದಿಂದ ಜಮ ದಗ್ನಿಯೊಡನೆ ಸುರಭಿಯನ್ನು ಬೇಡಿದನು ಎಂದಿರುವಲ್ಲಿ ಒಂದೆರಡಾದರೂ ಆಶ್ವಾಸ ಗಳಷ್ಟು ಬೇಕಾಗುವ ಕಥಾಭಾಗವನ್ನು ಒಂದೇ ಒಂದು ಪದ್ಯದಲ್ಲಿ ತುರುಕಿದೆ. ಮತ್ತಿನದು ವಿಪ್ರಸಂತತಿಗೆ ಅಖಿಳಾವನೀತಳವನ್ನು ಇತ್ತ ವೈದಿಕ ಪರಶುರಾಮನಿಗೆ ಅನ್ವಯಿಸುತ್ತದಲ್ಲದೆ ಹಾಗೆ ಮಾಡಿಲ್ಲದ ಜೈನ ಪರಶುರಾಮನಿಗಲ್ಲ. ಅತಏವ ಇವೆರಡೂ ರನ್ನನ ಪರಶುರಾಮುಚರಿತದಿಂದ ಆಯ್ದುಕೊಂಡವಾಗಿರಲಾರವು. ರನ್ನನು ಗದಾಯುದ್ಧದಲ್ಲಿ (I. ೧೯, ೨೪, ೨೮; VI. ೨೮ ಗದ್ಯ) ಅಲ್ಲಲ್ಲಿ ಪರಶುರಾಮನನ್ನು ಕುರಿತಂತೆ ಇವೂ ಪ್ರಾಯಶಃ ಪರಶುರಾಮನ ಕಥೆಯಲ್ಲದ ಯಾವವೊ ಬೇರೆ ಕಾವ್ಯಗಳಲ್ಲಿ ಸಂದರ್ಭೋಚಿತವಾಗಿ ಉಪಮೆಯಾಗಿಯೊ ಉದಾಹರಣೆಯಾಗಿಯೊ ಸ್ವಯಂ ಕವಿಯೇ ನುಡಿದ ಮಾತೊ ಅಥವಾ ತನ್ನ ಪಾತ್ರದಿಂದ ನುಡಿಸಿದ ಮಾತೊ ಎಂದಷ್ಟೇ ಊಹಿಸಬಹುದು.

ಗದಾಯುದ್ಧದ ಕೊನೆಯಲ್ಲಿ (X. ೨೩) ಕಾಣುವ

ಶಕ ಸಮಗತಿ ಖುತು ಯುಗ ಶಶಿ
ನಿಕರಾಂಕಂ ಚಿತ್ರಭಾನು (ಸಂವತ್ಸರ) ಕಾ ।
ರ್ತಿಕ ಸಿತ ಸಪ್ತಮಿ (ದಿನದೊಳ್)
ಸುಕರಂ ಬುಧಸೇವ್ಯಮಾಯ್ತು ರನ್ನನ ಕಾವ್ಯಂ ॥

ಎಂಬೀ ಕಂದದ ಪಾಠದಲ್ಲಿ ದೋಷಗಳಿದ್ದರೂ ಅದು ಗದಾಯುದ್ಧವು ಬರೆದು ಮುಗಿದ ತೇದಿಯನ್ನೇ ಹೇಳುತ್ತದೆಂದು ನಾನೂ ಒಮ್ಮೆ ನಂಬಿ, ಅದನ್ನು

ಶಕ ಸಮಗತಿಯುತ ಯುಗ ಶತ(ತಿ)[೧]
ನಿಕರಾಂಕಂ ಚಿತ್ರಭಾನು (ಸಂವತ್ಸರ) ಕಾ ।
ರ್ತಿಕ ಸಿತ ಸಪ್ತಮಿ (ದಿನದೊಳ್)
ಸುಕರಂ ಬುಧಸೇವ್ಯಮಾಯ್ತು ರನ್ನನ ಕಾವ್ಯಂ ॥

ಎಂದು ಯಥಾಮತಿಯಾಗಿ ತಿದ್ದಿ, 'ಅಂಕಾನಾಂ ವಾಮತೋ ಗತಿಃ' ಎಂಬುದರಿಂದ ಶಕಸಮ = ಶಕವರ್ಷದ,[೨] ನಿಕರ = ನಿಧಿ ಅಂದರೆ (ನವನಿಧಿ ಎಂಬುದರಿಂದ) ೯, ನಿಕರ ಶತ (ಶತಿ) = ೯೦೦; ಯುಗ = (ಚತುರ್ಯುಗ ಎಂಬುದರಿಂದ) ೪, ಅಂದರೆ ಶಾ. ಶ. ೯೦೪ ರಿಂದ ಯುತ = ಕೂಡಿದ ಚಿತ್ರಭಾನು ಸಂ| ಕಾರ್ತಿಕ ಶುಕ್ಲ ೭ = ಕ್ರಿ. ಶ. 982 ಅಕ್ಟೋಬರ 27 ಶುಕ್ರವಾರ ಆ ಕಾವ್ಯವು ಕೊನೆಗಂಡಿತೆಂದು ಸುಮಾರು ೧೨-೧೩ ವರ್ಷಗಳ ಹಿಂದೆ 'ಉದಯಭಾರತ'ದಲ್ಲಿ (I. ೨, ಜುಲಾಯಿ 1927; I. ೪, ಜನವರಿ 1928) ಬರೆದ ಅವೆರಡು ಲೇಖಗಳಲ್ಲಿ ಹೇಳಿದೆ. ಆದರೆ ಈಗ ಪುನರಾಲೋಚಿಸುವಲ್ಲಿ ಈ ಮುಂದಣ ಹಲವು ಕಾರಣಗಳಿಂದ ಗದಾಯುದ್ಧವು ಕ್ರಿ ಶ. 982 ರಲ್ಲೂ ಅಲ್ಲ, ತೈಲಪನ ಆಳಿಕೆಯಲ್ಲೇ ಅಲ್ಲ, ಅವನ ಮಗನಾದ ಇರಿವ ಬೆಡಂಗ ಸತ್ಯಾಶ್ರಯನ ಆಳಿಕೆಯಲ್ಲಿ, ಅಂದರೆ ಕ್ರಿ. ಶ. 997ರಿಂದ ಈಚೆ ರಚಿತವಾಯಿತೆಂದೇ ಕಂಡಿತವೆನಿಸುವುದರಿಂದ, ಆ ಕಾವ್ಯದ ರಚನಕಾಲವಿಚಾರವಲ್ಲಿ ಈ ಕಂದ ಪದ್ಯವನ್ನು ನೆಮ್ಮಲಾಗುವುದಿಲ್ಲ.

೧. ಅಜಿತಪುರಾಣದ (XII. ೪೨) 'ಕರಮೆಸೆದುವು ರತ್ನತ್ರಯ ಪರಿಕಲ್ಪದೆ' ಎಂಬಾ ಕಂದಪದ್ಯದಿಂದ, ಆ ಪುರಾಣವು ಬರೆದು ಮುಗಿದ ಕ್ರಿ. ಶ. 993ರ ಕೊನೆಯ ವರೆಗೆ ರನ್ನನು ಕನ್ನಡಸಾಹಿತ್ಯದ ಮಟ್ಟಿಗೆ ಪರಶುರಾಮಚರಿತ,

---

೧. 'ಶತಿ' ಎಂದರೆ ಶತ ಎಂಬಂತೆಯೇ ನೂರು ಎಂದರ್ಥ.

೨. ಸಮ = ವರ್ಷ ('ವರ್ಷಂ ಹಾಯನೋಬ್ದೋ ಸಮಾಃ ಶರತ್'—ಹೇಮಚಂದ್ರನ ಅಭಿದಾನಚಿಂತಾಮಣಿ, ಶ್ಲೋ. ೧೫೯); ಉದಾ: ಚಾವುಂಡರಾಯಪುರಾಣದ ರಚನ ಕಾಲವನ್ನು ಹೇಳುವ ಕೊನೆಯ ಪದ್ಯದಲ್ಲಿ 'ನವಶತ ಸಂಖ್ಯೆಯಾಗೆ ಶಕಕಾಲ ಸಮಂ ನೆಗಳ್ವೀಶ್ವರಾಬ್ದಂ' ಅಂದರೆ ಶಾ. ಶ. 900 ನೆಯ ವರ್ಷದ ಈಶ್ವರ ಸಂವತ್ಸರ (ಚಾವುಂಡರಾಯ ಪುರಾಣ, ಪೀಠಿಕೆ iii; ಕರ್ಣಾಟಕ ಕವಿಚರಿತೆ I, ಪು. 46)

ಚಕ್ರೇಶ್ವರಚರಿತ ಹಾಗೂ ಅಜಿತಪುರಾಣ ಎಂಬೀ ಮೂರೇ ಕೃತಿಗಳನ್ನಲ್ಲದೆ ಮಿಕ್ಕ ಯಾವೊಂದೂ ಕಾವ್ಯವನ್ನು ಬರೆದಿಲ್ಲವೆಂದೂ ಅವು ಮೂರೂ ಜೈನಧರ್ಮದ ಕಾವ್ಯ ಗಳಲ್ಲದೆ ಅವಲ್ಲಿ ಯಾವೊಂದೂ ಜೈನೇತರವಲ್ಲವೆಂದೂ ಪರಶುರಾಮಚರಿತವೂ ಅಜಿತ ಪುರಾಣವೂ ಹೇಗೂ ಗದಾಯುದ್ಧವಲ್ಲವಷ್ಟೇ, ಚಕ್ರೇಶ್ವರಚರಿತವಾದರೂ ಜೈನ ಚಕ್ರವರ್ತಿಯಾದ ಭರತನ ಕಥೆಯೇ ವಿನಾ ಗದಾಯುದ್ಧವಲ್ಲವೆಂದೂ ಮೇಲೆ ಸಕಾರಣವಾಗಿ ವಿವರಿಸಿರುವುದರಿಂದ, ಗದಾಯುದ್ಧವು ಅಜಿತಪುರಾಣಕ್ಕಿಂತ ಈಚೆ, ಅಂದರೆ ಕ್ರಿ. ಶ. 993 ರಿಂದ ಈಚೆ ತಾನೆ ರಚಿತವಾಗಿರಬೇಕು.

೨. ಅಜಿತಪುರಾಣದ ಪ್ರತ್ಯಾಶ್ವಾಸದ ಕೊನೆಯ ಗದ್ಯದಲ್ಲಿ–'ಶ್ರೀಮದಭಿನವ ಕವಿಚಕ್ರವರ್ತಿ ಕವಿರತ್ನ' – ಹಾಗೂ ಅದರ ಕೊನೆಯ ಆಶ್ವಾಸದ ( XII. ೩೮ )

ಸುಭಗ ಕವಿ ಪಂಪನಿಂ ವಾ
ಗ್ವಿಭವೋನ್ನತಿ ನೆಗೞ್ದವನ ಗುಣಗಣನೆಯೊಳೆಸೆದಿ ।೧
ರ್ದುಭಯಕವಿಚಕ್ರವರ್ತಿಗ
ಳಭಿನವ ಕವಿಚಕ್ರವರ್ತಿಗಂ ದೊರೆಯೊಳರೆ ॥

ಎಂಬ ಕಂದದಲ್ಲಿ ರನ್ನನು ತನ್ನನ್ನು ಅಭಿನವ ಕವಿಚಕ್ರವರ್ತಿ ಎಂದೂ ಗದಾ ಯುದ್ಧದ ಆಶ್ವಾಸಾಂತ್ಯದ ಗದ್ಯಗಳಲ್ಲಿ 'ಕವಿಚಕ್ರವರ್ತಿ ಕವಿರನ್ನ' ಎಂದೂ ಹೇಳಿಕೊಂಡಿರುವಲ್ಲಿ ಒಂದೇ ರಾಜ್ಯದಲ್ಲಿ ಒಂದೇ ಕಾಲದಲ್ಲಿ ಹೇಗೆ ಇಬ್ಬರು ಚಕ್ರವರ್ತಿಗಳು ಇರಲಾರರೋ ಹಾಗೆಯೇ ಇಬ್ಬರು ಕವಿಚಕ್ರವರ್ತಿಗಳೂ ಇರಲಾರ ರೆಂಬ ಕಾರಣ, ಶಾಂತಿಪುರಾಣ ( I. ೯; ಮತ್ತು ಪ್ರತ್ಯಾಶ್ವಾಸದ ಕೊನೆಯ ಗದ್ಯ ) ದಿಂದ ಉಭಯಕವಿಚಕ್ರವರ್ತಿ ಎಂದು ತಿಳಿವ ಪೊನ್ನನು ದಿವಂಗತನಾದ ಬಳಿಕ ತಾನೆ ಕಾಲಕ್ರಮೇಣ ಕವಿಚಕ್ರವರ್ತಿಯಾದ ರನ್ನನು ಅಜಿತಪುರಾಣವನ್ನು ರಚಿಸು ವಾಗ ಅಭಿನವನೇಕೆ? ಗದಾಯುದ್ಧವನ್ನು ರಚಿಸುವಾಗ ಅಭಿನವನಲ್ಲವೇಕೆ? ಎಂದಷ್ಟೇ ವಿಚಾರಿಸಿದರೆ, ಮೇಲೆ ಕಂಡಿರುವಂತೆ ಅಜಿತಪುರಾಣವನ್ನು ಬರೆವ ಹೊತ್ತಿಗೆ ಆತನು ಕವಿಚಕ್ರವರ್ತಿ ಎಂಬಾ ಬಿರುದಿಗೆ ಇನ್ನೂ ಅಭಿನವ ಅಂದರೆ ತೀರ ಹೊಸಬನಾಗಿರಬೇಕು, ಅತಏವ ಅದನ್ನಾತನು ಪಡೆದು ಆಗ್ಗೆ ಈಷನ್ಮಾತ್ರ ವಷ್ಟೇ ಕಾಲವಾಗಿರಬೇಕು, ಗದಾಯುದ್ಧವನ್ನು ಬರೆವಾಗಲಾದರೊ ಆ ಬಿರುದು ಅವನಿಗಿನ್ನು ಅಭಿನವವಾಗಿರದೆ ಬೇಕಾದಷ್ಟು ಬಳಕೆಯಾಗಿರಬೇಕು, ಅಂದರೆ ಅದನ್ನಾತನು ಪಡೆದು ಸಾಕಷ್ಟು ಕಾಲವಾಗಿರಬೇಕು ಎಂದು ವ್ಯಕ್ತವಾಗುವುದರಿಂದ, ಅಜಿತಪುರಾಣವನ್ನು ರಚಿಸಿ ಮುಗಿಸಿದ ಕ್ರಿ. ಶ. 993 ರಿಂದ ಕೆಲವೊ ಹಲವೊ ವರ್ಷಗಳ ಬಳಿಕ ತಾನೆ ರನ್ನನು ಗದಾಯುದ್ಧವನ್ನು ರಚಿಸಿರಬೇಕು.

---

೧. ಈ ಚರಣದಲ್ಲಿ ಛಂದೋದೋಷವಿದೆ.

೩. ಗದುಗಿನ ವೀರನಾರಾಯಣ ದೇವಸ್ಥಾನದಲ್ಲಿರುವೊಂದು ಶಿಲಾಶಾಸನ ದಲ್ಲಿಯು[೧]

ಮೊದಲೊಳ್ಕಿತ್ತಿಕ್ಕಿ ರಟ್ಟರ್ಪರ್ಪಲರುಮನದಟಂ ಮುಂಜನಂ ಕೊಂದು ದೋರ್ಗ
ರ್ಬ್ಬದರಂ (.) ಯುದ್ಧದೊಳ್ ಪಂಚಲನ ತಲೆಯುಮಂ ಕೊಂಡು ಚಾಳುಕ್ಯ ರಾಜ್ಯಾ।
ಸ್ಪದಮಂ ಕಯ್ಕೊಂಡು ನಿಷ್ಕಂಟಕಮೆನಿಸಿದನೇಕಾಂಗದಿಂ ಶ್ರೀಮುಖಾಬ್ದಂ
ಮೊದಲಾಗಿರ್ಪತ್ತುನಾಲ್ಕುಂ ಬರಿಸಮುಖಿಲ ಭೂಚಕ್ರಮಂ ತೈಲಭೂಪಂ ॥

ಎಂಬ ಮಹಾಸ್ರಗ್ಧರೆಯಿಂದ ಕ್ರಿ. ಶ. 973 ರ ಶ್ರೀಮುಖ ಸಂವತ್ಸರದಿಂದ 997 ರ ವರೆಗೆ ೨೪ ವರ್ಷ ರಾಜ್ಯವಾಳಿದ ಚಾಳುಕ್ಯ ಆಹವಮಲ್ಲ ತೈಲಪನು ರಾಷ್ಟ್ರಕೂಟರನ್ನು ಕಿತ್ತನೆಂದೂ ಮುಂಜನನ್ನು ಕೊಂದನೆಂದೂ ಪಂಚಲನ ತಲೆಯನ್ನು ಕೊಂಡನೆಂದೂ ತಿಳಿಯುತ್ತದಷ್ಟೇ. ಇವಲ್ಲಿ ರಾಷ್ಟ್ರಕೂಟ II ಕಕ್ಕನನ್ನು ಕಿತ್ತೀ ಕ್ರಿ. ಶ. 973 ರಲ್ಲಿ ತೈಲಪನು ರಾಷ್ಟ್ರಕೂಟರ ಸಿಂಹಾಸನವನ್ನು ಏರಿದುದರಿಂದ, ಆ ಘಟನೆ ಕ್ರಿ. ಶ. 993 ರಲ್ಲಿಯ ಅಜಿತಪುರಾಣದ ರಚನೆಗೆ ೨೦ ವರ್ಷಗಳ ಹಿಂದೆಯೇ ಆಗಿ ಹೋಗಿದೆ. ಪಂಚಲನೊಂದಿಗೆ ಆದ ಯುದ್ಧವನ್ನು ಗದಾಯುದ್ಧದಲ್ಲಿ ( II. ೭ ಗದ್ಯ–' ಪಾಂಚಾಲ ಮದೇಭಪಂಚಾನನಂ ' ) ಮಾತ್ರವಲ್ಲ, ಅಜಿತಪುರಾಣದಲ್ಲಿಯೂ ( I. ೪೪ )

ಕಳಕುಳಮಾಗೆ ಪಂಚಲನ ಬಲ್ಪಡೆ ಪಂಚಲನಶ್ವಸಂಕುಲಂ
ಕಳಕುಳಮಾಗೆ ಪಂಚಲನ ದಂತಿಘಟಾವಳಿ ಯುದ್ಧರಂಗದೊಳ್ ।
ಕಳಕುಳಮಾಗೆ ಗಾತ್ರಕರ ದಂತಿ ವಿಘಾತದೊಳುಗ್ರದಂತಿ ಮ
ಕ್ಕಳಕರುವಾಗರಂ ಪರಿದುದ್ಭಟನಿಂ ಸುಭಟತ್ರಿಣೇತ್ರನಿಂ ॥

ಎಂದು ಹೇಳಿರುವುದರಿಂದ, ಅದೂ ಕ್ರಿ. ಶ. 993 ರ ಮುಂಚೆ ಆಗಿಹೋಗಿರಬೇಕು. ತೈಲಪನು ಸದೆದ ಮುಂಜರಾಜನೆಂಬವನು ವಾಕ್ಪತಿರಾಜನೆಂದೂ ಅಮೋಘ ವರ್ಷನೆಂದೂ ಪಟ್ಟನಾಮಗಳಿದ್ದ ಮಾಲವದೇಶದ ಅರಸನಾದ ಪರಮಾರ ವಂಶದ ಮುಂಜರಾಜನು. ಸೇಉಣದೇಶದ ಯಾದವ ವಂಶೀಯ ಮಹಾಸಾಮಂತ II ಭಿಲ್ಲಮನ ಶಾ. ಶ. ೯೨೨ ಶಾರ್ವರಿ ಸಂ| ಭಾದ್ರಪದದ ಅಮಾವಾಸ್ಯೆ ಸೂರ್ಯ ಗ್ರಹಣ = ಕ್ರಿ. ಶ. 1001 ಸಪ್ಟಂಬರ 20 ಶನಿವಾರ ಸೂರ್ಯಗ್ರಹಣದಂದಿನ ಸಂಗಮನೇರದ ಶಾಸನದಿಂದ[೨] ತೈಲಪನ ಶತ್ರುವಾದ ಮುಂಜನನ್ನು ಕೊಂದಾತನು ಈ ಭಿಲ್ಲಮನೆಂದು ತಿಳಿಯುವುದರಿಂದ, ಈತನು ತೈಲಪನ ಒಳರಾಜನಾಗಿದ್ದು ತನ್ನ

೧. Indian Antiquary 1883, October; FKD, ಪು.426 , f. n. 3.

೨. FKD, ಪು. 430; 433; 514. ಡಾ। ಫ್ಲೀಟರು ( Dr. Fleet ) ಈ ಶಾಸನದ ತೇದಿಯನ್ನು ಕ್ರಿ. ಶ. 1000 ಆಗೋಸ್ತು 2 ನೆಯ ತಾರೀಕೋ 31 ನೆಯ ತಾರೀಕೋ ಎಂದು ತಪ್ಪಾಗಿ ಬಗೆದಿರುತ್ತಾರೆ ( FKD, ಪು. 514 ), ಆವೆರಡೂ ದಿನ ಗ್ರಹಣವಿದ್ದಿಲ್ಲ.

ಅಧಿರಾಜನಾದ ಆತನ ಶತ್ರುವನ್ನು ತಾನು ಯುದ್ಧದಲ್ಲಿ ಕೊಂದಿರಬೇಕು. ಅಮಿತ ಗತಿಯ ಸುಭಾಷಿತರತ್ನಸಂದೋಹ ಎಂಬ ಸಂಸ್ಕೃತ ಕಾವ್ಯದ ಕೊನೆಯ—

ಸಮಾರೂಢೇ ಪೂತತ್ರಿದಶವಸತಿಂ ವಿಕ್ರಮನೃಪೇ
ಸಹಸ್ರೇ ವರ್ಷಾಣಾಂ ಪ್ರಭವತಿ ಹಿ ಪಂಚಾಶದಧಿಕೇ ।
ಸಮಾಪ್ತೇ ಪಂಚಮ್ಯಾಮವತಿಧರಣೀಂ ಮುಂಜ ನೃಪತೌ
ಸಿತೇ ಪಕ್ಷೇ ಪೌಷೇ ಬುಧಹಿತಮಿದಂ ಶಾಸ್ತ್ರಮನಘಮ್ ॥ ೯೨೨ ॥

ಎಂಬ ಶಿಖರಣಿಯಿಂದ ವಿಕ್ರಮ ಸಂವತ್ ೧೦೫೦ ಸಮಾಪ್ತವಾದ, ಅಂದರೆ ಸಂ| ೧೦೫೧ ರ, ಪುಷ್ಯ ಶುಕ್ಲ ಪಂಚಮಿ = ಕ್ರಿ. ಶ. 994 ದಶಂಬರ 10 ನೆಯ ತಾರೀಕಿನಂದು ಆ ಗ್ರಂಥವು ಬರೆದು ಮುಗಿವಂದು ಇನ್ನೂ ಆಳುತ್ತಿದ್ದನೆಂದು ತಿಳಿವ ಮುಂಜನು ಅಜಿತಪುರಾಣವು ರಚಿತವಾದ ಕ್ರಿ. ಶ. 993 ರಿಂದ ಒಂದು ವರ್ಷದ ಮೇಲೂ ಆಳುತ್ತಲಿರಬೇಕು. ಅತಏವ ವಾಸ್ತವಿಕವಾಗಿ ಅಜಿತಪುರಾಣದಲ್ಲಿ ಹೇಳಲ್ಪಡಲಾರದ ಆ ಮಾಳವಾಧೀಶನ ಪರಾಜಯವನ್ನು ಕುರಿತು ತೈಲಪನಿಗೆ ಹೊಂದಿಕೆಯಾಗಿ 'ಸಮಸ್ತಮಾಳವ ಸಪ್ತಾರ್ಚಿ ಶತ್ರುಗ್ರಹೋಚ್ಚಾಟನನುಂ'[೧] (ಗದಾ II. ೭ ಗದ್ಯ) ಎಂದಿರುವ ಗದಾಯುದ್ಧವು ಕಂಡಿತವಾಗಿಯೂ ಕ್ರಿ. ಶ. 995 ರಿಂದ ಈಚೆಯೇ ರಚಿತವಾಗಿರಬೇಕಲ್ಲದೆ ಸರ್ವಥಾ ಆ ಮುಂಚೆಯಲ್ಲ.

೪. ಸಾಹಸಭೀಮವಿಜಯವೆಂಬ ಗದಾಯುದ್ಧದ ಕಥಾನಾಯಕನಾದ ಸಾಹಸಭೀಮನೆಂದರೆ ಸತ್ಯಾಶ್ರಯನೇ (ಗದಾ I. ೩೧; ೩೨) ಸರಿಯಷ್ಟೇ. ಅದರ ಪ್ರತ್ಯಾಶ್ವಾಸದ ಕೊನೆಯ 'ಇದು ಸಮಸ್ತಭುವನವಲ್ಲಭ ಜನಾಶ್ರಯಂ ಶ್ರೀ ಪೃಥ್ವೀವಲ್ಲಭಂ ಮಹಾರಾಜಾಧಿರಾಜ ಪರಮೇಶ್ವರಂ ಪರಮಭಟ್ಟಾರಕಂ ಶ್ರೀ ಸತ್ಯಾಶ್ರಯ ಕುಲತಿಲಕಂ ಶ್ರೀಮದಾಹವಮಲ್ಲದೇವ ಶ್ರೀಪಾದಪಾಶ್ರಯಾಸನ್ನವರ್ತಿ ಕವಿಚಕ್ರವರ್ತಿ ಕವಿರನ್ನ ವಿರಚಿತಮಪ್ಪ ಚಾಳುಕ್ಯ ಚಕ್ರವರ್ತಿ ಶ್ರೀ ಸಾಹಸಭೀಮ ವಿಜಯ' ಎಂಬ ಗದ್ಯದಲ್ಲಿ ಸಾಹಸಭೀಮನೆಂಬ ಸತ್ಯಾಶ್ರಯನನ್ನು ಚಾಳುಕ್ಯ ಚಕ್ರವರ್ತಿ ಎಂದಿರುವಲ್ಲಿಯೂ ಅದರಲ್ಲಿ ಇತರತ್ರ

ಅರರೆ ಅಕಲಂಕ ಚರಿತಂ
ದೊರೆಯಾದುದೊ ಸಕಲ ಸತ್ಯಚಕ್ರೇಶ್ವರನಾ ॥ (I. ೧೩)
ಕೃತಿ ನೆಗಟ್ದ ಗದಾಯುದ್ಧಂ
ಕೃತಿಗೀಶ್ವರ ಚಕ್ರವರ್ತಿ ಸಾಹಸಭೀಮಂ ॥ (I. ೩೨)

ಎಂಬಲ್ಲಿಯೂ ಅವನನ್ನು ಚಕ್ರವರ್ತಿತ್ವದ ಬಿರುದುಗಳಿಂದ ಉಲ್ಲೇಖಿಸಿರುವುದರಿಂದ,

---

೧. ಮಾಳವವನ್ನು ಕುರಿತ ಪಡುವಣ ಚಾಳುಕ್ಯರ ಶಾಸನಗಳಲ್ಲಿ 'ಮಾಳವಮೇಳು' (ಉದಾ: EC, VII, ಶಿಕಾರಿಪುರ 125, ಬಂ. ೧೬) ಎಂದಿದೆ. ಆ ಕಾರಣವೇ ರನ್ನನಿಲ್ಲಿ 'ಸಮಸ್ತ ಮಾಳವ' ಎಂದೂ 'ಸಪ್ತಾರ್ಚಿ' ಎಂದೂ ಹೇಳಿರಬಹುದೇನೋ.

ಗದಾಯುದ್ಧದ ರಚನೆಗೆ ತಕ್ಕಷ್ಟು ಹಿಂದೆಯೇ ತೈಲಪನು ದಿವಂಗತನಾಗಿ ಸತ್ಯಾಶ್ರಯನು ಚಕ್ರವರ್ತಿಯಾಗಿರಬೇಕು. ಅರ್ಜುನನೊಡನೆ ಸಮೀಕೃತನಾದ ಸಾಮಂತ ಚೂಡಾಮಣಿ ಚಾಳುಕ್ಯ ಅರಿಕೇಸರಿಯ ಪಟ್ಟಾಭಿಷೇಕವನ್ನು ವರ್ಣಿಸುವ ಪಂಪ ಭಾರತವು ಆ ಅರಿಕೇಸರಿಯ ಆಳಿಕೆಯಲ್ಲಿ ಅವನ ಆಸ್ಥಾನದಲ್ಲಿ ರಚಿತವಾದಂತೆಯೇ ಭೀಮನೊಂದಿಗೆ ಸಮೀಕೃತನಾದ ಸತ್ಯಾಶ್ರಯನು ಚಾಳುಕ್ಯ ಚಕ್ರವರ್ತಿಯಾದ ಪಟ್ಟಾಭಿಷೇಕವನ್ನು ವರ್ಣಿಸಿರುವ ಗದಾಯುದ್ಧವು ಸ್ವಯಂ ಸತ್ಯಾಶ್ರಯನ ಆಳಿಕೆಯಲ್ಲಿ ಅವನ ಆಸ್ಥಾನದಲ್ಲಿ ತಾನೆ ರಚಿತವಾಗಿರಬೇಕು. ಅದಲ್ಲದೆ ಚಾಳುಕ್ಯ ತೈಲಪನ ಆಳಿಕೆಯ ಇದುವರೆಗೆ ದೊರಕಿರುವ ಅಷ್ಟೂ ಶಾಸನಗಳಲ್ಲಿ ಮಹಾರಾಜಾಧಿರಾಜೇತ್ಯಾದಿ ಚಕ್ರವರ್ತಿತ್ವದ ಬಿರುದುಗಳಿಂದ ಅವನನ್ನೇ ಉಲ್ಲೇಖಿಸಿದೆಯಲ್ಲದೆ ಅವನ್ನು ಅಥವಾ ಅವಲ್ಲಿ ಯಾವೊಂದನ್ನೂ ಸತ್ಯಾಶ್ರಯನಿಗೆ ಹೇಳಿರುವ ಆಗಣ ಒಂದೇ ಒಂದಾದರೂ ಶಾಸನವಿಲ್ಲದಕಾರಣ ತೈಲಪನ ಆಳಿಕೆಯಲ್ಲಿ ಸತ್ಯಾಶ್ರಯನು ಯುವರಾಜನಾಗಿದ್ದಿರಬಹುದೇ ವಿನಾ ಸರ್ವಥಾ ತಾನೂ ಚಕ್ರವರ್ತಿಯಾಗಿರಲಿಲ್ಲ; ಅತಏವ ಸತ್ಯಾಶ್ರಯನನ್ನು ಚಕ್ರವರ್ತಿ ಎಂದಿರುವ ಗದಾಯುದ್ಧವು ತೈಲಪನ ಅವಸಾನಾನಂತರ ಸತ್ಯಾಶ್ರಯನು ಚಕ್ರವರ್ತಿಯಾದ ಮೇಲೆ ತಾನೆ ರಚಿತವಾಗಿರಬೇಕಲ್ಲದೆ, ತೈಲಪನ ಆಳಿಕೆಯಲ್ಲಿ ಎಂದಿಗೂ ಅಲ್ಲ.

೫. ಉತ್ತರ ಕೊಂಕಣದ ಮಹಾಸಾಮಂತಾಧಿಪತಿಯೂ ಮಹಾಮಂಡಳೇಶ್ವರನೂ ಆಗಿದ್ದ (ಬಂ. ೪೩; ೪೬) ಶೀಲಾರ (ಶಿಲಾಹಾರ) ವಂಶದ ಅಪರಾಜಿತನ ಶಾ. ಶ. ೯೧೯ ಹೇಮಲಂಬ (ಹೇವಿಳಂಬಿ) ಸಂ| ಆಷಾಢ ಬಹುಳ ೪ ದಕ್ಷಿಣಾಯನ ಸಂಕ್ರಾಂತಿ= ಕ್ರಿ. ಶ. 997 ಜೂನ್ 25 ನೆಯ ತಾರೀಕಿನ ಭದಾನದ ತಾಮ್ರಪಟ್ಟದಲ್ಲಿ[೧] ಮೊತ್ತಮೊದಲಲ್ಲಿ (ಬಂ. ೩—೧೯) I ಗೋವಿಂದನಿಂದ ರಾಷ್ಟ್ರಕೂಟರ ಆದ್ಯಂತವೆಂಬಂತೆ ಪೀಳಿಗೆಯನ್ನು ವಿಸ್ತರಿಸಿ, ಆ ಮೇಲೆ ಅವರ ಕೊನೆಯ II ಕಕ್ಕನು ಪ್ರಚಂಡವಾದ ಸಮೀರಣದಿಂದ, ಅಂದರೆ ಬಿರುಗಾಳಿಯಿಂದ ಪ್ರದೀಪದಂತೆ ನಂದಿಹೋದನೆಂದು (ಬಂ. ೧೯—೨೦) ಹೇಳಿ, ಅಲ್ಲಿಂದ ಮುಂದೆ (ಬಂ ೨೧—೩೨) I ಕಪರ್ದಿಯಿಂದ ಆ ಶಾಸನಕಾರಿಯಾದ ಅಪರಾಜಿತನ ವರೆಗೆ ಶಿಲಾಹಾರರ ವಂಶಾವಳಿಯನ್ನು ಕೊಟ್ಟಿದೆ. ಈ ತಾಮ್ರಪಟ್ಟದ ತೇದಿಗೆ ೨೪ ವರ್ಷಗಳ ಹಿಂದೆ ಕ್ರಿ. ಶ. 973 ರಲ್ಲಿಯೇ ಪಡುವಣ ಚಾಳುಕ್ಯ ತೈಲಪನಿಂದ ರಾಷ್ಟ್ರಕೂಟರು ವಿಧ್ವಸ್ತರಾಗಿ ಅವರ ರಟ್ಟರಾಜ್ಯಕ್ಕೆ ಒಡೆಯನಾದ ಆ ತೈಲಪನು ಅಷ್ಟೂ ವರ್ಷ ಕರ್ಣಾಟಕದ ಸಮ್ರಾಜನಾಗಿದ್ದರೂ ಇದರಲ್ಲಿ ಆತನ ಪೀಳಿಗೆಯನ್ನೂ ಹೇಳದ, ತಾನಾತನ ಪದೋಪಜೀವಿಯೂ ಎನ್ನದ, ಕೊನೆಗೆ ಆತನ ಹೆಸರನ್ನಾದರೂ ಎತ್ತಿರದ, ಅಪರಾಜಿತನು

---

೧. EI, III. ಪು. 267—276.

ಆತನ ಮಂಡಳೇಶ್ವರನಲ್ಲ ಎಂಬಲ್ಲಿ ರವಷ್ಟೂ ಸಂಶಯವಿಲ್ಲ. ಅಥವಾ ಅಪರಾಜಿತನು ಆತನ ಉಪರಾಜನಾಗಿದ್ದಲ್ಲಿ, ಈ ತಾಮ್ರಪಟ್ಟದಲ್ಲಿ ತೈಲಪನ ಪೀಳಿಗೆಯನ್ನು ಕೊಟ್ಟಿಲ್ಲವೇಕೆ? ಬೇಡ, ಸೊಗಲದ ಶಾಸನದಲ್ಲಿ ಹೇಳಿರುವ ಮೇರೆಗೆ ಆತನ ಹೆಸರನ್ನಾದರೂ ಹೇಳಿಲ್ಲವೇಕೆ? ಅಪರಾಜಿತನು ಆತನ ಪಾದಪದ್ಮೋಪಜೀವಿ ಎಂದಿಲ್ಲವೇಕೆ? ಪ್ರತ್ಯುತ ಅಂದಿಗೆ ೨೪ ವರ್ಷಗಳ ಹಿಂದೆ ಅಳಿದುಹೋದ, ಅತಏವ ಆಗ್ಗೆ ಕೆಲವರಿಗೆ ನಾಮಶೇಷರಾದ, ಹಲವರಿಗೆ ತೀರ ಮರೆತುಹೋದ, ಮಿಕ್ಕವರಿಗೆ ಗೊತ್ತಿಲ್ಲದ ಆ ರಾಷ್ಟ್ರಕೂಟರ ವಂಶಾವಳಿಯನ್ನು ಅಲ್ಲಿ ಕೊಟ್ಟದೇಕೆ? ಅದನ್ನು ಕೊಡತಕ್ಕ ಆವಶ್ಯಕತೆಯಾದರೂ ಏನದೆ? ಇದರಿಂದಲೇ ಆ ರಾಷ್ಟ್ರಕೂಟರು ಅಳಿದು ಹೋದ ಮೇಲೂ ಅವರಲ್ಲಿ ಅಷ್ಟರ ಭಕ್ತಿಯಿದ್ದ, ಆ ಕಾರಣ ಇನ್ನೂ ಅವರನ್ನೇ ಮನಸಾಪಿ ಅಧಿರಾಜರೆಂದು ಭಾವಿಸುತ್ತಿದ್ದನೆನಿಸುವ ಅಪರಾಜಿತನು ಈ ಶಾಸನಕಾಲದ ವರೆಗೂ ತೈಲಪನ ವಿಪಕ್ಷನೇ ವಿನಾ ಉಪರಾಜನಾಗಿರಲಿಲ್ಲ, ತೈಲಪನನ್ನು ಅಧಿರಾಜನೆಂದು ಒಪ್ಪಿರಲಿಲ್ಲ, ಅತಏವ ಆ ವರೆಗೆ ತೈಲಪನು ಅವನನ್ನು ಗೆದ್ದಿರಲಿಲ್ಲ, ತನ್ನ ಅಧೀನ ಮಾಡಿಕೊಂಡಿರಲಿಲ್ಲ ಎಂದು ಸ್ವಯಂ ವ್ಯಕ್ತವಾಗುತ್ತದೆ. ಆದಕಾರಣ ರಾಷ್ಟ್ರಕೂಟ II ಕಕ್ಕನನ್ನು ತೈಲಪನು ಕಿತ್ತೊಗೆದುದನ್ನು ಕುರಿತು ಭದಾನದ ತಾಮ್ರಪಟ್ಟದಲ್ಲಿರುವ ಮಿಡುಕಿನ ಮಾತಿನಿಂದ ( ಅಂದರೆ ಪಂ. ೧೯ – ೨೦ ) ಅಪರಾಜಿತನು ತೈಲಪನ ಅಧಿಕಾರವನ್ನು ಒಪ್ಪಿದ್ದನೆಂದು ಸ್ಪಷ್ಟವಿದೆ ಎಂಬ ಡಾ| ಫ್ಲೀಟರ ( Dr. Fleet ) ಅಭಿಪ್ರಾಯವನ್ನು[೧] ಎಂದಿಗೂ ಒಪ್ಪಲಾಗುವುದಿಲ್ಲ.

ದಕ್ಷಿಣ ಕೊಂಕಣದ ಮಂಡಲಿಕನಾದ ಅದೇ ಶಿಲಾಹಾರ ವಂಶದ ರಟ್ಟರಾಜನ ಶಾ. ಶ. ೯೩೦ ಕೀಲಕ ಸಂ| = ಕ್ರಿ. ಶ. 1008 ರ, ಅಂದರೆ ರಾಷ್ಟ್ರಕೂಟರ ವಿಧ್ವಂಸವಾದ ೩೫ ವರ್ಷಗಳ ಬಳಿಕ ಚಾಳುಕ್ಯ ತೈಲಪನ ಮಗನಾದ ಸತ್ಯಾಶ್ರಯನ ಆಳಿಕೆಯಲ್ಲಿ ಹುಟ್ಟಿದ, ಖಾರೇಪಾಟಣದ ತಾಮ್ರಪಟ್ಟದಲ್ಲಿಯೂ[೨] ಹೀಗೆಯೇ ರಾಷ್ಟ್ರಕೂಟರ ವಂಶಾವಳಿಯನ್ನು ಹೇಳಿದೆಯಾದರೂ ಅದರ ಬಳಿಯಲ್ಲಿಯೇ ಆ ರಾಷ್ಟ್ರಕೂಟರನ್ನು ಕೆಡವಿ ಚಾಳುಕ್ಯ ತೈಲಪನು ಅವರ ರಾಜ್ಯಕ್ಕೆ ಒಡೆಯನಾದನೆಂದು ಮಾತ್ರವಲ್ಲ, ಆ ಶಾಸನಕಾರಿಯಾದ ಶಿಲಾಹಾರ ರಟ್ಟರಾಜನು ಚಾಳುಕ್ಯ ತೈಲಪನ ಹಾಗೂ ಅವನ ಮಗನಾದ ಸತ್ಯಾಶ್ರಯನ ಕೆಳಗೆ ಮಂಡಳಿಕನಾಗಿದ್ದನೆಂದೂ ಹೇಳಿರುವುದರಿಂದ, ಇದರ ಕಥೆಯೇ ಬೇರೆ. ರಾಷ್ಟ್ರಕೂಟರ ವಂಶಾವಳಿಯನ್ನೂ ಹೇಳಿ, ಅವರ ಕೊನೆಯ ಅರಸನನ್ನು ಚಾಳುಕ್ಯ ತೈಲಪನು ಗೆದ್ದುದನ್ನೂ ಹೇಳಿ, ತಾನು ಆ ತೈಲಪನ ಮತ್ತು ಅವನ ಮಗನಾದ ಸತ್ಯಾಶ್ರಯನ ಮಂಡಳಿಕನೆಂಬ ರಟ್ಟರಾಜನ ಖಾರೇ

೧. FKD, ಪು. 430.

೨. EI, III, ಪು. 292; FKD, ಪು. 433, 537–38.

ಪಾಟಣದ ಶಾಸನವೆಲ್ಲಿ ? ಅದರಂತೆ ಪೊತ್ತಮೊದಲಲ್ಲಿ ರಾಷ್ಟ್ರಕೂಟರ ವಂಶಾವಳಿಯನ್ನು ಹೇಳಿ ಅವರ ಕೊನೆಯ ಅರಸನನ್ನು ತೈಲಪನು ಗೆದ್ದುದನ್ನು ಹೇಳಿದರೂ ಆ ಮೇಲೆ ತಾನು ಮಂಡಳಿಕನೆಂದಿಲ್ಲದ, ಹಾಗೂ ತನ್ನನ್ನು 'ಶ್ರೀಮತ್ ಕಕ್ಕಲದೇವ ಸಂಜಾತವ್ಯಪಾಯನಷ್ಟಭ್ರಷ್ಟ ರಟ್ಟರಾಜ್ಯೇ ಸ್ವತೇಜೋನುಭಾವಾತ್ ಸಮಧಿಗತ ಪಂಚಮಹಾಶಬ್ದ ಮಹಾಸಾಮಂತಾಧಿಪತಿ.................. ಸಮಸ್ತ ರಾಜಾವಲೀ ಸಮಲಂಕೃತ ಮಹಾಮಂಡಲೇಶ್ವರ' ಎಂದಿರುವ ( ಬಂ. ೪೨-೪೩, ೪೬ ) ಅಪರಾಜಿತನ ಭದಾನದ ತಾಮ್ರಪಟ್ಟವೆಲ್ಲಿ ? ಖಾರೇಪಾಟಣದ ಶಾಸನದಿಂದ ರಟ್ಟರಾಜನು ತೈಲಪನ ಮತ್ತು ಸತ್ಯಾಶ್ರಯನ ಉಪರಾಜನೆಂಬುದು ಎಷ್ಟು ನಿಶ್ಚಯವೊ. ಭದಾನದ ಶಾಸನದಿಂದ ಅಪರಾಜಿತನು ಸರ್ವಥಾ ತೈಲಪನ ಉಪರಾಜನಾಗಿರಲಿಲ್ಲ, ಅತಏವ ತೈಲಪನು ಆತನನ್ನು ಗೆದ್ದಿರಲಿಲ್ಲ ಎಂಬುದೂ ಅಷ್ಟೇ ನಿಶ್ಚಯ.

ಭದಾನದ ತಾಮ್ರಪಟ್ಟದಲ್ಲಿ ಅಪರಾಜಿತನನ್ನು ಮಹಾಸಾಮಂತಾಧಿಪತಿ ಹಾಗೂ ಮಹಾಮಂಡಳೇಶ್ವರ ಎಂದಿರುವುದರಿಂದ ಆತನು ಉಪರಾಜನಾಗಿರಬೇಕೆಂದಿಲ್ಲ. ಅವು ಮೂಲತಃ ಉಪರಾಜತ್ವದ ಸಂಜ್ಞೆಗಳಾದರೂ ರಾಷ್ಟ್ರಕೂಟರ ಮಹಾಮಂಡಳೇಶ್ವರನಾಗಿದ್ದ ಈತನು ತನ್ನಂತೆಯೇ ಆ ರಾಷ್ಟ್ರಕೂಟರ ಮಹಾಮಂಡಳೇಶ್ವರರಾದ ತಲಕಾಡಿನ ಗಂಗರಸರು ರಾಷ್ಟ್ರಕೂಟರ ಪತನಾನಂತರ ಚಾಳುಕ್ಯ ತೈಲಪನ ಉಪರಾಜರಾಗಿರದೆ ಸ್ವತಂತ್ರರಾಗಿದ್ದಂದೂ ತಮ್ಮನ್ನು ಹಿಂದಿನಂತೆಯೇ ಮಹಾಮಂಡಳೇಶ್ವರರೆಂದಂತೆ, ತಾನೂ ತೈಲಪನ ಅಧಿಕಾರವನ್ನು ಒಪ್ಪದೆ ಸ್ವತಂತ್ರನಾಗಿದ್ದಂದೂ ತನ್ನ ಹಿಂದಣ ಬಿರುದುಗಳನ್ನು ಮಾರ್ಪಡಿಸದೆ ಅವನ್ನೇ ತಾಳಿರಬೇಕೆಂದಲ್ಲದೆ, ಅವುಗಳಿಂದ ಅಪರಾಜಿತನು ತೈಲಪನ ಉಪರಾಜನಾಗಿದ್ದನೆಂದು ಎಂದಿಗೂ ಸಿದ್ಧವಾಗದು.

ಅಪರಾಜಿತನ ಭದಾನದ ತಾಮ್ರಪಟ್ಟದ ತೇದಿ ಮೇಲೆ ಕಂಡಿರುವಂತೆ ಕ್ರಿ. ಶ. 997 ಜೂನ್ 25. ತೈಲಪನ ಆಳಿಕೆಯಲ್ಲಿ ಈಗ ದೊರೆತಷ್ಟರ ಮಟ್ಟಿಗೆ ಪ್ರಾಯಶಃ ಇದೇ ಕೊನೆಯ ತೇದಿ ಎಂದು ತೋರುತ್ತದೆ. ಹೇಗೂ ಕ್ರಿ. ಶ. 997ರಲ್ಲೇ ಅವನ ಮಗನಾದ ಸತ್ಯಾಶ್ರಯನು ಪಟ್ಟಕ್ಕೆ ಬಂದುದರಿಂದ[೧] ಭದಾನದ ತಾಮ್ರಪಟ್ಟದ ತೇದಿಯಿಂದ ಕೆಲವೇ ತಿಂಗಳಲ್ಲಿ ತೈಲಪನು ಗತಿಸಿರಬೇಕು. ಆದಕಾರಣ ಆ ತಾಮ್ರಪಟ್ಟದ ತೇದಿಯ ವರೆಗೆ ತೈಲಪನ ಉಪರಾಜನಾಗಿದ್ದಿಲ್ಲದ ಅಪರಾಜಿತನು ತೈಲಪನ ಅವಸಾನದ ವರೆಗೂ ಅವನ ಉಪರಾಜನಾಗಿರಲಿಲ್ಲ, ತೈಲಪನು ತನ್ನ ಅವಸಾನದ ವರೆಗೂ ಆತನನ್ನು ಗೆದ್ದಿರಲಿಲ್ಲ ಮಾತ್ರವಲ್ಲ, ಅವರೊಳಗೆ ಯುದ್ಧ

೧. FKD. ಪು. 432; Historical Inscriptions of Southern India (HISI), ಪು. 55.

ಗಳಾಗಿದ್ದು ಅವಲ್ಲಿ ತೈಲಪನು ಗೆದ್ದಿದ್ದರೆ ಅಪರಾಜಿತನು ತೈಲಪನ ಉಪರಾಜನಾಗಿರ ಬೇಕಿತ್ತು, ಅಥವಾ ಅಪರಾಜಿತನು ತನ್ನ ಮೇಲೆ ದಂಡೆತ್ತಿ ಬಂದ ತೈಲಪನನ್ನು ಸೋಲಿಸಿ ಹಿಂದಟ್ಟಿದ್ದರೆ ಆತನು ಆ ಕುರಿತು ತನ್ನ ಈ ತಾಮ್ರಪಟ್ಟದಲ್ಲಿ ಹೇಳದೆ ಇರುತ್ತಿದ್ದಿಲ್ಲ, ಆದರೆ ಹಾಗೂ ಇಲ್ಲ ಹೀಗೂ ಇಲ್ಲದ ಕಾರಣ ತೈಲಪನ ಆಳಿಕೆಯಲ್ಲಿ ಅವರೊಳಗೆ ಪ್ರಾಯಶಃ ಯುದ್ಧವಾಗಿಲ್ಲವೆಂದೇ ತೋರುತ್ತದೆ. ಮೇಲೆ ಕಂಡಿರುವ ಗದುಗಿನ ಶಾಸನದಲ್ಲಿಯೂ ತೈಲಪನು ಅಪರಾಜಿತನನ್ನು ಗೆದ್ದ ಮಾತಿಲ್ಲ.

ಆದರೆ ರನ್ನನ ಗದಾಯುದ್ಧದಲ್ಲಿ (II. ೭ ಗದ್ಯ) ತೈಲಪನನ್ನು 'ಕೊಂಕಣ ಭಯಂಕರ'ನೆಂದಡೆ, ಅದರಲ್ಲಿಯೇ ಆ ಮೇಲೆ (II. ೪೭)

ನರಪತಿ ತೈಲಪಂ ಬೆಸಸೆ ಘೂರ್ಜರಸೇನೆಗೆ ಸೂಚಿಯಾನೆಯಂ
ಪರಿಯಿಸಿ ಗೆಲ್ದನೊಟ್ಟಜೆಯ ಕಪ್ಪಮನಟ್ಟುವುದೆಂದು ಕೊಂಕಣೇ।
ಶ್ವರನನಿದಿರ್ಚಿ ಸಾಧಿಸಿದನಂಬುಧಿಸೀಮೆವರಂ ನಿಮಿರ್ಚಿದಂ
ಧರೆಯನದೇಕೆ ಕೇಳ್ದಱಿಯ ಸಾಹಸಭೀಮನ ಸಾಹಸಂಗಳಂ॥

ಎಂದೂ ಇದೆಯಷ್ಟೇ. ಇದೇನು ಸುಳ್ಳೇ? ಎಂದು ಕೇಳಬಹುದು 'ಕೊಂಕಣ ಭಯಂಕರ' ಎಂಬಲ್ಲಿಯ ಕೊಂಕಣವು ಅಪರಾಜಿತನ ಉತ್ತರ ಕೊಂಕಣವೇ ಆಗ ಬೇಕೆಂದಿಲ್ಲ, ದಕ್ಷಿಣ ಕೊಂಕಣವೇಕೆ ಆಗಬಾರದು? ಹಾಗಾದರೆ ಸತ್ಯಾಶ್ರಯನ ಆಳಿಕೆಯ ಮೇಲೆ ಕಂಡಿರುವ ಕ್ರಿ. ಶ. 1008 ರ ಖಾರೇಪಾಟಣದ ಶಾಸನದಿಂದ ಸತ್ಯಾಶ್ರಯನ ಮಾತ್ರವಲ್ಲ, ಅದಕ್ಕೆ ಮುಂಚೆ ತೈಲಪನ ಮಂಡಲಿಕನೂ ಆಗಿದ್ದ ನೆಂದು ತಿಳಿವ ದಕ್ಷಿಣ ಕೊಂಕಣದ ಅರಸನಾದ ರಟ್ಟರಾಜನನ್ನು ಗೆದ್ದೇಕೆ ತೈಲಪನು ಕೊಂಕಣಭಯಂಕರನೆನಿಸಿಕೊಂಡಿರಬಾರದು? ಕ್ರಿ. ಶ. 978 ರ ಸೊಗಲದ ಶಾಸನ ದಲ್ಲಿ[೧] (ಬಂ. ೩೪) ಚಾಳುಕ್ಯ ತೈಲಪನನ್ನು 'ಲಾಳೇಭ ಪಂಚಾನನ' ಎಂದಿರುವುದ ರಿಂದ, ಅವನು ಅಷ್ಟರೊಳಗೆ ಲಾಳ ಅಥವಾ ಲಾಟವೂ ಎಂಬ ದಕ್ಷಿಣ ಗುಜರಾತದ ಅರಸನನ್ನು ಗೆದ್ದಿರಬೇಕಾದರೂ 'ನರಪತಿ ತೈಲಪಂ ಬೆಸಸೆ' ಎಂಬ ರನ್ನನ ಹೇಳಿಕೆ ಯಿಂದ ಆ ಘೂರ್ಜರರಾಜನನ್ನು (ಗದಾ I. ೧೬) ಸ್ವಯಂ ತೈಲಪನಲ್ಲ, ತೈಲಪನ ಅಪ್ಪಣೆಯ ಮೇರೆಗೆ ಸತ್ಯಾಶ್ರಯನು ಸೋಲಿಸಿದನೆಂದು ತಿಳಿಯುತ್ತದೆ. ಹೀಗೆ ಗದಾಯುದ್ಧದಲ್ಲಿ ತೈಲಪನ ಆಳಿಕೆಯಲ್ಲಿ ಸತ್ಯಾಶ್ರಯನು ಗೆದ್ದನೆಂದಿರುವ ಘೂರ್ಜರ ಎಂಬ ಗುಜರಾತವಾದರೊ ಸೊಗಲದ ಶಾಸನದಿಂದ ಲಾಳ ಎಂಬ ದಕ್ಷಿಣ ಗುಜರಾತ ವೆಂದು ತಿಳಿಯುವುದರಿಂದ, ಗುಜರಾತದ ಯಾವ ಭಾಗವನ್ನಾದರೂ ಗೆದ್ದಿಲ್ಲವೆಂದು ಡಾ| ಫ್ಲೀಟರು (Dr. Fleet) ಹೇಳಿರುವುದನ್ನು[೨] ಒಪ್ಪಲಾಗುವುದಿಲ್ಲ.

೧ EI, XVI, ಪು 4.
೨. FKD, ಪು. 430.

'ನರಪತಿ ತೈಲಪಂ ಬೆಸಸೆ' ಎಂಬುದು ಸತ್ಯಾಶ್ರಯನು ಎಸಗಿದ ಘೂರ್ಜರ ಪರಾಜಯಕ್ಕೆ ಮಾತ್ರ ಹೊಂದುತ್ತದೊ ಅಥವಾ ಆ ಬಳಿಕ ಅದೇ ಪದ್ಯದಲ್ಲಿ ಆತ ನಿಂದಲೇ ಆದುದೆಂದಿರುವ ಕೊಂಕಣೇಶ್ವರನ ಪರಾಜಯಕ್ಕೂ ಅನ್ವಯಿಸುತ್ತದೊ ಎಂದು ಕಂಡಿತವಾಗಿ ಹೇಳಲಳವಲ್ಲ. ಅದು ಕೊಂಕಣೇಶ್ವರನ ಪರಾಜಯಕ್ಕೂ ಅನ್ವಯಿಸುತ್ತದಾದರೆ, ಗದಾಯುದ್ಧದಲ್ಲಿ ( I. ೨೨ – ೨೮ ) ಅಪರಾದಿತ್ಯನ ಹೆಸರು ಬಂದಲ್ಲಿ ಎಲ್ಲಿಯೂ ಕೊಂಕಣದ ಹೆಸರು ಇಲ್ಲದುದರಿಂದ, 'ನರಪತಿ ತೈಲಪಂ ಬೆಸಸೆ' ಎಂಬ ಈ ಚಂಪಕಮಾಲೆಯಲ್ಲಿ ರನ್ನನೆಂದಿರುವ ಕೊಂಕಣೇಶ್ವರನು ಉತ್ತರ ಕೊಂಕಣದ ಅಪರಾಜಿತ = ಅಪರಾದಿತ್ಯನಲ್ಲ, ದಕ್ಷಿಣ ಕೊಂಕಣದ ರಟ್ಟರಾಜನಾಗಿರಬೇಕು.

ಗದಾಯುದ್ಧದ ಪ್ರಥಮಾಶ್ವಾಸದ ೨೨ – ೨೮ ನೆಯ ಪದ್ಯಗಳಲ್ಲಿ ಹೇಳಿರುವ ಅಪರಾದಿತ್ಯನೂ ಭದಾನದ ತಾಮ್ರಪಟ್ಟದ ಉತ್ತರ ಕೊಂಕಣದ ಅಪರಾಜಿತನೇ ಎಂಬಲ್ಲಿ ಸಂಶಯವಿಲ್ಲ. ಸತ್ಯಾಶ್ರಯನಿಂದ ಬೆಂದುದೆಂಬ ಅಪರಾದಿತ್ಯನ ಅಂಶು ನಗರವೂ (ಗದಾ. I. ೨೫ ) ಅಪರಾಜಿತನ ಮಗನಾದ ಅರಿಕೇಸರಿಯೂ ಎಂಬ ಕೇಶಿ ದೇವನ ಕ್ರಿ. ಶ. 1017 ನೆಯ ಠಾಣಾ ತಾಮ್ರಪಟ್ಟದಲ್ಲಿ ಹೇಳಿರುವ ಹಮ್ಯಮನ ಅಥವಾ ಹಂಜಮನವೂ[೧] ಅಪರಾಜಿತನ ಮೊಮ್ಮಗನಾದ ಛಿತ್ತರಾಜನ ಕ್ರಿ. ಶ. 1026 ನೆಯ ಭಾಂಡೂಪದ ತಾಮ್ರಪಟ್ಟದಲ್ಲಿ[೨] ಹೇಳಿರುವ ಹಂಷಮನವೂ '— '........ ಶಿಲಾಹಾರ ನರೇಂದ್ರ............ ಮಹಾಮಂಡಲೇಶ್ವರ ಶ್ರೀಮಚ್ಛಿತ್ತರಾಜ ದೇವೇ............ಸಮಗ್ರ ಕೊಂಕಣಭುವಂ ಸಮನುಶಾಸತಿ............ ಮಹಾಮಂಡ ಲೇಶ್ವರ ಶ್ರೀಮಚ್ಛಿತ್ತರಾಜದೇವಃ................ ಹಂಷಮನನಗರ ಪೌರತ್ರಿವರ್ಗ ಪ್ರಭೃತೀಂಶ್ಚ............ಸಂದಿಶತಿ'—ಒಂದೇ. ಇದು ಮುಂಬಯಿ ಸಂಸ್ಥಾನದಲ್ಲಿಯ ಠಾಣಾ ( Thana ) ಜಿಲ್ಲೆಯಲ್ಲಿ ಪಡುಕರಾವಳಿಯಲ್ಲಿರುವ ಸಂಜನ ( Sanjan ) ಎಂಬ ಚಿಕ್ಕ ಊರು. ಸತ್ಯಾಶ್ರಯನಿಗೂ ಅಪರಾದಿತ್ಯನೆಂಬ ಉತ್ತರ ಕೊಂಕಣದ ಅಪರಾಜಿತನಿಗೂ ಯುದ್ಧವಾಗಿದೆ ಮಾತ್ರವಲ್ಲ, ಅದರಲ್ಲಿ ಸತ್ಯಾಶ್ರಯನು ಅವನ ಅಂಶುನಗರವನ್ನು ಸುಟ್ಟನೆಂದೂ ಅವನ ರಾಜ್ಯವನ್ನು ಸರ್ವಗ್ರಾಸಗೊಂಡು (ಗದಾ. I. ೨೬ ) ಅವರೊಳಗೆ ಪ್ರಾಯಶಃ ಕೊನೆಗೆ ಒಪ್ಪಂದವಾಗಿಯೋ ಏನೋ ಅವನಿಂದ ೨೧ ಆನೆಗಳನ್ನು ಇಸುಕೊಂಡನೆಂದೂ ( ಗದಾ. I. ೨೮ ) ರನ್ನನ ಹೇಳಿಕೆಯಿಂದ ವಿದಿತವಾಗುತ್ತದೆ. ಆ ಸಂದರ್ಭದಲ್ಲಿ ರನ್ನನು 'ಸತ್ಯಾಶ್ರಯಂ ಸಾರ್ವಭೌಮಂ' ( ಗದಾ. I. ೨೮ ), ಸತ್ಯಾಶ್ರಯನು ಆಗ್ಗೆ ಸಾರ್ವಭೌಮನಾದ ಚಕ್ರವರ್ತಿಯಾಗಿದ್ದ ನೆಂದು ಹೇಳಿರುವುದರಿಂದ ಅವರೊಳಗಾದ ಯುದ್ಧವು ಸರ್ವಥಾ ತೈಲಪನ ಆಳಿಕೆ

---

೧ FKD, ಪು. 542.

೨ Indian Antiquary V, ಪು. 277 – 279.

ಯಲ್ಲಿ ಅಲ್ಲ, ಸತ್ಯಾಶ್ರಯನು ಸಾರ್ವಭೌಮನಾದ ಕ್ರಿ ಶ. 997 ರಿಂದ ಈಚೆ ತಾನೆ ಆಯಿತೆಂದು ಸ್ಪಷ್ಟವಿದೆ. ಆದಕಾರಣ ಆ ಯುದ್ಧವನ್ನು ಉಲ್ಲೇಖಿಸಿರುವ, ತಕ್ಕಷ್ಟು ವರ್ಣಿಸಿಯೂ ಇರುವ ಗದಾಯುದ್ಧವು ಕ್ರಿ. ಶ. 997 ರಿಂದ ಈಚೆಯಷ್ಟೇ ಅಲ್ಲ, ಸತ್ಯಾಶ್ರಯನಿಗೂ ಅಪರಾದಿತ್ಯನಿಗೂ ಆದ ಆ ಯುದ್ಧವು ತೀರಿದ ಮೇಲೆ ತಾನೆ ರಚಿತವಾಗಿರಬೇಕು.

೬. ಸತ್ಯಾಶ್ರಯನಿಗೂ ( ಕ್ರಿ. ಶ. 997 – 1009 ) ಅವನ ಸಮಸಾಮಯಿಕನಾದ ಮುಮ್ಮಡಿ ಚೋಳನೂ ನೂರ್ಮಡಿ ಚೋಳನೂ ಎಂಬ ಚೋಳರಾಜನಾದ ರಾಜಕೇಸರಿ I ರಾಜರಾಜನಿಗೂ ( ಕ್ರಿ. ಶ. 985 - 1012 ) ಆದ ಕಾದಾಟವನ್ನು ಕುರಿತು ಕ್ರಿ. ಶ. 1005 ರ ಚೋಳರ ಶಾಸನಗಳಲ್ಲಿ ಆ ಚೋಳರಾಜನ ಮಗನೂ ಉತ್ತರಾಧಿಕಾರಿಯೂ ಆದ ರಾಜೇಂದ್ರನೆಂಬವನು ೯ ಲಕ್ಷ ಸೈನ್ಯವನ್ನು ಒಡಗೂಡಿ ಬಂದು ಚಾಳುಕ್ಯರ ಒಡೆತನದಲ್ಲಿಯ ರಟ್ಟರಾಜ್ಯವನ್ನು ಆಕ್ರಮಿಸಿದನೆಂದೂ ಅದೇ ವರ್ಷದ ಹೊಟ್ಟೂರಿನ ಶಾಸನದಲ್ಲಿ ಸತ್ಯಾಶ್ರಯನ ಸಾಮ್ರಾಜ್ಯದಲ್ಲಿಯ ರಟ್ಟಪಾಡಿ ೭|| ಲಕ್ಷ ಸೀಮೆಯಲ್ಲಿ ಚೋಳರು ದಾಳಿ ಇಟ್ಟರೂ ಸತ್ಯಾಶ್ರಯನು ಅವರನ್ನು ಸೋಲಿಸಿ ಓಡಿಸಿದನೆಂದೂ ಆ ಬಳಿಕಣ ಶಾ. ಶ. ೯೨೮ ಪರಾಭವ ಸಂ| = ಕ್ರಿ. ಶ. 1006 ನೆಯ ಚೇಬ್ರೋಲು ಎಂಬಲ್ಲಿಯ ಶಾಸನದಲ್ಲಿಯೂ ಸತ್ಯಾಶ್ರಯನು ಚೋಳರನ್ನು ಸೋಲಿಸಿ ದಕ್ಷಿಣ ದೇಶದಲ್ಲಿರುವ ಅವರ ರಾಜ್ಯದಲ್ಲಿ ನುಗ್ಗಿ ಗೆಲುವಿಂದ ಮುನ್ನಡೆದನೆಂದೂ ಇದೆ.[೧] ಗದಾಯುದ್ಧದಲ್ಲಿ ಚೋಳ ಎಂಬ ಹೆಸರಿಲ್ಲದಿದ್ದರೂ ಸತ್ಯಾಶ್ರಯನೊಂದಿಗೆ ಕಾದಾಡಿ ಕೊನೆಗೆ ಹಿಮ್ಮೆಟ್ಟಿದ ಚೋಳ ರಾಜನ ರಾಜರಾಜ ಎಂಬ ಹೆಸರನ್ನು ದುರ್ಯೋಧನನಿಗೆ ಪ್ರಯೋಗಿಸಿದೆ—ಗದಾ. III. ೮೪ ಗದ್ಯ; IV. ೪೯ ಗದ್ಯ; V. ೩೯ ಗದ್ಯ, ೪೪ ಗದ್ಯ; IX. ೨೪ ಗದ್ಯ ಇ.— ಮಾತ್ರವಲ್ಲ, ಆದರಲ್ಲಿಯ

೧. ಬಲವತ್ತುಂಗ ಕಳಿಂಗರಾಜ ಮದವನ್ಮಾತಂಗ ಸಿಂಗಂ ( II. ೪೮ ),

೨. ಕರಿಯುಂ ನುಂಗಿ ಕಳಿಂಗನಂ ನೊಣೆದ ದರ್ಪಕ್ಕೊಂದುಗೊಳ್ ( VIII. ೧೮ )

ಎಂಬಲ್ಲಿ ಭೀಮನಿಂದ, ಅಂದರೆ ಭೀಮನಲ್ಲಿ ಹೋಲಿಸಲ್ಪಟ್ಟ ಸತ್ಯಾಶ್ರಯನಿಂದ ( ಗದಾ. I. ೩೧ ) ಸೋಲಿಸಲ್ಪಟ್ಟವನೆಂದು ಪ್ರತ್ಯಕ್ಷವಿರುವ ( ಹಾಗೂ ಆ ಸಂದರ್ಭದಲ್ಲಿ ವ್ಯಾಸಭಾರತದಲ್ಲಿ ಪ್ರಾಯಶಃ ಹೇಳಿಲ್ಲದ ) ಕಳಿಂಗನೆಂಬ ಕಳಿಂಗರಾಜನನ್ನು ನಾಮಗ್ರಾಹವಾಗಿ ಹೇಳದೆ ಅವನ ದೇಶನಾಮದಿಂದ ಉಲ್ಲೇಖಿಸಿರುವಲ್ಲಿ ಆ ಕಾಲದ ಶಾಸನಗಳಿಂದ ಸತ್ಯಾಶ್ರಯನಿಗೂ ಕಳಿಂಗದೇಶದ ಅರಸನಿಗೂ ಯುದ್ಧವಾಗಿದ್ದಂತೆ ತೋರದಾದರೂ ' ಶ್ರೀ ಕೋವಿ ರಾಜರಾಜ ರಾಜಕೇಸರಿ ಪನ್ಮಕ್ಕಿಯಾಂಡು

೧. FKD, ಪು. 433; HISI, ಪು. 57 – 58,

ಪತ್ತೊಂಬದಾವದು' ಅಂದರೆ ಚೋಳರಾಜನಾದ ರಾಜಕೇಸರಿ I ರಾಜರಾಜನ ಆಳಿಕೆಯ ೧೯ ವರ್ಷದ = ಕ್ರಿ. ಶ. 1003 ನೆಯ ಮುಳಬಾಗಲ 123 ನೆಯ ತಮಿಳು ಶಿಲಾಶಾಸನದಿಂದ[೧] ತಿಳಿವ ಮೇರೆಗೆ ಬೇರೆ ಕೆಲವು ದೇಶಗಳೊಂದಿಗೆ 'ಕಳಿಂಗಮುಂ ........ಗೊಂಡ' ಅಂದರೆ ಕಳಿಂಗವನ್ನೂ ಕೊಂಡನೆಂಬ ಆ I ರಾಜರಾಜನು ತಾನೇ ಹೋಗಿ ಕಳಿಂಗವನ್ನು ಗೆದ್ದುದಲ್ಲ, ಅವನ ಆಳಿಕೆಯ ಕ್ರಿ. ಶ 1000 ದಲ್ಲಿ ಅವನ ಮಗನಾದ ರಾಜೇಂದ್ರನು ಕಳಿಂಗದ ಮೇಲೆ ದಂಡೆತ್ತಿ ಹೋಗಿ ಗೆದ್ದನೆಂಬ ಕಾರಣ[೨] ನಿಜವಾದ ಕಳಿಂಗ ವಿಜಯಿಯಾದ ಆ ಚೋಳ ಯುವರಾಜನನ್ನೇ ಕಳಿಂಗ (ರಾಜ) ನೆಂದೂ ಅತಏವ ರಟ್ಟಪಾಡಿ ೭॥ ಲಕ್ಷ ಸೀಮೆಯಲ್ಲಿಯೂ ದಾಳಿ ಇಟ್ಟ ಅದೇ ರಾಜೇಂದ್ರನನ್ನು ಸೋಲಿಸಿ ಹಿಂದಟ್ಟಿದ ಸತ್ಯಾಶ್ರಯನನ್ನು[೨] 'ಕಳಿಂಗರಾಜ ಮದವನ್ಮಾತಂಗಸಿಂಗ'ನೆಂದೂ ಗದಾಯುದ್ಧದಲ್ಲಿ ಕೀರ್ತಿಸಿರಬೇಕೆಂದು ಸಾಕಷ್ಟು ವ್ಯಕ್ತವಾಗುವುದರಿಂದ, ಕ್ರಿ. ಶ. 1005-1006 ರಲ್ಲಿ ಆದ ಚೋಳರ ಪರಾಭವವನ್ನು ಹೇಳಿರುವ ಗದಾಯುದ್ಧವು 1006 ರಿಂದ ಈಚೆ ರಚಿತವಾಗಿರಬೇಕು.

ಇಲ್ಲಿ ಇದೊಂದು ಮಾತನ್ನು ಹೇಳಬಹುದು. ಅದೇನೆಂದರೆ-- ಗದಾಯುದ್ಧದಲ್ಲಿ ಸತ್ಯಾಶ್ರಯನನ್ನು ಭೀಮನೆಂದಿರುವುದರಿಂದ ಆತನ ಪ್ರತಿಪಕ್ಷಿಯಾದ ಯಾವೊಬ್ಬ ಅರಸನೊ ಅಥವಾ ಅಂಥವರೆಲ್ಲರೊ ದುರ್ಯೋಧನನೆನಿಸಬಹುದಾದರೂ ಅವರು ಭೀಮನಿಂದ ಕುರುರಾಜನು ಹತನಾದಂತೆ ಸತ್ಯಾಶ್ರಯನಿಂದ ಹತರಾಗಿರಬೇಕೆಂದಿಲ್ಲ; ಏಕೆಂದರೆ ಈಗ ಬಲ್ಲಷ್ಟರ ಮಟ್ಟಿಗೆ ಅವನ ಎದುರಾಳಿಗಳಲ್ಲಿ ಪ್ರಮುಖರೆಂದು ಪ್ರತ್ಯಕ್ಷವಿರುವ ಚೋಳ I ರಾಜರಾಜ ಹಾಗೂ ಉತ್ತರ ಕೊಂಕಣದ ಅಪರಾದಿತ್ಯ ಎಂಬ ಇವರಲ್ಲಿ ಸತ್ಯಾಶ್ರಯನು (ಕ್ರಿ. ಶ 997-1009) ದಿವಂಗತನಾದ ಮೇಲೂ ೩ ವರ್ಷ ರಾಜ್ಯವಾಳಿದ I ರಾಜರಾಜನೂ ( ಕ್ರಿ. ಶ. 985-1012 ) ಸತ್ಯಾಶ್ರಯನಿಂದ ಹತನಾಗಲಿಲ್ಲ, ರನ್ನನೆಂದಿರುವ ಮೇರೆಗೆ ( ಗದಾ. I. ೨೭-೨೮ ) ಅಪರಾದಿತ್ಯನ ಅಂಶು ನಗರವನ್ನು ಸುಟ್ಟು ಪ್ರಾಯಶಃ ಅವನ ಇಡೀ ರಾಜ್ಯವನ್ನೇ ಸತ್ಯಾಶ್ರಯನು ಕಸಕೊಂಡರೂ ಅವನಿಂದ ೨೧ ಆನೆಗಳನ್ನು ಇಸಕೊಂಡು ಆ ಕದನವು ಮುಗಿಯಿತೆಂದು ಅಲ್ಲಿಯೇ ಹೇಳಿರುವುದರಿಂದ, ಅದರಲ್ಲಿ ಕಂಡಿತವಾಗಿಯೂ ಮಡಿದಿಲ್ಲದೆ ಆ ಮೇಲೂ ರಾಜ್ಯವಾಳುತ್ತಿರಬೇಕಾದ ಅಪರಾದಿತ್ಯನೂ ಸತ್ಯಾಶ್ರಯನಿಂದ ಹತನಾಗಲಿಲ್ಲ; ಹಾಗೆಯೇ ಗದಾಯುದ್ಧದಲ್ಲಿ ( VIII. ೧೮ ) ಭೀಮನನ್ನು 'ಕಳಿಂಗನಂ ನೋಣೆದ'ವನೆಂದದೆಯಾದರೂ ಕಳಿಂಗರಾಜನೆಂದು ಮೇಲೆ ಗೊತ್ತು ಹಚ್ಚಿರುವ ಚೋಳ ಯುವರಾಜನಾದ I ರಾಜೇಂದ್ರನಾದರೊ ಸತ್ಯಾಶ್ರಯನಿಂದ

---

೧. EC, X.

೨. HISI, ಪು. 56 - 58.

ಹತನಾಗಿರದೆ, ತನ್ನ ತಂದೆಯಾದ I ರಾಜರಾಜನು ಕ್ರಿ. ಶ. 1012 ರಲ್ಲಿ ರಾಜ್ಯ ಭಾರದಿಂದ ನಿವೃತ್ತನಾಗುತ್ತಲೆ[೧] ತಾನು ಪರಕೇಸರಿ I ರಾಜೇಂದ್ರ ಚೋಳನೆಂದು ಪಟ್ಟವೇರಿ ಬಹಳ ಪ್ರತಾಪಶಾಲಿಯಾಗಿ ಕ್ರಿ. ಶ. 1043 ರ ವರೆಗೆ ಆಳಿದನು.

೭. ಸತ್ಯಾಶ್ರಯನ ಚೋಳ ವಿಜಯವನ್ನು ಆ ಚೋಳರ ರಾಜರಾಜ ಹಾಗೂ ಕಳಿಂಗ ( ರಾಜ ) ಎಂಬ ಅಸ್ಫುಟವಾದ ಹೆಸರುಗಳಿಂದಷ್ಟೇ ವ್ಯಂಜಿಸಿರುವ ಗದಾಯುದ್ಧದಲ್ಲಿ ಆತನ ಉತ್ತರ ಕೊಂಕಣ ವಿಜಯವನ್ನು ಅಪರಾದಿತ್ಯನ ಹೆಸರೆತ್ತಿ ಸಾಕಷ್ಟು ವರ್ಣಿಸಿರುವುದರಿಂದಲೂ ( ಗದಾ. I. ೨೨ – ೨೮ ) ಸತ್ಯಾಶ್ರಯನಿಂದಾದ ಚೋಳರ ಪರಾಜಯವನ್ನು ಹೇಳಿರುವ ಕ್ರಿ. ಶ. 1006 ರ ಹೊಟ್ಟೂರಿನ ಹಾಗೂ ಚೇಬ್ರೋಲಿನ ಶಾಸನಗಳಲ್ಲಿ ಆತನಿಂದಾದ ಅಪರಾದಿತ್ಯನ ಪರಾಭವವನ್ನು ಕುರಿತು ಹೇಳಿಲ್ಲದುದರಿಂದಲೂ ಸತ್ಯಾಶ್ರಯನು ಚೋಳರನ್ನು ಸೋಲಿಸಿದ ಬಳಿಕ ತಾನೆ ಕೊಂಕಣವನ್ನು ಗೆದ್ದನೆಂದೂ ಅತಏವ ಅವನ ಉತ್ತರ ಕೊಂಕಣದ ವಿಜಯವು ಕ್ರಿ. ಶ. 1006 ರಿಂದ ಈಚೆ ಜರುಗಿರಬೇಕೆಂದು ಮಾತ್ರವಲ್ಲ, ರನ್ನನು ಗದಾಯುದ್ಧ ವನ್ನು ಬರೆವ ಹೊತ್ತಿಗೆ ಅದು ನವನವೀನವಾಗಿರಬೇಕೆಂದೂ ವ್ಯಕ್ತವಾಗುವುದರಿಂದ, ಗದಾಯುದ್ಧವು ಕ್ರಿ. ಶ. 1007 – 1008 ರಲ್ಲಿ ರಚಿತವಾಗಿರಬೇಕು.

ಗದಾಯುದ್ಧದಲ್ಲಿಯು ( I. ೨೬ )

ಕಂಡೆಂ ಗ್ರಹಣಮನದನಾ
ಖಂಡಲ ದಿಙ್ಮುಖದೆ ಬಂದು ಸರ್ವಗ್ರಾಸಂ ।
ಗೊಂಡತ್ತಪರಾದಿತ್ಯನ
ಮಂಡಲಮಂ ಬಾಹುರಾಹು ಸತ್ಯಾಶ್ರಯನಾ ॥

ಎಂಬ ಕಂದಪದ್ಯದಲ್ಲಿ ಅಪರಾದಿತ್ಯನ ಮಂಡಲವನ್ನು ಕಬಳಿಸಿತೆಂಬ ಆ ಪೂರ್ಣ ಸೂರ್ಯಗ್ರಹಣವು ಸತ್ಯಾಶ್ರಯನು ಉತ್ತರ ಕೊಂಕಣದ ಅರಸನಾದ ಅಪರಾ ದಿತ್ಯನ ರಾಜ್ಯವನ್ನು ಗೆದ್ದನೆಂಬಲ್ಲಿ ಕವಿಸಮಯಾನುಸಾರವಾಗಿ ಹೇಳಿರುವ ಕೇವಲ ರೂಪಕೋಕ್ತಿಯೋ ಅಥವಾ ಸತ್ಯಾಶ್ರಯನಿಗೂ ಅಪರಾದಿತ್ಯನಿಗೂ ಯುದ್ಧವಾಗು ತ್ತಿರುವಂದೊ ಇಲ್ಲವೆ ರನ್ನನು ಗದಾಯುದ್ಧವನ್ನು ರಚಿಸುತ್ತಿರುವಂದೊ ಒಂದು ಪೂರ್ಣ ಸೂರ್ಯಗ್ರಹಣವೂ ಸಂಭವಿಸಿದ್ದು ಅದನ್ನು ಕಂಡ ರನ್ನನು ಆ ಅಪರಾದಿತ್ಯ ಮಂಡಲದ ( ಅಪರಾದಿತ್ಯ = ೧. ಅರಸನ ಹೆಸರು, ೨. ಪಡುವಣ ನೇಸರು; ಮಂಡಲ = ೧. ಮಂಡಲೇಶ್ವರನ ರಾಜ್ಯ, ೨. ಸೂರ್ಯಮಂಡಲ ) ಗ್ರಹಣವನ್ನೇ

---

೧. ಚೋಳ I ರಾಜರಾಜನು ಕ್ರಿ. ಶ. 1016 ರ ವರೆಗೆ ಬದುಕಿದ್ದರೂ 1012 ರಲ್ಲಿ ಅವನು ರಾಜ್ಯಭಾರದಿಂದ ನಿವೃತ್ತನಾಗಿ ಅವನ ಮಗನಾದ I ರಾಜೇಂದ್ರನು ಪಟ್ಟವೇರಿದ ನೆಂದು ತಿಳಿಯುತ್ತದೆ ( HISI, ಪು. 60; 341 ).

ಆಶ್ರಯಿಸಿ, ಪಶ್ಚಿಮ ಸಮುದ್ರತೀರದ ಮಂಡಲೇಶ್ವರನಾದ ಅಪರಾದಿತ್ಯನ ಹೆಸರಲ್ಲಿ ಶ್ಲೇಷೆಯನ್ನು ಹೊಡಿರುವನೋ ಎಂದು ನಿಶ್ಚಯಿಸುವುದು ಕಷ್ಟವೇ ಆದರೂ, ತಾನು ಕಂಡ ದರ್ಶನ ( phenomenon ) ದಿಂದಲೇ ಆತನು ಈ ರೂಪಕ ಶ್ಲೇಷೆಯನ್ನು ರಚಿಸಿದನೆಂದಾದರೆ, ಮತ್ತು ಹಾಗಾದರೆ ಮಾತ್ರ, ಆತನು ಕಂಡ ( ಹಾಗೂ ಕ್ರಿ. ಶ. 1006 ರಿಂದ ಈಚೆಯ ) ಆ ಪೂರ್ಣ ಸೂರ್ಯಗ್ರಹಣವು ( ಶಾ. ಶ. ೯೨೯ ಪ್ಲವಂಗ ಸಂ| ವೈಶಾಖ ಬಹುಳ ಅಮಾವಾಸ್ಯೆ ಸೋಮವಾರ = ) ಕ್ರಿ. ಶ. 1007 ಮೇ 19 ನೆಯ ತಾರೀಕಿನಂದು ಅಪರಾಹ್ಣದಲ್ಲಿ ಜರುಗಿದ, ಅತಏವ ಅಪರಾದಿತ್ಯನ ಪೂರ್ಣ ಗ್ರಹಣವಾಗಿರಬೇಕು. ಹಾಗಾದರೆ ಆಗ್ಗೆ ತಾನು ರಚಿಸುತ್ತಿದ್ದ ಅಥವಾ ಅಲ್ಲಿಂದ ಈಷತ್ಕಾಲಾನಂತರ ರಚಿಸಲಾರಂಭಿಸಿದ ತನ್ನ ಗದಾಯುದ್ಧವನ್ನು ರನ್ನನು ಕ್ರಿ. ಶ. 1007 – 1008 ರಲ್ಲಿ ಬರೆದು ಮುಗಿಸಿರಬೇಕು. ಗದುಗಿನ ವೀರನಾರಾಯಣ ಸ್ವಾಮಿಯ ದೇಗುಲದ ದಕ್ಷಿಣ ಗೋಪುರದಲ್ಲಿಯ ಶಾ. ಶ. ೯೩೦ ಕೀಲಕ ಸಂ| ಮಾರ್ಗಶಿರ ಶುಕ್ಲ ಹುಣ್ಣಿಮೆ ಸೋಮವಾರ = ಕ್ರಿ. ಶ. 1008 ನವಂಬರ 15 ರ ಶಿಲಾಶಾಸನದಿಂದ[೧] ಆಗ್ಗೆ ಇರಿವಬೆಡಂಗ ಸತ್ಯಾಶ್ರಯನು ಆಳುತ್ತಿದ್ದನೆಂದು ತಿಳಿವುದರಿಂದ ಆತನು ಕ್ರಿ. ಶ. 1009 ರ ಮುಂಭಾಗದ ವರೆಗಾದರೂ ಬದುಕಿದ್ದಿರಬೇಕು.

೮. ಗದಾಯುದ್ಧದ ಪ್ರತ್ಯಾಶ್ವಾಸದ ಸಮಾಪನ ಗದ್ಯದಲ್ಲಿಯ '**ಶ್ರೀಮದಾಹವಮಲ್ಲ** ಶ್ರೀಪಾದ ಕಲ್ಪಪಾದಪಾಶ್ರಯಾಸನ್ನವರ್ತಿ ಕವಿಚಕ್ರವರ್ತಿ ಕವಿರನ್ನ' ಎಂಬ ಮಾತಿನಿಂದ ಆ ಕಾವ್ಯವು ಆಹವಮಲ್ಲ ಎಂಬ ಬಿರುದಿನಿಂದ ಪ್ರಖ್ಯಾತನಾದ ಚಾಳುಕ್ಯ ತೈಲಪನ ಆಳಿಕೆಯಲ್ಲಿ ತಾನೆ ರಚಿತವಾಯಿತೆಂದು ಇಷ್ಟು ಸ್ಪಷ್ಟವಿರುವಲ್ಲಿ, ಹಾಗಲ್ಲ ಅದು ಅವನ ಮಗನೂ ಉತ್ತರಾಧಿಕಾರಿಯೂ ಆದ ಸತ್ಯಾಶ್ರಯನ ಆಳಿಕೆಯಲ್ಲಿ ರಚಿತವಾಗಿರಬೇಕೆಂದರೆ ಹೇಗೆ ನಂಬಬಹುದು? ಎಂದು ಕೊನೆಗೊಂದು ಪ್ರಶ್ನೆ ಏಳಬಹುದು. ಅದರ ನಿವೃತ್ತಿ ಇಷ್ಟೇ– ಈ ಸಮಾಪನ ಗದ್ಯಗಳಲ್ಲಿ ಆಹವಮಲ್ಲ ದೇವನೆಂದಿರುವ ಚಾಳುಕ್ಯಚಕ್ರವರ್ತಿಯಾದರೂ ತನ್ನ ತಂದೆಯಾದ ತೈಲಪನಂತೆಯೇ ಆಹವಮಲ್ಲನೆಂದೂ ಬಿರುದಿದ್ದ ಸತ್ಯಾಶ್ರಯನೇ ವಿನಾ ಸರ್ವಥಾ ತೈಲಪನಲ್ಲ. ಗದಾಯುದ್ಧದಲ್ಲಿಯ

ನೆಟ್ಟನೆ ವಾಸವಂಗಮೃತವಾರಿಧಿಯೊಳ್ಸುರ ಗಂಧವಾರಣಂ
ಪುಟ್ಟಿ ಸುರೇಂದ್ರರಾಜ್ಯಮುದಿತೋದಿತಮಾದುದು ದಾನದಿಂದೊಡಂ |
ಬಟ್ಟಿರೆ ಭದ್ರಲಕ್ಷಣ ಗುಣಾನ್ವಿತನಮ್ಮನ ಗಂಧವಾರಣಂ
**ಪುಟ್ಟೆ ನರೇಂದ್ರರಾಜ್ಯಮುದಿತೋದಿತಮಾಹವಮಲ್ಲ ದೇವನಾ** || ( I. ೧೧ )

---

೧. South Indian Epigraphy Report, 1933 App. D. ಪು. 109, ನಂ. 179.

ಹಾಗೂ

ಸಂಗರರಂಗದೊಳೀಱಿವ ಬೆ
ಡಂಗವೆಸರ್ನೆಗೞ್ದ ನೆಗೞ್ದ ಸಂಗರವಂ ತೋ ।
ರ್ಪಂ ಗಡ ನೆಗೞ್ದಾಹವಮ
ಲ್ಲಂಗಂ ಜಾಕಬ್ಬೆ ದೇವಿಗಂ ಪುಟ್ಟಿದುದಂ ॥ ( I. ೬೫ )

ಎಂಬಲ್ಲಿಯ ಆಹವಮಲ್ಲನಾದರೆ ಸತ್ಯಾಶ್ರಯನ ತಂದೆಯಾದ ತ್ಶೈಲಪನೆಂಬಲ್ಲಿ ಬೇರೆ ಮಾತಿಲ್ಲವಾದರೂ ಅದರ ಆಶ್ವಾಸಾಂತ್ಯದ ಗದ್ಯಗಳಲ್ಲಿಯ ಆಹವಮಲ್ಲನಾದರೊ ಶಾ. ಶ. ೯೨೮ ಪರಾಭವ ಸಂ| = ಕ್ರಿ. ಶ. 1006 ರ ಮೇಲೆ ಕಂಡಿರುವ ಜೇಬೊ್ರೀಲಿನ ಶಾಸನದಲ್ಲಿ[೧] ಚಾಳುಕ್ಯ **ಆಹವಮಲ್ಲ ಸತ್ತಿಗ**ನೆಂದೂ ಮೇಲೆ ಕಂಡಿರುವ ಶಾ. ಶ. ೯೨೯ ಪ್ಲವಂಗ ಸಂ| ಫಾಲ್ಗುಣ ನಂದೀಶ್ವರದ ಅಷ್ಟಮಿ, ಅಂದರೆ ಫಾಲ್ಗುಣ ಶುಕ್ಲಾಷ್ಟಮಿ, ಗುರುವಾರ = ಕ್ರಿ. ಶ. 1007 ಫೆಬ್ರುವರಿ 27 ನೆಯ ತಾರೀಕಿನ ಲಕ್ಕುಂಡಿಯ ಜೈನ ಬಸದಿಯಲ್ಲಿಯ ಅಜಿತಪುರಾಣದಿಂದ ( I. ೫೧; XII. ೧೯ ) ಚಾಳುಕ್ಯ ತ್ಶೈಲಪನ ಪಡೆವಳನೆಂದು ನಾವು ಬಲ್ಲ ಅದೇ ಪಡೆವಳ ತೈಲನು ಮಾಸವಾಡಿ ೧೪೦ ನ್ನು ಆಳುತ್ತಿದ್ದಂದಿನ ಆತನ ಶಿಲಾಶಾಸನದಲ್ಲಿ[೨] ಚಾಳುಕ್ಯ **ಆಹವಮಲ್ಲದೇವ**ನೆಂದೂ ಹೇಳಲ್ಪಟ್ಟಿರುವ, ಗದಾಯುದ್ಧದಿಂದ (VIII. ೩೬, ೪೨, ೫೮: X. ೭ ) ಸತ್ತಿಗನೆಂದೂ ತಿಳಿವ ಹಾಗೂ ಈ ಶಾಸನಗಳ ತೇದಿಗಳಿಂದ ಸತ್ಯಾಶ್ರಯನೇ ( ಕ್ರಿ. ಶ. 997 – 1009 ) ಎಂದು ದೃಢವಾಗುವ ಚಾಳುಕ್ಯ ಚಕ್ರವರ್ತಿಯಾದ ಸತ್ಯಾಶ್ರಯನೇ ವಿನಾ ಅನ್ಯನಲ್ಲ. ಅತಏವ ಗದಾಯುದ್ಧವು ಸತ್ಯಾಶ್ರಯನ ಆಳಿಕೆಯಲ್ಲಿ ತಾನೆ ರಚಿತವಾಯಿತೆಂದು ಕಂಡಿತವೇ ಸರಿ.

ಹಾಗಾದರೆ ಗದಾಯುದ್ಧದ ( XII. ೨೩ ) ಕೊನೆಯಲ್ಲಿ ಕಾಣಬರುವ

ಶಕ ಸಮಗತಿಮಿತು ಯುಗ ಶಶಿ
ನಿಕರಾಂಕಂ ಚಿತ್ರಭಾನು ( ಸಂವತ್ಸರ) ಕಾ ।
ರ್ತಿಕ ಸಿತಸಪ್ತಮಿ ( ದಿನದೊಳ್ )
ಸುಕರಂ ಬುಧಸೇವ್ಯಮಾಯ್ತು ರನ್ನನ ಕಾವ್ಯಂ ॥

ಎಂಬೀ ಕಂದ ಪದ್ಯದ ಗತಿ ಏನು? ಇದರಿಂದ ಆ ಕಾವ್ಯವು ಕ್ರಿ. ಶ. 982 ರಲ್ಲಿ ರಚಿತವಾಯಿತೆಂದು ತೋರುತ್ತದಷ್ಟೇ, ಅದರ ಅರ್ಥವೇನು? ಎಂದು ಕೇಳಿದರೆ ಅದಕ್ಕೆ ಹೀಗೆನ್ನಬಹುದು—

---

೧. HISI, ಪು. 58;1335.

೨. Supplement to South Indian Epigraphy Report, 1927, ಪು. 3. ನಂ. 28.

ಈ ಪದ್ಯದಲ್ಲಿ ಹಲವು ಹುಳುಕುಗಳಿದ್ದರೂ ಇದೊಂದು ಕಾವ್ಯರಚನೆಯ ಮುಗಿತಾಯವನ್ನು ಹೇಳುತ್ತದೆಂಬಲ್ಲಿಯೂ ಇದರಲ್ಲಿಯ ಚಿತ್ರಭಾನು ಎಂಬುದು ಸಂವತ್ಸರದ ಹೆಸರೆಂಬಲ್ಲಿಯೂ ಹೇಗೋ ಹಾಗೆಯೇ ಕ್ರಿ. ಶ. 949 ನೆಯ ಸೌಮ್ಯ ಸಂವತ್ಸರದಲ್ಲಿ ಹುಟ್ಟಿದ ರನ್ನನ ( ಅಜಿತ XII. ೪೭ ) ಆಯುಷ್ಕಾಲದಲ್ಲಿ ಒದಗಿದ ಚಿತ್ರಭಾನು ಸಂವತ್ಸರವು ಕ್ರಿ. ಶ. 982 – 983 ನೆಯದೆಂಬಲ್ಲಿಯೂ ಆಕ್ಷೇಪವಿಲ್ಲದ ಕಾರಣ, ಈ ಪದ್ಯದಿಂದ ಕೊನೆಗಂಡ ಕಾವ್ಯವು ಆ ವರ್ಷದಲ್ಲಿ ಬರೆದು ಮುಗಿದಿರ ಬೇಕೆಂದು ಇದರಿಂದ ತಿಳಿಯುತ್ತದೆ. ಈ ಕಂದದಲ್ಲಿ ಹೇಳಿದ ತೇದಿ ಕಾರ್ತಿಕ ಶುಕ್ಲ ಸಪ್ತಮಿ, ಅಂದರೆ ಕಾರ್ತಿಕ ನಂದೀಶ್ವರ ಪರ್ವದ ಮೊದಲನೆಯ ದಿನವಾದ ಆ ಶುಕ್ಲಾಷ್ಟಮಿಯ ನಿನ್ನೆ. ನಂದೀಶ್ವರ ಪರ್ವವು ವರ್ಷದಲ್ಲಿ ಮೂರು ಬಾರಿ ಬರುತ್ತಿದೆ— ಆಷಾಢ ಶುಕ್ಲಾಷ್ಟಮಿಯಿಂದ ಹುಣ್ಣಿಮೆ ವರೆಗಣ ಆಷಾಢ ನಂದೀಶ್ವರ, ಕಾರ್ತಿಕ ಶುಕ್ಲಾಷ್ಟಮಿಯಿಂದ ಹುಣ್ಣಿಮೆ ವರೆಗಣ ಕಾರ್ತಿಕ ನಂದೀಶ್ವರ, ಮತ್ತು ಫಾಲ್ಗುಣ ಶುಕ್ಲಾಷ್ಟಮಿಯಿಂದ ಹುಣ್ಣಿಮೆ ವರೆಗಣ ಫಾಲ್ಗುಣ ನಂದೀಶ್ವರ.[೧] ಈ ಮೂರೂ ಜೈನರಿಗೆ ಸರಿಯಾಗಿ ಪುಣ್ಯಕಾಲಗಳು. ಅನೇಕ ಜೈನ ಕವಿಗಳು ತಂತಮ್ಮ ಧರ್ಮಗ್ರಂಥಗಳನ್ನು ಆಯಾ ನಂದೀಶ್ವರ ಪರ್ವಗಳಲ್ಲಿ ಬರೆದು ಮುಗಿಸಿರುತ್ತಾರೆ. ಉದಾ—

೧. ಸಂಸ್ಕೃತ ಪೂರ್ವಪುರಾಣದ ರಚಕನೆಂದು ಮೇಲೆ ಕಂಡಿರುವ ಜಿನಸೇನನು ತನ್ನ ಜಯಧವಲಾ (ಟೀಕಾ) ಎಂಬ ಧರ್ಮಗ್ರಂಥವನ್ನು ರಚಿಸಿ ಮುಗಿಸಿದುದು ರಾಷ್ಟ್ರಕೂಟ ಅಮೋಘವರ್ಷ ನೃಪತುಂಗನ ಆಳಿಕೆಯ (ಕ್ರಿ. ಶ. 814–877) ಶಾ. ಶ. ೭೫೯= ಕ್ರಿ. ಶ. 837 – 838 ರ ಫಾಲ್ಗುಣ ನಂದೀಶ್ವರದಲ್ಲಿ[೨]—

ಫಾಲ್ಗುನೇ ಮಾಸಿ ಪೂರ್ವಾಹ್ಣೇ ದಶಮ್ಯಾಂ ಶುಕ್ಲಪಕ್ಷಕೇ ।
ಪ್ರವರ್ಧಮಾನ ಪೂಜಾಯಾಂ ನಂದೀಶ್ವರಮಹೋತ್ಸವೇ ॥
ಅಮೋಘವರ್ಷ ರಾಜೇಂದ್ರ ಪ್ರಾಜ್ಯರಾಜ್ಯ ಗುಣೋದಯಾ ।
....................................................
ಏಕಾನ್ನಷಷ್ಟಿ ಸಮಧಿಕ ಸಪ್ತಶತಾಬ್ದೇಷು ಶಕನರೇಂದ್ರಸ್ಯ ।
ಸಮತೀತೇಷು ಸಮಾಪ್ತಾ ಜಯಧವಲಾ ಪ್ರಾಭೃತವ್ಯಾಖ್ಯಾ ॥

೨. ಚಾವುಂಡರಾಯನು ತನ್ನ ಚಾವುಂಡರಾಯಪುರಾಣವೆಂಬ ತ್ರಿಷಷ್ಟಿ ಲಕ್ಷಣ ಮಹಾಪುರಾಣವನ್ನು ಬರೆದು ಮುಗಿಸಿದುದು 'ಫಾಲ್ಗುಣ ಸಿತಾಷ್ಟಮಿ' ಅಂದರೆ ಫಾಲ್ಗುಣ ನಂದೀಶ್ವರದ ಮೊದಲನೆಯ ದಿನವಾದ ಶುಕ್ಲಾಷ್ಟಮಿಯಂದು[೩]—

೧. ಉದಯ ಭಾರತ, II. ಪು. ೨೦–೨೧.

೨. ಜಿನಸೇನನ 'ಪಾರ್ಶ್ವಾಭ್ಯುದಯ' ಕಾವ್ಯದ ಪ್ರಸ್ತಾವನೆ ( ಪು. 2—3 ).

೩. ಚಾವುಂಡರಾಯ ಪುರಾಣ (ಪೀಠಿಕೆ, ಪು. iii ); ಕರ್ಣಾಟಕ ಕವಿಚರಿತೆ I, ಪು. 46.

ನವಶತಸಂಖ್ಯೆಯಾಗೆ ಶಕಕಾಲಸಮಂ ನೆಗಱ್ದೀಶ್ವರಾಬ್ದಮು
ತ್ಸವಕರಮಾಗೆ ಫಾಲ್ಗುಣ ಸಿತಾಷ್ಟಮಿ ರೋಹಿಣಿ ಸೋಮವಾರಮೆಂ ।
ಬಿವು ಶುಭದಂಗಳಾಗೆ ಪರಮೋತ್ಸವದಿಂ ಗುಣರತ್ನಭೂಷಣಂ
ಕವಿಜನಶೇಖರಂ ಬರೆದು ಪುಸ್ತಕಕೇಱಿಸಿದಂ ಪುರಾಣಮಂ ॥

೩. ರನ್ನನೇ ತನ್ನ ಅಜಿತಪುರಾಣವನ್ನು (XII. ೫೪) ಪ್ರಕಟಿಸಿದುದು ಕಾರ್ತಿಕ ನಂದೀಶ್ವರದಲ್ಲಿ—

ಶಕವರ್ಷಂ ಪಂಚದಶಾ
ಧಿಕ ನವಶತಮಾಗೆ ವಿಜಯ ಸಂವತ್ಸರ ಕಾ ।
ರ್ತಿಕ ನಂದೀಶ್ವರ ದಿನದೊಳ್
ಪ್ರಕಟಿಸಿದುದು ರತ್ನನಿಂದಮಜಿತಪುರಾಣಂ ॥

ಆದರೆ ಪಂಪನು ತನ್ನ ಆದಿಪುರಾಣವನ್ನು (XVI. ೭೬ – ೭೭) ಕಾರ್ತಿಕ ನಂದೀಶ್ವರದ ಅವೆಂಟರಲ್ಲಿ ಯಾವೊಂದೂ ತಿಥಿಯಂದಲ್ಲ, ಆ ಮುಂಚಿನ ಪಂಚಮಿಯಂದು ಮುಗಿಸಿದನು—

ಶಕವರ್ಷಮೆಂಟುನೂಱ
ಕ್ಕೆ ಕಡೆಯೊಳಱುವತ್ತುಮೂಱು ಸಂದಂದು ಜಗ ।
ತ್ಪ್ರಕಟ ಪ್ಲವ ಸಂವತ್ಸರ
ದ ಕಾರ್ತಿಕಂ ಮುದಮನೀಯೆ ನಂದೀಶ್ವರದೊಳ್ ॥
ಸಿತಪಕ್ಷದ ಪಂಚಮಿ ದಿನ
ಪತಿವಾರಂ ಶುಭದ ಮೂಲ ನಕ್ಷತ್ರದೊಳ ।
ಸ್ಥಿತಮಾಗೆ ನೆಗಱ್ದದೀ ಮ
ತ್ಕೃತಿ ಜಗದೊಳ್ ಪುದಿದು ಸಾಗರಾಂತ ಕ್ಷಿತಿಯಂ ॥

ಎಂಬ ಕಾರಣ ನಂದೀಶ್ವರವೇ ಅಲ್ಲ, ಅದು ತೊಡಗುವಲ್ಲಿಯ ಅದರ ಒತ್ತಿನ ಕೆಲವು ದಿನಗಳೂ ಅಂಥವೇ ಪುಣ್ಯತಿಥಿಗಳೆಂದು ತಿಳಿಯುವುದರಿಂದ ಕಾರ್ತಿಕ ಶುಕ್ಲ ಪಂಚಮಿಗಿಂತ ಕಾರ್ತಿಕ ನಂದೀಶ್ವರಕ್ಕೆ ಸಮಿಾಪತರವಾದ ಶುಕ್ಲ ಸಪ್ತಮಿಯಂದು ಬರೆದು ಮುಗಿದುದೆಂಬ ರನ್ನನ ಆ ಕಾವ್ಯವು ಪಂಪನ ಆದಿಪುರಾಣದಂತೆ, ತನ್ನದೇ ಅಜಿತಪುರಾಣದಂತೆ ಜೈನ ಧರ್ಮದ ಯಾವುದೊಂದು ಕಾವ್ಯ ತಾನೇ ಆಗಿರಬೇಕಲ್ಲದೆ, ಗದಾಯುದ್ಧದಂಥಾ ಜೈನೇತರ ಕಾವ್ಯವಲ್ಲ. ರನ್ನನು ತನ್ನ ಚಕ್ರೇಶ್ವರಚರಿತವನ್ನು ಕ್ರಿ. ಶ. 981 – 982 ರಲ್ಲಿ ಬರೆದಿರಬೇಕೆಂದು ಮೇಲೆ ಕಂಡಿರುವುದರಿಂದ, 'ಶಕಸಮಗತಿ' ಎಂಬಾ ಕಂದವು ಮೇಲೆ ಹೇಳಿರುವ ಕಾರಣಗಳಿಂದ ಆತನ ಗದಾಯುದ್ಧದ ಮಟ್ಟಿಗೆ ಪ್ರತ್ಯಕ್ಷತಃ ಪ್ರಕ್ಷೇಪವೇ ಆದರೂ ಅದು ರನ್ನನ ಕವಿತೆಯೇ ಅಹುದಾದರೆ, ಅದು ಅವನ ಚಕ್ರೇಶ್ವರಚರಿತವ ರಚನಕಾಲವನ್ನು ಹೇಳುವ,

ಆ ಕಾವ್ಯದ ಕೊನೆಯ ಪದ್ಯವಾಗಿರಬೇಕು. ರನ್ನನ ಕಾವ್ಯಗಳನ್ನು ಸಂಪ್ರತಿಸಿರುವ ಓಲೇಗರಿಯ ಪುಸ್ತಕದಲ್ಲಿ ಪ್ರಾಯಶಃ ಗದಾಯುದ್ಧದ ಬಳಿಕಲೇ ಚಕ್ರೇಶ್ವರಚರಿತವು ಬರೆಯಲ್ಪಟ್ಟಿದ್ದು ಕಾಲಕ್ರಮೇಣ ಗೆದ್ದಲು ಹಿಡಿದೊ ಬೇರೆ ಹೇಗೊ ಗದಾಯುದ್ಧದ ಕೊನೆಯ ಆಶ್ವಾಸನದ ಕೊಟ್ಟಕೊನೆಯ ಕೆಲ ಭಾಗವೂ ಅದರ ಮುಂದಣ ಚಕ್ರೇಶ್ವರಚರಿತವೂ ತ್ರುಟಿತವಾಗಿ ನಷ್ಟವಾದಂದು ಆ ಚಕ್ರೇಶ್ವರಚರಿತದ ಕೊನೆಯ ಈ ಕಂದಪದ್ಯದಲ್ಲಿ ಆಯಾ ಕೆಲವು ಅಕ್ಷರಗಳು ಸವೆದೊ ತೂತುಬಿದ್ದೊ ಗದಾಯುದ್ಧದ ಕಾಣವಾದರೂ ಈ ಪದ್ಯವಿದ್ದ ಓಲೆ ಏನೋ ಉಳಿದಿದ್ದುದರಿಂದ ಈ ಪದ್ಯವೇ ಕೊನೆಯ ಪದ್ಯವೆಂದೂ ಅತಏವ ಇದರಲ್ಲಿ ಹೇಳಿರುವ ತೇದಿಯೇ ಗದಾಯುದ್ಧದ ಸಮಾಪನ ಕಾಲವೆಂದೂ ಸಾಹಜಿಕವಾಗಿ ಭಾವಿಸಲ್ಪಟ್ಟು ಇದು ಗದಾಯುದ್ಧದಲ್ಲಿ ಸೇರಿಸಲ್ಪಟ್ಟಿರಬಹುದೇನೊ ಎಂದು ಊಹಿಸಬಹುದಷ್ಟೇ.

---

# ಬಸವೇಶ್ವರನ ಕಾಲನಿರ್ಣಯ

ಸುಮಾರು ೫೦ ವರ್ಷಗಳ ಹಿಂದೆ ಬಸವೇಶ್ವರನ ಹೆಸರು ಸಾಹಿತ್ಯದಲ್ಲಿ ವಿನಾ ಶಾಸನಗಳಲ್ಲಿ ದೊರೆಯದೆ, ಆ ಸಾಹಿತ್ಯವೂ ಅವನ ಸಮಸಾಮಯಿಕವಾಗಿರದೆ, ಅವನ ಐತಿಹಾಸಿಕತೆಯನ್ನು ಕುರಿತು ಸಹಜವಾಗಿ ಇದ್ದ ಕೊರತೆಯಾದರೊ ಈಗೇನೂ ಹಾಗೆಯೇ ಉಳಿದಿಲ್ಲದೆ, ಅವನ ಕಿರಿಯ ಸಮಕಾಲೀನನಾದ ಹರಿಹರನ ಅಪೂರ್ಣ ವಾಗಿಯೇ ಆದರೂ ದೊರೆತಿರುವ ಬಸವರಾಜದೇವರ ರಗಳೆಯಿಂದಲೂ ಈ ಕೆಲವು ಶಾಸನಗಳಿಂದಲೂ ಆ ತೊಡಕು ಸಾಕಲ್ಯವಾಗಿ ನೀಗುತ್ತದೆ.

೧. ವಿಜಾಪುರ ಜಿಲ್ಲೆಯ ಮುದ್ದೆಬಿಹಾಳ ತಾಲೂಕಿನ ಗುಡಿಹಾಳ ಮತ್ತು ಕುಂಟೋಜಿ ಗ್ರಾಮಗಳ ನಡುವಣ ಗಡಿಕಲ್ಲಿನಲ್ಲಿ[೧] ‘ ಇದು **ಬಸವರಾಜದೇವರ** ಮಾನ್ಯ ’ ಎಂದಿರುವಲ್ಲಿ ಬಸವರಾಜದೇವರೆಂದರೆ ಬಸವೇಶ್ವರನೇ ಹೊರತು ಅನ್ಯನಲ್ಲ ಎಂದು ಬೇಕಾದಷ್ಟು ದೃಢವಿರುವುದರಿಂದ, ಈ ಮಾನ್ಯವು ಅವನದೇ, ಅತಏವ ಅವನು ಐತಿಹಾಸಿಕ ವ್ಯಕ್ತಿ ತಾನೆ, ಎಂದು ಕಂಡಿತವಾದರೂ ಇದಕ್ಕೆ ತೇದಿ ಇಲ್ಲದುದರಿಂದ ಇದು ಅವನ ಐತಿಹಾಸಿಕತೆಗೆ ಸಾಲುವಂತೆ ಅವನ ಕಾಲನಿರ್ಣಯಕ್ಕೆ ಸಾಲದು.

೨. ಧಾರವಾಡ ಜಿಲ್ಲೆಯ ಸೊರಟೂರಿನ ಮಲ್ಲೇಶ್ವರ ದೇವಾಲಯದೊಂದು ಸ್ತಂಭದಲ್ಲಿ[೨] ದುರ್ಮುಖಿ ಸಂ| ಆಶ್ವಯುಜ ಶುದ್ಧ ೧೦ ಮಂಗಳವಾರದಂದು ಹಂದಿಗ ನೂರಿನ ಮಹಾನಾಯಕಾಚಾರ್ಯ ಸಿದೇನಾಯಕನ ಕೆಳಗಣ ಗಬ್ಬಿನಾಯಕನೆಂಬ ವನು ಅದೋ ಬೇರೆಯದೋ ದೇವಸ್ಥಾನವನ್ನು ಜೀರ್ಣೋದ್ಧಾರ ಮಾಡಿ ಅಲ್ಲಿ **ಬಸವೇಶ್ವರನ** ಮೂರ್ತಿಯನ್ನು ಪ್ರತಿಷ್ಠಿಸಿದನೆಂದಿದೆ. ಈ ಶಾಸನಕ್ಕೆ ಹಿಂದಿನಿಂದಲೆ ಬಸವೇಶ್ವರನ ವಿಗ್ರಹ ಮಾಡಿ ಪೂಜಿಸುತ್ತಿದ್ದರೆಂದು ಇದರಿಂದ ತಿಳಿದರೂ ಇದರಲ್ಲಿ ಶಕಸಂಖ್ಯೆಯಾಗಲಿ ಆಗಣ ಆಳರಸನ ಹೆಸರಾಗಲಿ ಇಲ್ಲದುದರಿಂದ ಇದು ಎಷ್ಟರ ಹಿಂದಣದೆಂದು ನಿರ್ಧರಿಸಲಾಗುವುದಿಲ್ಲ.

---

೧. Annual Report on South Indian Epigraphy ( SIE ), 1930, Appendix E, ಶು. 65. ನಂ. 14

೨. SIE, 1927 Supplement ( Sup. ), ಶು. 6 ನಂ. 77.

೩. ಬಸವಪುರಾಣದಿಂದ ( 4. ೫೬; ೫೭; ೫೯; ೭೧ ) ಸಂಗಮೇಶ್ವರನ ಮಗನೆಂದೂ ಭಾವಿಸಲ್ಪಟ್ಟಂತೆ ತಿಳಿವ ಬಸವೇಶ್ವರನನ್ನು ಕುರಿತು ಶಾ. ಶ. ೧೧೮೪= ಕ್ರಿ. ಶ. 1262 ನೆಯ ಚೌಡದಾಮಪುರದ ಶಾಸನದಲ್ಲಿ[೧]

( . ) ನೆಗೞ್ದದ್ರಿಜೆ ಬಿನ್ನಪಂ ಶಿವ ಜಗಕ್ಕೀ ಮಾರ್ಗಮಂ ತೋರಬೇ।
ಕೆನಲಾಗ ಪ್ರಭು ನಂದಿನಾಥನ ಮೊಗಂ ನೋಡಲ್ಕೆ ( . ) ಸಂಗಮೇ ।
ಶನಪುತ್ರಂ ಬಸವಯ್ಯ ಬಂದ

ನೆಂಬಲ್ಲಿ ಸಂಗಮೇಶನ ಪುತ್ರನೆಂಬ ಬಸವೇಶ್ವರನು ಈ ಶಾಸನಕಾಲದಲ್ಲಿ, ಅತಏವ ಇದಕ್ಕೆ ತಕ್ಕಷ್ಟು ಹಿಂದಿನಿಂದಲೆ, ನಂದೀಶ್ವರನ ಅವತಾರವೆಂದು ಭಾವಿಸಲ್ಪಡುತ್ತಿದ್ದ ನೆಂದು ವ್ಯಕ್ತವಿರುವುದರಿಂದ, ಅವನು ಇದರ ಕೆಲವಾದರೂ ದಶಕಗಳ ಹಿಂದೆ ಆಗಿ ಹೋಗಿರಬೇಕು.

೪. ಕ್ರಿ. ಶ. 1280 ನೆಯ ಮರಡೀಪುರದ ಶಾಸನದಲ್ಲಿ[೧]—

ಸಿರಿಯಾಳ ದಾಶವರ್ಮ ಓಹಿಲ ಉದ್ಭಟ ನಂಬಿ ಕುಂಬಾರ ಗುಂಡ
ಅಂಡವಲ ಕರಿಕಾಲ ಚೋಳ ಭೋಗದೇವ ಬಾಣ ಮಯೂರ
ಕಾಳಿದಾಸ ಕೇಶಿರಾಜ ದಣ್ಣಾಯಕ ಸುರಿಗೆ ಚೆಲ್ವಡರಾಯ
ಸಂಗನ ಬಸವಯ್ಯ ಲಿನಿಮಿತಿ ಕೇಶವರಾಜ ಜಗದೇವ ದಣ್ಣಾಯಕ
ಏಕಾಂತದ ರಾಮಯ್ಯ ಸೊನ್ನಲಿಗೆ ರಾಮಯ್ಯ ಹುಲಿಗೆರೆಯ
ಪೊನ್ನಯ್ಯ ನೆಲುವಿಗೆಯ ಸಾಂತಯ್ಯ ( ಬಂ. ೧೭ );

೫. ಶಾ. ಶ. ೧೨೦೧ ನೆಯ ಪ್ರಮಾಥಿ ಸಂ| ಆಶ್ವಯುಜ ಶುದ್ಧ ಹುಣ್ಣಿಮೆ ಸೋಮವಾರ ಚಂದ್ರಗ್ರಹಣ, ಅಂದರೆ ಇಲ್ಲಿ ಹೇಳಿದ ತಿಂಗಳು ಸರಿಯಾದರೆ ಕ್ರಿ. ಶ. 1279 ಸಪ್ಟಂಬರ 21 ಗುರುವಾರ ಚಂದ್ರಗ್ರಹಣದಂದಿನ, ಅಥವಾ ವಾರ ಸರಿಯಾದರೆ ಕ್ರಿ. ಶ. 1280 ಸಪ್ಟಂಬರ 10 ಸೋಮವಾರ ಭಾದ್ರಪದ ಶುದ್ಧ ಹುಣ್ಣಿಮೆಯ ಚಂದ್ರಗ್ರಹಣದಂದಿನ, ದೇವಗಿರಿಯ ಯಾದವ ವಂಶದ ರಾಮಚಂದ್ರನ ( 1271 – 1309 ) ಕಾಲದ ಕಲ್ಲೇದೇವರ ಪುರದ ಕಲ್ಲೇಶ್ವರ ದೇವಸ್ಥಾನದಲ್ಲಿಯ ಜಗಳೂರು 30 ನೆಯ ಶಾಸನದಲ್ಲಿ[೨]—

ಚೇರ ಚೋಳ ನಂಬಿ ನಂಬಿ ಚಿಕ್ಕ ಕಕ್ಕ ಚೆಂನ ಹೊಂನ
ಬಂಕ ಬಸವರಾಜ ಭೋಜಾದಿ ಮರ್ತ್ಯಲೋಕದ ಮಹಾಗಣಾಚಾರ
( ಬಂ. ೧೧–೧೨ );

೬. ಶಾ. ಶ. ೧೧೮೧ ಕಾಳಯುಕ್ತ ಸಂ| = ಕ್ರಿ. ಶ. 1258 – 59 ನೆಯ ಹೊಯ್ಸಳ ವೀರ ನಾರಸಿಂಹನ, ಅಂದರೆ III ನರಸಿಂಹನ ( 1254 – 91 ),

---

೧. ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ, XXIII ( ಬಹುಧಾನ್ಯ ಸಂ| ), ಪು. ೨೭೭.
೨. Epigraphia Carnatica ( EC ) XI.

ಕಾಲದ ಹಿರಿಯೂರು ಕುಂಜೇಶ್ವರ ದೇವಾಲಯದಲ್ಲಿಯ ಅರಸಿಕೆರೆ 109 ನೆಯ ಶಾಸನದಲ್ಲಿ೧—

> ಸಿರಿಯಾಳ್ವಂ ಬಸವಯ್ಯನೊಳ್ಪಿಸೆವ ..........ಮುಂ ಬಾಣನುಂ
> ಧರ ಭೋಗಂ ಸಲೆ ಚೋಳನುದ್ಭಟನತರ್ಕ್ಯಂ ಸಿಂದ ಬಲ್ಲಾಳನಿಂ ।
> ಧರೆ ಕೊಂಡಾಡುವ ದಾಸಿಮಯ್ಯನೆನಿಸಿರ್ದೀ ಭಕ್ತಸಂದೋಹ ( ಬಂ. ೫-೭ )

ಎಂದಿರುವಲ್ಲಿ ಹರಿಹರನ ಬಸವರಾಜದೇವರ ರಗಳೆಯ ಪುಟ ಪುಟಗಳಿಂದ ( ಉದಾ. ಪು. ೫೦ ) ಬಸವ, ಬಸವಣ್ಣ, ಬಸವಯ್ಯ, ಬಸವರಸ, ಬಸವರಾಜ, ಬಸವಿದೇವನೆಂದೂ ತಿಳಿವ ಬಸವೇಶ್ವರನ ವಚನಗಳಲ್ಲಿ೨ ಪರಮ ಶಿವಶರಣರೆಂದಿರುವ ಬಾಣ, ಮಯೂರ, ಕಾಳಿದಾಸ, ಸಿರಿಯಾಳ, ಚೋಳ, ದಾಸಿಮಯ್ಯ, ಸಿಂದುಬಲ್ಲಾಳ, ನಂಬಿ, ಚಿಕ್ಕ, ಕಕ್ಕ, ಚನ್ನ, ಓಹಿಲರೊಂದಿಗೆ ಬಸವೇಶ್ವರನೂ ಅವರಿಗೆ ಓರಗೆಯ ಶಿವಭಕ್ತನೆಂದು ಗಣಿಸಲ್ಪಡುತ್ತಿದ್ದನೆಂದು ವ್ಯಕ್ತವಾಗುತ್ತದೆ.

೭. ಇವೆಲ್ಲಕ್ಕೂ ಮೇಲಾದ ಶಾ. ಶ. ೧೧೮೨ ನೆಯ ಸಿದ್ಧಾರ್ಥಿ ಸಂ| ಚೈತ್ರ ಬಹುಳ ಅಮಾವಾಸ್ಯೆ ಸೋಮವಾರ ಸೂರ್ಯಗ್ರಹಣ = ಕ್ರಿ. ಶ. 1260 ಎಪ್ರೀಲ್ 12 ಸೋಮವಾರದ ಸೂರ್ಯಗ್ರಹಣದಂದಿನ ದೇವಗಿರಿಯ ಯಾದವ ಕನ್ನರನ ( 1247 – 60 ) ಕಾಲದ ಅರ್ಜುನವಾಡದ ಶಿಲಾಲೇಖದಲ್ಲಾದರೋ೩ ಆ ಶಾಸನೋಕ್ತ ದಾನದ ಪ್ರತಿಗ್ರಾಹಿಯಾದ ಹಾಲಬಸವಿದೇವನ ಪೀಳಿಗೆಯಲ್ಲಿ—




ಹರಿಹರನ ಬಸವರಾಜದೇವರ ರಗಳೆಯಿಂದ ಬಸವರಾಜನೆಂದೂ ಸಂಗನಬಸವನೆಂದೂ ತಿಳಿವ ಬಸವೇಶ್ವರನ ತಂದೆಯಾದ ಮಾದಿರಾಜನನ್ನು ಹರಿಹರನ ರಗಳೆಯಲ್ಲಿ ( ಪು. ೫ ) ‘ಅಗ್ರಹಾರಂ ಬಾಗೆವಾಡಿಯೊಳಗೆಸೆದಿರ್ಪ ಅಗ್ರೇಶ್ವರಂ.......

೧. EC V.

೨. ಶಿವಾನುಭವ ಗ್ರಂಥಮಾಲೆ ನಂ. ೧ (1926): ಬಸವೇಶ್ವರನ ವಚನಗಳು (ಪು. ೨೨; ೪೫; ೪೬; ೪೮; ೪೯; ೫೦; ೬೧; ೬೨; ೬೭; ೭೧; ೭೩; ೮೭; ೯೩; ೯೯; ೧೦೮; ೧೦೯; ೧೧೧).

೩. Epigraphia Indica ( EI ) XXI, ಪು. 12—14

ಮಾದಿರಾಜ' ಎಂದಿರುವುದಕ್ಕೂ ಬಸವಪುರಾಣದಲ್ಲಿ (2. ೪೫–೪೬) 'ಇಂಗಳೇಶ್ವರ ಬಾಗೆವಾಡಿಯಲಿ ಆ ಮಹಾಬಹುಳಾಗ್ರಹಾರ ಗ್ರಾಮಣೀಮಣಿ........ಮಾದಿರಾಜ' ಎಂದಿರುವುದಕ್ಕೂ ಸರಿಯಾಗಿ— 'ತರ್ದವಾಡಿ ಮಧ್ಯ ಗ್ರಾಮ ಬಾಗವಾಡಿ ಪುರವ ರಾಧೀಶ್ವರ' (ಬಂ. ೮), ಅಂದರೆ ಬಾಗೆವಾಡಿಯ ಊರೊಡೆಯನೆಂದೂ ಅವನ ತನೂಜನಾದ **ಬಸವರಾಜನನ್ನು** (ಬಂ. ೯–೧೦)

ಮಂಗಳಕೀರ್ತಿ ಪುರಾತನ
ಜಂಗಮ ಲಿಂಗೈಕ ಭಕ್ತಿ ನಿರ್ಭರ ಲೀಲಾ
ಸಂಗಂ ಸಂಗನ ಬಸವಂ

ಎಂದೂ ಈ ಸಂಗನ ಬಸವನ ಅಗ್ರಜನಾದ ದೇವರಾಜ ಮುನಿಪನ (ಬಂ. ೩೫–೩೬) ಮರಿಮಗನಾದ ಹಾಲ ಬಸವಿದೇವನನ್ನು (ಬಂ. ೪೧–೪೩) 'ತೇಸಟ್ಟಿ ಪುರಾತನ ಪಾದಾರ್ಚಕರುಂ ಮಹಾಲಿಂಗ ಜಂಗಮ ಪ್ರಸಾದನಿಯತರುಂ ಸಮಯಭಕ್ತಿ ಸಂಪನ್ನ ಶ್ರೀ ಬಸವರಾಜನಾನ್ವಯರುಂ' ಎಂದೂ ಹೇಳಿರುವುದರಿಂದ, ಈ ಬಸವ ರಾಜನೂ ಸಂಗನ ಬಸವನೂ ಎಂಬವನು ಬಸವೇಶ್ವರನೇ, ಅತಏವ ಇದರಲ್ಲಿ ವಿಸ್ತರಿಸಿರುವ ಪೀಳಿಗೆಯೂ ಆತನದೇ ಎಂದು ಬೇರೆ ಹೇಳಬೇಕೆಂದಿಲ್ಲ.

ಈ ಶಾಸನದಲ್ಲಿ (ಬಂ. ೩೮ – ೩೯) ಹಾಲ ಬಸವಿದೇವನನ್ನು

........................ಮಾನವ ದೇವಂ ।
ಗೆಲಿದಂ ಅಶನ ಬೆಸನವಂ
ಛಲರಧಿಕಂ ಹಾಲ ಬಸವಿದೇವ ಮುನೀಶಂ ॥

ಎಂದಿರುವಲ್ಲಿ ಅಶನ ಬೆಸನವನ್ನು ಗೆದ್ದಿರಲೂ ಮುನೀಶನೆಂದು ಕರೆಯಲ್ಪಡಲೂ ಬೇಕಾದರೆ ಆತನಿಗೆ ಆಗ್ಗ ೬೦ ರಷ್ಟಾದರೂ ಪ್ರಾಯವೆಂದೂ ಆತನು ತನ್ನ ತಂದೆಯ ಸು. ೨೫ ನೆಯ ವಯಸ್ಸಿನಲ್ಲಿ ಹುಟ್ಟಿರಬಹುದೆಂದೂ ಭಾವಿಸಿ, ಆತನ ಹಿಂದಣ ಪ್ರತ್ಯೇಕ ತಲೆಮಾರಿಗೂ ಹಾಗೆಯೇ ೨೫ ವರ್ಷಗಳಂತೆ ಎಡೆಬಿಟ್ಟು ಗಣಿಸಿದರೆ, ಹಾಲ ಬಸವಿದೇವನು ಕ್ರಿ. ಶ. ಸು. 1200 ರಲ್ಲಿಯೂ ಕಲಿದೇವನು ಸು. 1175 ರಲ್ಲಿಯೂ ಕಾ (?) ಪರಸನು ಸು. 1150 ರಲ್ಲಿಯೂ ದೇವರಾಜ ಮುನಿಪನು ಸು. 1125 ರಲ್ಲಿಯೂ ಹುಟ್ಟಿರುವಂತೆ ತೋರುವುದರಿಂದ, ದೇವರಾಜ ಮುನಿಪನ ತಮ್ಮನಾದ ಬಸವೇಶ್ವರನು ಕ್ರಿ. ಶ. ಸು. 1130 ರ ಆಚೀಚೆ ಹುಟ್ಟಿ 1200 ರೊಳಗೆ ಗತಿಸಿರಬೇಕೆಂದು ಕಂಡಿತವಾಗಿ ನಿಶ್ಚಯಿಸಬಹುದು.

ಕನ್ನಡ ಸಾಹಿತ್ಯದಲ್ಲಿ ಬಸವೇಶ್ವರನ ಚರಿತ್ರಾತ್ಮಕವಾದ ವೀರಶೈವರ ಬಸವ ರಾಜದೇವರ ರಗಳೆ, ಬಸವಪುರಾಣ, ಮಲಬಸವ ಚಾರಿತ್ರವೆಂಬ ಸಿಂಗಿರಾಜಪುರಾಣ ಹಾಗೂ ಜೈನರ ಬಿಜ್ಜಳರಾಯಚರಿತೆ ಮೊದಲಾದ ಗ್ರಂಥಗಳಲ್ಲಿ ಅವನ ಕಥೆ ಓರಂತೆ ಇಲ್ಲದೆ ಅನೇಕ ಸಂಗತಿಗಳಲ್ಲಿ ವ್ಯತ್ಯಾಸವೂ ಪರಸ್ಪರ ವಿರೋಧವೂ ಇದೆಯಾದರೂ,

ಅವನ ಸಮಸಾಮಯಿಕನಾದ ಹಾಗೂ ಅವನು ಓಲಗಿಸಿದ ಅರಸನ ಹೆಸರು ಬಿಜ್ಜಳನೆಂಬ ಮಟ್ಟಿಗೆ ಅವೆಲ್ಲವೂ ಒಮ್ಮತವಾಗಿವೆ. ಅದಲ್ಲದೆ ಬಸವೇಶ್ವರನ ವಚನಗಳ್ಲಿಯೇ[೧] ಪ್ರಾಸಂಗಿಕವಾಗಿ ದೊರೆವ

> ೧. ಭವಿ ಬಿಜ್ಜಳನ ಗದ್ದುಗೆಯ ಕೆಳಗೆ ಕುಳ್ಳಿರ್ದು
> ಓಲೈಸಿಹೆನೆಂದು ನುಡಿವರಯ್ಯ !
> ೨. ಬಿಜ್ಜಳನ ಭಂಡಾರ ಎನಗೇಕಯ್ಯ ?
> ೩. ಆನೀ ಬಿಜ್ಜಳಂಗಂಜುವೆನೆ ಅಯ್ಯ ?

ಎಂಬೀ ಮಾತುಗಳಿಂದ, ಗದ್ದುಗೆ ಎಂಬ ಸಂಕೇತದಿಂದ ರಾಜನೆಂದು ತಿಳಿವ ಬಿಜ್ಜಳನೆಂಬ ಅರಸನನ್ನು ಬಸವೇಶ್ವರನು ಓಲಗಿಸಿರಬೇಕೆಂದೂ ಆ ಬಿಜ್ಜಳನನ್ನು ಭವಿ ಎಂದುದರಿಂದ ಅವನು ವೀರಶೈವನಲ್ಲವೆಂದೂ ಆತನ ಭಂಡಾರ ತನಗೇಕೆ? ಎಂದು ಉಪೇಕ್ಷಿಸಿರುವುದರಿಂದ ಬಸವೇಶ್ವರನು ಪ್ರಾಯಶಃ ಆತನ ಭಂಡಾರದ ಉದ್ಯೋಗದಲ್ಲಿ ಇದ್ದನೆಂದೂ ತಾನು ಅವನಿಗೆ ಅಂಜುವೆನೆ? ಎಂದು ತಿರಸ್ಕರಿಸಿರುವುದರಿಂದ ಅವರೊಳಗೆ ಕೊನೆಗೆ ವೈಮನಸ್ಯ ಉಂಟಾಗಿರಬೇಕೆಂದೂ ವ್ಯಕ್ತವಾಗುವುದರಿಂದ, ಬಸವೇಶ್ವರನು ಓಲಗಿಸಿದ ಅರಸನ ಹೆಸರು ಬಿಜ್ಜಳನೆಂಬಲ್ಲಿ ಸಂದೇಹವಿಲ್ಲ.

ಬಸವೇಶ್ವರನು ಇದ್ದ ಕ್ರಿ. ಶ. 1130 – 1200 ರೊಳಗೆ ಬಿಜ್ಜಳ ಎಂಬ ಹೆಸರಿನ ಒಬ್ಬನಲ್ಲ, ಇಬ್ಬರರಸರು ಕರ್ಣಾಟಕದಲ್ಲಿ ಆಗಿಹೋದರು— ಕಳಚುರ್ಯ ವಂಶದ ಬಿಜ್ಜಳ ಮತ್ತು ಅವನ ದೌಹಿತ್ರನಾದ ( ಬಡಗಣ ) ಸಿಂದ ವಂಶದ ಬಿಜ್ಜಳ. ಇವರಿಬ್ಬರೇ ಇದ್ದ ಅರಸ ಬಿಜ್ಜಳರಲ್ಲಿ ಬಸವೇಶ್ವರನ ಬಿಜ್ಜಳನು ಯಾವಾತನೆಂದು ನಿಶ್ಚಯಿಸಬೇಕು. ಇವರನ್ನು ಕುರಿತು ಐತಿಹಾಸಿಕ ವಿವರವು ಹೀಗಿದೆ.

ಕಳಚುರ್ಯ ಪೆರ್ಮಾಡಿ
|
ಕಳಚುರ್ಯ ಬಿಜ್ಜಳ
|

| | | | | | | |
|---|---|---|---|---|---|---|
| ಸೋಮೇಶ್ವರ ಅಥವಾ ರಾಯಮುರಾರಿ ಸೋವಿದೇವ ( ಸೋಯಿದೇವ ) | ಸಂಕಮ | ಆಹವಮಲ್ಲ | ಸಿಂಘಣ | ವಜ್ರದೇವ | ಸಿರಿಯಾದೇವಿ | +II ಸಿಂದ ಚಾವುಂಡ |
| | | | | | ಸಿಂದ ಬಿಜ್ಜಳ | |

ಕ್ರಿ. ಶ. 1128 ನೆಯ ಇಂಗಳೇಶ್ವರದ ಶಾಸನದಿಂದ[೨] ಕಳಚುರ್ಯ ವಂಶದ ಪೆರ್ಮಾಡಿ ಎಂಬವನು ಕಲ್ಯಾಣದ ಪಡುವಣ ಚಾಳುಕ್ಯ ಸಮ್ರಾಜನಾದ ಭೂಲೋಕ

೧. ಪು. ೧೧೪; ೧೧೦; ೧೧೮.

೨. Fleet's Kanarese Dynasties ( FKD ), ಪು. 470.

ಮಲ್ಲ III ಸೋಮೇಶ್ವರನ (1126 - 37) ಕೈಯ್ಕೆಳಗೆ ತರ್ದವಾಡಿಯ ಮಹಾ ಮಂಡಳೇಶ್ವರನಾಗಿದ್ದನೆಂದೂ ಚಾಳುಕ್ಯ ತ್ರೈಲೋಕ್ಯಮಲ್ಲ (ನೂರ್ಮಡಿ) III ತೈಲನ ಆಳಿಕೆಯ (1149 - 63) ೩ ನೆಯ ವರ್ಷದ ಕ್ರಿ. ಶ. 1151 ನೆಯ ವಿಜಾಪುರದ ಶಾಸನದಿಂದ[೧] ಪೆರ್ಮಾಡಿಯ ಮಗನಾದ ಕಳಚುರ್ಯ ಬಿಜ್ಜಳನು III ತೈಲನ ಮಹಾಮಂಡಳೇಶ್ವರನಾಗಿದ್ದು ತರ್ದವಾಡಿ ೧೦೦೦ ಸೀಮೆ ಆತನ ಹಿಡುವಳಿಯಲ್ಲಿ ಇದ್ದಿತೆಂದೂ III ತೈಲನ ಆಳಿಕೆಯ ಶಕಸಂಖ್ಯೆಯೂ ಸಂವತ್ಸರದ ಹೆಸರೂ ಸವೆದುಹೋಗಿ ಮಾರ್ಗಶಿರದಮಾವಾಸ್ಯೆ ಸೋಮವಾರ ಸೂರ್ಯಗ್ರಹಣ ಎಂದಷ್ಟೇ ಇರುವ, ಅಂದರೆ ಕ್ರಿ. ಶ. 1155 ನವಂಬರ 26 ಮಾರ್ಗಶಿರ ಬಹುಳ ಅಮಾವಾಸ್ಯೆ ಶನಿವಾರದ ಸೂರ್ಯಗ್ರಹಣದಂದಿನ ಶಿಕಾರಿಪುರ 108 ನೆಯ ಶಾಸನ ದಿಂದಲೂ[೨] ಬಿಜ್ಜಳನು III ತೈಲನ ಮಹಾಮಂಡಳೇಶ್ವರನಾಗಿದ್ದು ಬನವಾಸಿ ೧೨೦೦೦ ಆತನ ರಾಜ್ಯದಲ್ಲಿ ಇದ್ದಿತೆಂದೂ ತಿಳಿಯುವುದರಿಂದ, ತನ್ನ ತಂದೆಯಾದ ಪೆರ್ಮಾಡಿಯ ಬಳಿಕ ಬಿಜ್ಜಳನು ಕ್ರಿ. ಶ. 1140 - 45 ರಿಂದಲೆ ಚಾಳುಕ್ಯರ ಮಹಾಮಂಡಳೇಶ್ವರನಾಗಿರಬೇಕು. ಶಾ. ಶ. ೧೦೬೯ = ಕ್ರಿ. ಶ. 1147 ರ ಮಾಸ ವಾಡದ ಶಿಲಾಲೇಖದಿಂದ[೩] ಬಿಜ್ಜಳನ ಸ್ಥಿರಶಿಬಿರ, ಅಂದರೆ ರಾಜಧಾನಿ, ಮಂಗಳ ವಾಡ ಎಂದು ತಿಳಿಯುತ್ತದೆ. III ತೈಲನ ಆಳಿಕೆಯ ೬ ನೆಯ ವರ್ಷದ ಯುವ ಸಂ| ಮಾಘದಮಾವಾಸ್ಯೆ ಉತ್ತರಾಯಣ ಸಂಕ್ರಾಂತಿ ಸೋಮವಾರ, ಅಂದರೆ ಕ್ರಿ. ಶ. 1155 ದಶಂಬರ 26 ಸೋಮವಾರದ (= ಮಾಘ ಶುದ್ಧ ಪಾಡ್ಯ ಮಕರ ಸಂಕ್ರಾಂತಿ), ಅಥವಾ 1156 ಜನವರಿ 23 ಸೋಮವಾರದ (= ಮಾಘ ಬಹುಳ ಅಮಾವಾಸ್ಯೆ ಕುಂಭ ಸಂಕ್ರಾಂತಿ) ಶಿಕಾರಿಪುರ 104 ನೆಯ ಶಾಸನದಲ್ಲಿ[೪] ಆತನ ಮಹಾಮಂಡಳೇಶ್ವರನಾದ ಬಿಜ್ಜಳನು 'ಸಕಳ ದೇಶಂಗಳಂ........ ಆಳುತ್ತಮಿರೆ' (ಬಂ. ೧೧) ಎಂದಿರುವುದರಿಂದ ಆಗ್ಗೆ ಬಿಜ್ಜಳನು III ತೈಲನ ರಾಜ್ಯಭಾರದಲ್ಲಿ ಹೆಚ್ಚುಕಡಿಮೆ ಆತನ ಸರ್ವಾಧಿಕಾರಿಯಂತಿರಬೇಕು.

---

೧. Fleet's Kanarese Dynasties (FKD). ಪು. 472.

೨. EC, VII. ಕ್ರಿ ಶ. 1155 ನವಂಬರ 26 ರ ಆಚೆ 1107 ರ ವರೆಗೆ ಮಾರ್ಗಶಿರ ಬಹುಳ ಅಮಾವಾಸ್ಯೆಯಂದೂ 1137 ರ ವರೆಗೆ ಕಾರ್ತಿಕ ಬಹುಳ ಅಮಾವಾಸ್ಯೆಯಂದೂ ಸೂರ್ಯಗ್ರಹಣವಿದ್ದಿಲ್ಲ; ಆದರ ಈಚೆ 1164 ನವಂಬರ 16 ಸೋಮವಾರ ಕಾರ್ತಿಕ ಬಹುಳ ಅಮಾವಾಸ್ಯೆಯಂದೂ 1174 ನವಂಬರ 25 ಸೋಮವಾರ ಮಾರ್ಗಶಿರ ಬಹುಳ ಅಮಾವಾಸ್ಯೆ ಯಂದೂ ಸೂರ್ಯಗ್ರಹಣಗಳು ಇದ್ದುವಾದರೂ ಇವೆರಡೂ ವರ್ಷಗಳು III ತೈಲನ ಆಳೊ ತ್ತನ್ನು ಮೀರುವದರಿಂದ, ಆ ಗ್ರಹಣಗಳು ಇಲ್ಲಿ ಸಲ್ಲವು.

೩. ಹರಿಹರದೇವ (ಕೊಲ್ಹಾಪುರದ ರಾಜಾರಾಮ ಕಾಲೇಜಿನ ಕರ್ಣಾಟಕ ಸಂಘದವರ ಪ್ರಕಟನೆ). ಪು. ೪೪. ೪. EC, VII.

ಆ ಮೇಲೆ ಬಿಜ್ಜಳನು ಕಳಚುರ್ಯವರ್ಷವೆಂಬ ತನ್ನದೇ ಒಂದು ಕಾಲಮಾನವನ್ನು ಆರಂಭಿಸಿದನು. ಈಶ್ವರ ಸಂ| ಉತ್ತರಾಯಣ = ಕ್ರಿ. ಶ. 1157 ದಶಂಬರದ ಅಣ್ಣಿಗೆರಿಯ ಶಾಸನದಲ್ಲಿ[೧] ಆ ಸಂವತ್ಸರವನ್ನು ಈ ಕಾಲಮಾನದ ೨ನೆಯ ವರ್ಷವೆಂದಿರುವುದರಿಂದ, ಇದು ಕ್ರಿ. ಶ. 1156 ನೆಯ ಧಾತೃಸಂವತ್ಸರದಲ್ಲಿ ಮೊದಲಾಗಿರಬೇಕು. ಈ ಶಾಸನದಲ್ಲಿ ಬಿಜ್ಜಳನನ್ನು ತ್ರಿಭುವನಮಲ್ಲ ಎಂದೂ ಭುಜಬಲ ಚಕ್ರವರ್ತಿ ಎಂದೂ ಅದರೊಂದಿಗೆ ಮಹಾಮಂಡಳೇಶ್ವರನೆಂದೂ ಹೇಳಿದೆ. ಕ್ರಿ. ಶ. 1156-57ರ ಹುಲಗೂರು ಹಾಗೂ ಹಾವೇರಿಯ ಶಾಸನಗಳಿಂದ[೨] ಈಚೆಯವಲ್ಲಿ III ತೈಲನ ಇತರ ಮಹಾಮಂಡಳೇಶ್ವರರ ಹೆಸರಿವೆಯಾದರೂ ಆತನ ಚಕ್ರವರ್ತಿತ್ವವು ಅಷ್ಟು ದ್ಯೋತಕವಾಗಿಲ್ಲ. ಶಾ. ಶ. ೧೧೮೦ ಬಹುಧಾನ್ಯ ಸಂ| = ಕ್ರಿ. ಶ. 1158 ರ ಶಿಕಾರಿಪುರ 123 ನೆಯ ಶಾಸನದಲ್ಲಿ[೩] ಚಾಳುಕ್ಯ III ತೈಲನ ಹೆಸರಿದೆಯಾದರೂ ( ಬಂ. ೧೩ ) ಆತನಿಗೂ ಬಿಜ್ಜಳನಿಗೂ ಇದ್ದ ಪರಸ್ಪರ ಸಂಬಂಧವನ್ನು ಹೇಳಿಲ್ಲ ಮಾತ್ರವಲ್ಲ, ಬಿಜ್ಜಳನನ್ನು ಮಹಾಮಂಡಲೇಶ್ವರನೆನ್ನದೆ ಮಹಾರಾಜಾಧಿರಾಜನೆಂದೂ ( ಬಂ. ೧೫ ) ಭುಜಬಳ ಚಕ್ರವರ್ತಿ ತ್ರಿಭುವನಮಲ್ಲ ಬಿಜ್ಜಲದೇವರಸನೆಂದೂ ( ಬಂ ೧೭ ) ಹೇಳಿದೆ. ಶಾ. ಶ. ೧೦೮೧ ಬಹುಧಾನ್ಯ ಸಂ| ಭಾದ್ರಪದದಮಾವಾಸ್ಯೆ ಸೂರ್ಯಗ್ರಹಣ=ಕ್ರಿ. ಶ. 1160 ಸಪ್ತಂಬರ 2 ಶುಕ್ರವಾರ ಸೂರ್ಯಗ್ರಹಣದಂದಿನ ಶಿಕಾರಿಪುರ 18 ನೆಯ ಶಾಸನದಲ್ಲಿ[೩] III ತೈಲನನ್ನು ಹೆಸರಿಸದೆ, ಬಿಜ್ಜಳನನ್ನು ಮಹಾಮಂಡಳೇಶ್ವರನೆಂದೂ ಭುಜಬಳ ಚಕ್ರವರ್ತಿ ತ್ರಿಭುವನಮಲ್ಲ ಬಿಜ್ಜಣದೇವರಸನೆಂದೂ ಹೇಳಿದೆ. ಹಾಗೆಯೇ ಬಿಜ್ಜಳನ ೬ ನೆಯ ವರ್ಷದ ವಿಷು ಸಂ| ಪುಷ್ಯಮಾಸದಮಾವಾಸ್ಯೆ ಸೂರ್ಯಗ್ರಹಣ = ಕ್ರಿ. ಶ 1162 ಜನವರಿ 17 ಬುಧವಾರ ಸೂರ್ಯಗ್ರಹಣದಂದಿನ ಶಿಕಾರಿಪುರ 102 ನೆಯ. ಶಾಸನದಲ್ಲಿ[೩] ಚಾಳುಕ್ಯ III ತೈಲನ ಹೆಸರು ಇಲ್ಲದೆ ಬಿಜ್ಜಳನನ್ನು ಮಹಾಮಂಡಳೇಶ್ವರ ಭುಜಬಲ ಚಕ್ರವರ್ತಿ ತ್ರಿಭುವನಮಲ್ಲ ಬಿಜ್ಜಲದೇವರಸನೆಂದದೆ. ಆ ಮೇಲಣ ಚಿತ್ರಭಾನು ಸಂ। ಪೌಷ ಕೃಷ್ಣ ೨ ಸೋಮವಾರ ಉತ್ತರಾಯಣ ಸಂಕ್ರಾಂತಿ = ಕ್ರಿ. ಶ. 1162 ದಶಂಬರ 24 ರ ಹೂಲಿಯ ಶಾಸನದಲ್ಲಿ[೪] III ತೈಲನ ಹೆಸರೆತ್ತದೆ, ಬಿಜ್ಜಳನನ್ನು ಮಹಾಮಂಡಳೇಶ್ವರನೆನ್ನದೆ ಮಹಾರಾಜಾಧಿರಾಜ ಪರಮೇಶ್ವರ ಎಂದು ಹೇಳಿದೆ. ಇವಲ್ಲಿಯ ಶಿಕಾರಿಪುರ 123 ರಲ್ಲಿಯೂ ( ಬಂ. ೧೪ ) ಹಾಗೆಯೇ III ತೈಲನ ಹೆಸರೂ ಬಿಜ್ಜಳ ಕ್ಷೋಣಿಪಾಲನ ಹೆಸರೂ ( ಬಂ. ೨೫ ) ಇದ್ದು ಅವರೊಳಗಣ ಸಂಬಂಧವನ್ನಾಗಲಿ ಬಿಜ್ಜಳನನ್ನು ಮಹಾಮಂಡಳೇಶ್ವರನೆಂದಾಗಲಿ ಹೇಳದ ದಾವಣಗೆರೆ 35 ರಲ್ಲಿಯೂ[೫] ( ಬಂ. ೨೮-೨೯ )

---

೧. FKD, . 474. ೨ಪು. ಅದೇ, ಪು. 461 ೩. EC, VII ೪. FKD, 475
೫. EC, XI

ಪುಸಿಯಲ್ಲು ವೀರಭೋಜ್ಯಾ
ವಸುಂಧರಾಯೆಂಬ ವಾಕ್ಯವೆನೆ ಧರೆಯಂ ಸಾ ।
ಧಿಸಿದಂ ತೆಂಕಬ್ಧಿಯ ಬಡ
ಗ ಸೀಮೆ ಚಾಳುಕ್ಯ ಕಟಕವೆನೆ ಬಿಜ್ಜ ನೃಪಂ ॥

ಎಂದಿರುವಲ್ಲಿ ತೆಂಕಲಲ್ಲಿ ಪಶ್ಚಿಮ ಸಮುದ್ರಕ್ಕೂ, ಬಡಗಲಲ್ಲಿ ಚಾಳುಕ್ಯರ ರಾಜಧಾನಿಗೂ ನಡುವಣ ಸೀಮೆಯೆಂದರೆ ಪ್ರತ್ಯಕ್ಷತಃ ಚಾಳುಕ್ಯರ ಸಾಮ್ರಾಜ್ಯದಲ್ಲಿ ಒಳಪಟ್ಟ ಸೀಮೆ ಎಂದು ತಿಳಿಯುವುದರಿಂದ, ಬಿಜ್ಜಳನು ಅದನ್ನು ಚಾಳುಕ್ಯ ಸಾಮ್ರಾಜ್ಯದಿಂದ ತಾನೆ ಸಾಧಿಸಿಕೊಂಡಿರಬೇಕು. ಅತಏವ ಅನುಮಕೊಂಡದ ಶಾಸನದಿಂದ[೧] ತಿಳಿವ ಮೇರೆಗೆ ಕ್ರಿ. ಶ. ಸು. 1155 ರಲ್ಲಿ ಕಾಕತೀಯ ವಂಶದ II ಪ್ರೋಲ (1117-63) ನಿಂದ[೨] ಸೋಲಿಸಲ್ಪಟ್ಟ ಚಾಳುಕ್ಯ III ತೈಲನು ಆ ಅಪಜಯದಿಂದ ಬಲಗುಂದಿದ್ದಾಗ ಆತನ ಸರ್ವಾಧಿಕಾರಿಯಾದ ಬಿಜ್ಜಳನು ಆ ಸುಸಂಧಿಯನ್ನು ಸಾಧಿಸಿ ತನ್ನ ಒಡೆಯನಿಗೆ ದ್ರೋಹವೆಣಿಸಿ ಆತನ ಸೈನ್ಯವನ್ನೇ ಆತನಿಗೆ ಎದುರಾಯಿಸಿ ತನ್ನ ಸಂಪೂರ್ಣ ಸ್ವತಂತ್ರತೆಯನ್ನೂ ಆತನ ರಾಜ್ಯದ ಬಹುಭಾಗವನ್ನೂ ಸೆಳಕೊಂಡುದಲ್ಲದೆ, ಬಿಜ್ಜಳನ ಕಾಲಾನಂತರದ ಕ್ರಿ. ಶ. 1173 ನೆಯ ಹರಸೂರು ಮತ್ತು ಕಾಳಗಿಯ ಶಾಸನಗಳಿಂದ[೩] ತಿಳಿವ ಮೇರೆಗೆ, ಆ ಮೇಲೆ ಚಾಳುಕ್ಯರನ್ನು ಕಿತ್ತೊಗೆದು ಸಮಗ್ರ ಕುಂತಳದ ಚಕ್ರವರ್ತಿಯಾದನೆಂಬ ಬಿಜ್ಜಳನು ಕ್ರಿ. ಶ 1156 ರಿಂದ 1162 ರೊಳಗೆ ಚಾಳುಕ್ಯರಾಜ್ಯಾಪಹಾರವನ್ನು ಪೂರ್ತಿಗೊಳಿಸಿ III ತೈಲನ ಸಾಮ್ರಾಜ್ಯದಲ್ಲಿ ತನ್ನ ಒಡೆತನವನ್ನು ಸ್ಥಾಪಿಸಿರಬೇಕು. ಕ್ರಿ. ಶ. 1165 ನೆಯ ಬಾಳಂಬೀಡಿನ ಹಾಗೂ ಮಂತಗಿಯ ಶಾಸನಗಳಿಂದಲೂ[೪] ತೇದಿಯಿಲ್ಲದ ಸೊರಬ 346 ರಿಂದಲೂ[೫] ಬಿಜ್ಜಳನ ರಾಜಧಾನಿ ಕಲ್ಯಾಣವೆಂದು ತಿಳಿಯುವುದರಿಂದ ಬಿಜ್ಜಳನು ತಾನು ಚಕ್ರವರ್ತಿಯಾಗುತ್ತಲೇ, III ತೈಲನು ಕ್ರಿ. ಶ. 1163 ರವರೆಗೆ ಬದುಕಿದ್ದನಾದರೂ ಅವನ 1157 ರಿಂದ ಈಚೆಯ ಶಾಸನಗಳಲ್ಲಿ ಅವನ ರಾಜಧಾನಿ ಕಲ್ಯಾಣವೆನ್ನದೆ ಅದನ್ನು ಇತರತ್ರ ಹೇಳಿರುವುದರಿಂದ, 1162-63 ರಲ್ಲಿ ಆತನು ಕಲ್ಯಾಣವನ್ನು ಬಿಟ್ಟು ಹೋಗಿಯೋ ಅಥವಾ ಆತನನ್ನು ಅಲ್ಲಿಂದ ಹೊರಗಟ್ಟಿಯೋ ತನಗೆ ಕೈವರ್ತಿಸಿದ ಕಲ್ಯಾಣವನ್ನು ಬಿಜ್ಜಳನು ತನ್ನ ರಾಜಧಾನಿ ಮಾಡಿಕೊಂಡನು.

---

೧. FKD, ಪು. 462.
೨. Historical Inscriptions of South India, ಪು. 110; 355.
೩. FKD, ಪು 462, fn. 5.
೪. ಅದೇ, ಪು. 476 fn. 2
೫. EC, VIII.

ಕ್ರಿ. ಶ. 1165 ರ ಯಕ್ಸಂಬದ ಶಾಸನದಿಂದ[೧] ಬಿಜ್ಜಳನ ಮಹಾಪ್ರಧಾನನೂ ಸೇನಾಧಿಪತಿಯೂ ಆದ ಸಿದ್ಧಪಯ್ಯ ದಂಡನಾಯಕನೆಂಬವನು ಆಗ್ಗೆ ಬಿಜ್ಜಳನ ಕೆಯ್ಕೆಳಗೆ ಹಾನುಂಗಲ್ಲಿನ ಹೆಗ್ಗಡೆಯಾಗಿದ್ದನೆಂದೂ ಕ್ರಿ. ಶ. 1163 ರ ಪಟ್ಟದ ಕಲ್ಲಿನ ಶಾಸನದಲ್ಲಿ[೨] III ತೈಲನ ಮಹಾಮಂಡಳೇಶ್ವರನೆಂದಿರುವ (ಬಡಗಣ) ಸಿಂದ ವಂಶದ II ಚಾವುಂಡನು ಶಾ. ಶ. ೧೦೮೮ ವ್ಯಯ ಸಂ। ಪುಷ್ಯ ಮಾಸದಮಾವಾಸ್ಯೆ ಸೋಮವಾರ ಉತ್ತರಾಯಣ ಸಂಕ್ರಾಂತಿ, ಅಂದರೆ ಇದರಲ್ಲಿ ಹೇಳಿದ ಸಂಕ್ರಾಂತಿ ಸರಿಯಾದರೆ ಕ್ರಿ. ಶ. 1167 ಜನವರಿ 23 ಸೋಮವಾರ ಮಾಘ ಶುದ್ಧ ಪಾಡ್ಯ ಉತ್ತರಾಯಣದಲ್ಲಿಯ ಕುಂಭ ಸಂಕ್ರಾಂತಿಯಂದಿನ, ಅಥವಾ ಇದರಲ್ಲಿ ಹೇಳಿದ ಅಮಾವಾಸ್ಯೆ ಸರಿಯಾದರೆ ಕ್ರಿ. ಶ. 1166 ಜನವರಿ 3 ಸೋಮವಾರ ಉತ್ತರಾಯಣ ಆರಂಭಿಸುವ ಮಕರಮಾಸದಲ್ಲಿಯ ಪುಷ್ಯ ಬಹುಳ ಅಮಾವಾಸ್ಯೆಯಂದಿನ, ಬೆಣಚಮಟ್ಟಿಯ (A) ಶಾಸನದಿಂದ[೩] ಬಿಜ್ಜಳನ ಮಹಾಮಂಡಳೇಶ್ವರನಾಗಿದ್ದನೆಂದೂ ಐಹೊಳೆ, ರೋಣ ಹಾಗೂ ಸೂಡಿಯ ಶಾಸನಗಳಿಂದ[೪] ಈ II ಚಾವುಂಡನು ಬಿಜ್ಜಳನ ಮಗಳಾದ ಸಿರಿಯಾದೇವಿಯನ್ನು ಮದುವೆಯಾಗಿ ಅವಳಲ್ಲಿ ಆತನಿಗೆ ಬಿಜ್ಜಳನೆಂದೂ ವಿಕ್ರಮಾದಿತ್ಯನೆಂದೂ ಇಬ್ಬರು ಮಕ್ಕಳಿದ್ದರೆಂದೂ ತಿಳಿಯುತ್ತದೆ.

ಬಿಜ್ಜಳನ ಹೆಸರು ಬಿಜ್ಜಳ ಎಂದು ಮಾತ್ರವಲ್ಲ, ಬಿಜ್ಜಣ[೫] ಎಂದೂ ಬಿಜ್ಜ[೬] ಎಂದೂ ಶಾಸನಗಳಲ್ಲಿದೆ. ಇವಲ್ಲಿ ಬಿಜ್ಜ ಎಂಬುದು ವಿಜಯ ಎಂಬುದರ ತದ್ಭವ ಅಥವಾ ಪ್ರಾಕೃತರೂಪ ಎಂದು ಪ್ರತ್ಯಕ್ಷವಿದೆ. ಅದಕ್ಕೆ ಸ್ವಾರ್ಥದ ಅಥವಾ ವಾತ್ಸಲ್ಯಾರ್ಥದ ಅಲ=ಅಳ–ಅಣ ಪ್ರತ್ಯಯಗಳನ್ನು ಹಚ್ಚುತ್ತಲೆ ಬಿಜ್ಜಲ–ಬಿಜ್ಜಳ–ಬಿಜ್ಜಣ ಎಂದಾಗುತ್ತದೆ. (ಉದಾ. ವಿಷ್ಣು=ವಿಟ್ಟ+ಅಲ, ಅಳ= ವಿಟ್ಟಲ, ವಿಟ್ಟಳ; ಶಂಕರ = ಸಂಕ + ಅಣ = ಸಂಕಣ). ವಿಷ್ಣುವರ್ಧನ ಎಂಬ ಹೆಸರು ಸಣ್ಣಿಸಿ ವಿಷ್ಣು ಎಂದೂ ಅದು ತದ್ಭವಿಸಿ ಬಿಟ್ಟು (ಬಿಟ್ಟಿ) ಎಂದೂ ಆದುದಕ್ಕೆ ಇಗ–ಪ್ರತ್ಯಯವನ್ನು ಹಚ್ಚಿ ಬಿಟ್ಟಿಗ ಎಂದಾದ ಮೇರೆಗೆ, ಪ್ರಾಯಶಃ ವಿಜಯಾದಿತ್ಯ ಎಂದೇ ಇದ್ದ ಪೂರ್ಣನಾಮವು ಸಣ್ಣಿಸಿ ವಿಜಯ ಎಂದೂ ಅದು ತದ್ಭವಿಸಿ ಬಿಜ್ಜ ಎಂದೂ ಅಲ್ಲಿಂದ ಬಿಜ್ಜಲ – ಬಿಜ್ಜಳ – ಬಿಜ್ಜಣ ಎಂದೂ ಆಗಿರಬೇಕು.

ಶಿಕಾರಿಪುರ 92 ರಲ್ಲಿ[೭] 'ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾರಕ' (ಬಂ. ೪) 'ಶ್ರೀಮದ್ಭುಜಬಳ ಚಕ್ರವರ್ತಿ ತ್ರಿಭುವನಮಲ್ಲ ಬಿಜ್ಜಣದೇವಂ'

---

೧. FKD, ಪು. 476. f. n. 1. ೨. ಅದೇ ಪು. 46(; 575. ೩. EI XX, ಪು. 115-116. f. n. ೪. FKD, ಪು. 576. ೫. EC VIII, ಸೊರಬ, 6; 117; 277; 287; 372; 568. ೬. EC VII, ಶಿಕಾರಿಪುರ 123; EC XI ದಾವಣಗೆರೆ 35. ೭. EC VII.

(೮) ' ಇಂತದ್ವಿತೀಯ ಸ್ವಾಮಿತ್ವದಿಂ ವಸುಧಾವಳಯಮುಂ ಸುಖದಿನೇಕಚ್ಛತ್ರದಿಂ ರಾಜ್ಯಂಗೆಯ್ಯುತ್ತಿದ್ದಾತ್ಮರಾಜ್ಯಭರ ನಿರೂಪಣಂ[೧] ಮಾಡಿದಾ ಮಹಾರಾಜಪ್ರಿಯ ತನಯ ' (೧೧-೧೩) ' ರಾಯಮುರಾರಿ ಸೋವಿದೇವ ಚಕ್ರೇಶ್ವರಂ ' (೧೭) ಎಂದಿರುವುದರಿಂದ, ಕೊನೆಗೆ ಬಿಜ್ಜಳನು ತನ್ನ ರಾಜ್ಯಾಧಿಕಾರಕ್ಕೆ ತನ್ನ ಮಗನಾದ ರಾಯಮುರಾರಿ ಸೋವಿದೇವ ಅಥವಾ ಸೋಯಿದೇವನೆಂಬ ಸೋಮೇಶ್ವರನನ್ನು ನಿರೂಪಿಸಿ, ಅಂದರೆ ಆತನು ತನ್ನ ಉತ್ತರಾಧಿಕಾರಿ ಎಂದು ತೋರಿಸಿಕೊಟ್ಟು, ತನ್ನ ಅಧಿಕಾರವನ್ನು ಆತನಿಗೆ ಬಿಟ್ಟುಕೊಟ್ಟು ತಾನು ರಾಜ್ಯಭಾರದಿಂದ ನಿವೃತ್ತನಾದ ನೆಂದು ತಿಳಿಯುತ್ತದೆ. ಈ ಶಾಸನದ ತೇದಿ ಕಳಚುರ್ಯವರ್ಷದ ೧೭ ನೆಯ ಸರ್ವಧಾರಿ ಸಂ| ವೈಶಾಖ ಪೂರ್ಣಮಿ ಆದಿತ್ಯವಾರ ಚಂದ್ರಗ್ರಹಣ ಸಂಕ್ರಮಣ ಎಂದದೆ. ಕಳಚುರ್ಯ ವರ್ಷಗಣನೆಯನ್ನು ಸ್ವಯಂ ಬಿಜ್ಜಳನೇ ಕ್ರಿ. ಶ 1156 ನೆಯ ಧಾತೃ ಸಂವತ್ಸರದಲ್ಲಿ ಸ್ಥಾಪಿಸಿದ್ದನೆಂದು ಮೇಲೆ ಕಂಡಿರುವುದರಿಂದ, ಅಂದಿನಿಂದ ಅವನ ಆಳಿಕೆಯ ವರ್ಷಗಳ ಸಂಖ್ಯೆಯೂ ಆ ಕಾಲಮಾನದ ವರ್ಷಗಳ ಸಂಖ್ಯೆಯೂ ಒಂದೇ ಆಗುತ್ತದೆ ಮಾತ್ರವಲ್ಲ, ಆ ಮೇರೆಗೆ ಸರ್ವಧಾರಿ ಸಂವತ್ಸರವು ಆದರ ೧೩ನೆಯ ವರ್ಷವಾಗುತ್ತದೆ, ೧೭ ನೆಯದಲ್ಲ. ಯಲಿಸಿರೂರಿನ ಭೋಗೀಶ್ವರ ದೇವಾಲಯದಲ್ಲಿಯ ಬಿಜ್ಜಳನ ೧೨ ನೆಯ ವರ್ಷದ ಸರ್ವಜಿತು ಸಂ| ಆಶ್ವಯುಜ ಶುದ್ಧ ಹುಣ್ಣಿಮೆ ರವಿವಾರ ಚಂದ್ರಗ್ರಹಣ = ಕ್ರಿ. ಶ. 1167 ಸಪ್ಟಂಬರ 29 ಶುಕ್ರವಾರದ ರಾತ್ರಿಯ ಚಂದ್ರಗ್ರಹಣದಂದಿನ ( ಈ ಶಾಸನದಲ್ಲಿ ವಾರದ ಹೆಸರು ತಪ್ಪಿದೆ ) ಶಾಸನದಿಂದ[೨] ಸರ್ವಜಿತು ಸಂವತ್ಸರವು ಬಿಜ್ಜಳನ ಆಳಿಕೆಯ ೧೨ ನೆಯ ವರ್ಷ ಎಂದು ತಿಳಿವುದರಿಂದ, ಆ ಮೇಲಣದೇ ಸರ್ವಧಾರಿ ಸಂವತ್ಸರವು ಕಳಚುರ್ಯ ವರ್ಷದ ೧೩ ನೆಯ ಕ್ರಿ. ಶ. 1168 ಆಗಬೇಕು. ಶಿಕಾರಿಪುರ 92 ಕ್ಕೆ ಸರಿಯಾದ ತೇದಿಯನ್ನು ಗೊತ್ತುಹಚ್ಚುವಲ್ಲಿ ಡಾ| ಫ್ಲೀಟರು ( Dr. Fleet ) ಕ್ರಿ. ಶ. 1168 ಎಪ್ರೀಲ್ 24 ಎಂದಿರುತ್ತಾರೆ.[೩] ಇದು ಸರಿಯಲ್ಲ; ಏಕೆಂದರೆ ಆ ಎಪ್ರೀಲ್ 24ರಂದು ವೈಶಾಖ ಪೂರ್ಣಮಿಯ ತಿಥಿಯೂ ವೃಷಭ ಸಂಕ್ರಾಂತಿಯೂ ಇದ್ದುವಾದರೂ ಆ ಶಾಸನದ ತೇದಿಯ ಪ್ರಮುಖ ಅಂಗವಾದ ಚಂದ್ರಗ್ರಹಣವೂ ಅಂದು ಇದ್ದಿಲ್ಲ, ವಾರವೂ ಬುಧವಾರವಲ್ಲದೆ ಆದಿತ್ಯವಾರವಲ್ಲ. ಕ್ರಿ. ಶ. 1158 ರಿಂದ 1175 ರ ವರೆಗೆ ವೈಶಾಖ ಪೂರ್ಣಮಿಯಂದು ಗ್ರಹಣವಿದ್ದಿಲ್ಲದುದರಿಂದ, ಆ ಶಾಸನದಲ್ಲಿ ಆ ಗ್ರಹಣಕ್ಕೆ ಹೇಳಿದ ಮಾಸನಾಮದಲ್ಲಿ ತಪ್ಪಿದೆ ಎಂಬುದು ಕಂಡಿತ. ಆದಕಾರಣ

---

೧. ' ನಿರೂಪಣಂ ವಿಚಾರಾವಲೋಕನಯೋರ್ನಿದರ್ಶನೇ ॥ ' ( ಹೇಮಚಂದ್ರನ ಅನೇಕಾರ್ಥ ಸಂಗ್ರಹ, ಶ್ಲೋ. ೧೪೫೩ ) ೨. SIE ( Sup. ) 1927, ಪು. 5; ನಂ. 65.
೩. FKD, ಪು. 477.

ಆ ಸರ್ವಧಾರಿಯಲ್ಲಿ ವೈಶಾಖದ ಹಿಂದಣ ಇಲ್ಲವೆ ಮುಂದಣ ತಿಂಗಳ ಹುಣ್ಣಿಮೆ ಯಲ್ಲಾದರೂ ಗ್ರಹಣವಿತ್ತೇ ಎಂದು ನೋಡಿದರೆ, ಅದೇ ಸಂವತ್ಸರದ ಚೈತ್ರ ಶುಕ್ಲ ಹುಣ್ಣಿಮೆ ಆದಿತ್ಯವಾರ ಮೇಷ ಸಂಕ್ರಮಣ, ಅಂದರೆ ಕ್ರಿ. ಶ. 1168 ಮಾರ್ಚ 24 ಆದಿತ್ಯವಾರದ ರಾತ್ರಿಯಲ್ಲಿ ಚಂದ್ರಗ್ರಹಣವಿತ್ತು. ಅದೇ ಈ ಶಾಸನದ ನಿಷ್ಪಷ್ಟವಾದ ತೇದಿಯಾಗಿರಬೇಕು. ಇದರಲ್ಲಿ ( ಬಂ. ೧೭-೧೮ ) ' ರಾಯಮುರಾರಿ ಸೋವಿದೇವ ಚಕ್ರೇಶ್ವರಂ ಸಮಸ್ತಪ್ರಧಾನರಿಂ ಪರಿವೇಷ್ಟಿತನಾಗಿ ಸುಖಸಂಕಥಾ ವಿನೋದದಿಂ ರಾಜ್ಯಂಗೆಯ್ಯುತ್ತಮಿರ್ದ 'ನೆಂಬುದರಿಂದ, ಬಿಜ್ಜಳನು ಆ ಮುಂಚೆಯೆ ರಾಜ್ಯಾಧಿಕಾರದಿಂದ ನಿವೃತ್ತನಾಗಿ ಆಗ್ಗೆ ಅವನ ಮಗನಾದ ಸೋವಿದೇವನು ಸಮ್ರಾಜನಾಗಿ ಪಟ್ಟದಲ್ಲಿದ್ದನೆಂದು ತಿಳಿಯುತ್ತವೆ. ಲಕ್ಕುಂಡಿಯ ಜೈನಬಸದಿ ಯಲ್ಲಿಯ ಶಾ. ಶ. ೧೦೯೪ ನಂದನ ಸಂ| ಪುಷ್ಯ ಶುದ್ದ ಹುಣ್ಣಿಮೆ ಸೋಮವಾರ ಚಂದ್ರಗ್ರಹಣ = ಕ್ರಿ. ಶ. 1172 ದಶಂಬರ 31 ಆದಿತ್ಯವಾರ ರಾತ್ರಿಯ ಚಂದ್ರ ಗ್ರಹಣದ ಮಾರನೆಯ 1173 ಜನವರಿ 1 ಸೋಮವಾರದ ಶಾಸನವು[೧] ಸೋವಿ ದೇವನ ಆಳಿಕೆಯ ೬ ನೆಯ ವರ್ಷದ್ದೆಂದೂ ಅಲ್ಲಿಯ ಚಂದ್ರಮೌಳೀಶ್ವರ ದೇವಾಲ ಯದಲ್ಲಿಯ ಜಯ ಸಂ| ಮಾರ್ಗಶಿರ ಅಮಾವಾಸ್ಯೆ ಸೂರ್ಯಗ್ರಹಣ =ಕ್ರಿ. ಶ. 1174 ನವಂಬರ 24 ಸೋಮವಾರ ಸೂರ್ಯಗ್ರಹಣದಂದಿನ ಶಾಸನವು[೨] ಅವನ ೮ ನೆಯ ವರ್ಷದ್ದೆಂದೂ ಅವಲ್ಲಿ ಹೇಳಿರುವುದರಿಂದ, ಆತನು ಕ್ರಿ. ಶ. 1167 ನೆಯ ಸರ್ವಜಿತು ಸಂವತ್ಸರದಲ್ಲಿಯೇ ಪಟ್ಟವೇರಿರಬೇಕು, ಅಂದರೆ ಮೇಲೆ ಕಂಡಿರುವ ಯಲಿಸಿರೂರಿನ ಭೋಗೀಶ್ವರ ದೇವಾಲಯದಲ್ಲಿಯ ಸ್ವಯಂ ಬಿಜ್ಜಳನ ಆಳಿಕೆಯ ಶಾಸನದ ಕ್ರಿ. ಶ. 1167 ಸಪ್ತಂಬರ 29 ರ ಹಾಗೂ ಸೋವಿದೇವನ ಆಳಿಕೆಯ ಶಿಕಾರಿಪುರ 92ನೆಯ ಶಾಸನದ ಕ್ರಿ. ಶ. 1168 ಮಾರ್ಚ 24ರ ನಡುವೆ ಬಿಜ್ಜಳನು ರಾಜ್ಯಭಾರದಿಂದ ನಿವೃತ್ತನಾಗಿ ಸೋವಿದೇವನು ಪಟ್ಟಕ್ಕೆ ಬಂದಿರಬೇಕು. ಅತಏವ ಅದೇ 1168 ರ ಮಾರ್ಚ 24 ರ ಚಂದ್ರಗ್ರಹಣದಂದು ಬಿಜ್ಜಳನು ಕಲ್ಯಾಣದಲ್ಲಿ ಕೆಲ ಜೈನರಿಗೆ ದತ್ತಿಬಿಟ್ಟನೆಂದು ನದಿಹರಳಹಳ್ಳಿಯ ಶಾಸನದಲ್ಲಿ[೩] ಹೇಳಿರುವಲ್ಲಿ, ಆಗ್ಗೆ ಬಿಜ್ಜಳನು ಇನ್ನೂ ಅರಸನಾಗಿ ಕಲ್ಯಾಣದಲ್ಲಿ ಆಳುತ್ತಿದ್ದನೆಂದಲ್ಲ, ಆಗ್ಗೆಯೂ ಜೀವಂತನಾಗಿದ್ದನಷ್ಟೇ ಎಂದು ತಿಳಕೊಳ್ಳಬೇಕು.

ಶಾ. ಶ. ೧೦೯೩ ನಂದನ ಸಂ| ಚೈತ್ರ ಶುದ್ಧ ದಶಮಿ ಸೋಮವಾರ = ಕ್ರಿ. ಶ. 1172 ಮಾರ್ಚ 6 ಸೋಮವಾರದ ಸೊರಬ 389 ಗಲ್ಲಿಯೂ[೪] ತೇದಿ ಯಿಲ್ಲದ ಶಿಕಾರಿಪುರ 171 ರಲ್ಲಿಯೂ[೫] ಸೋವಿದೇವನ ನೆಲೆವೀಡು, ಅಂದರೆ

೧· SIE ( Sup. ) 1927, ಪು· 3, ನಂ· 30. ೨. ಅದೇ, ಪು 4, ನಂ· 41.
೩· SIE, 1935, ನಂ· 58. ೪. EC VIII· ೫ EC VII.

ರಾಜಧಾನಿ, ಕಲ್ಯಾಣವೆಂದೂ ಕ್ರಿ. ಶ. 1170 ರ ಕುಕ್ಕನೂರಿನ ಹಾಗೂ 1173 ರ ಕಾಳಿಗಿಯ ಶಾಸನಗಳಲ್ಲಿ[೧] ಮೊದೆಗನೂರು ಅವನ ನೆಲೆವೀಡೆಂದೂ ಶಕಸಂಖ್ಯೆಯೂ ಮಾಸನಾಮವೂ ಸವೆದು ಹೋಗಿ ವಿಜಯ .... ಬ .... ಅಮಾವಾಸ್ಯೆ ಸೋಮವಾರ, ಸೂರ್ಯಗ್ರಹಣ ಎಂದಿಷ್ಟೇ ಇರುವ, ಪ್ರಾಯಶಃ ಆ ವಿಜಯ ಸಂವತ್ಸರದ ಮಾರ್ಗಶಿರ ಬಹುಳ ಅಮವಾಸ್ಯೆ ಸೋಮವಾರದ, ಅಂದರೆ ಕ್ರಿ. ಶ. 1174 ನವಂಬರ 25 ಸೋಮವಾರ ಸೂರ್ಯಗ್ರಹಣದಂದಿನ, ಶಾಸನದಲ್ಲಿ[೨] ಅವನು ಮಂಗಳವಾಡದಲ್ಲಿ ಆಳುತ್ತಿದ್ದನೆಂದೂ ಭಿವಘಾಟದ ಶಾಸನದಲ್ಲಿ[೩] ಅವನು ಮಂಗಳವಾಡದ ಸ್ಥಿರ ಶಿಬಿರದಲ್ಲಿದ್ದನೆಂದೂ ಹೇಳಿರುವುದರಿಂದ, ಕಲ್ಯಾಣ ಮಾತ್ರವಲ್ಲ ಮೊದೆಗನೂರೂ ಮಂಗಳವಾಡವೂ ಅವನ ರಾಜಧಾನಿಗಳಾಗಿರಬೇಕು. ತೇದಿಯಿಲ್ಲದ ಹಾವೇರಿಯ ಒಂದು ಕಲ್ಲಿನಲ್ಲಿ[೪] ಸಿದ್ಧಪಯ್ಯನೆಂಬವನು ಸೋವಿದೇವನ ದಂಡನಾಯಕನಾಗಿದ್ದನೆಂದು ಹೇಳಿದೆ. ಈತನು ಬಿಜ್ಜಳನಲ್ಲಿಯೂ ದಂಡನಾಯಕನಾಗಿದ್ದನೆಂದು ಮೇಲೆ ಕಂಡಿರುವ ಸಿದ್ಧಪಯ್ಯನೆಂದೇ ತೋರುತ್ತದೆ.

ಕ್ರಿ. ಶ. 1177 ರಲ್ಲಿ ಸೋವಿದೇವನು ಕಾಲವಾದ ಮೇಲೆ ಅವನ ತಮ್ಮನಾದ ನಿಶ್ಶಂಕಮಲ್ಲ ಸಂಕಮನು ಆಳಿದನು. ಶಾ. ಶ. ೧೧೦೨ ಶಾರ್ವರಿ ವೈಶಾಖ ಶುದ್ಧ ೮ ಸೋಮವಾರ= ಕ್ರಿ. ಶ. 1179 ಎಪ್ರಿಲ್ 16 ಸೋಮವಾರದ ಹೊನ್ನಾಳಿ 50 ರಿಂದಲೂ[೫] ತೇದಿಯಿಲ್ಲದ ದಾವಣಗೆರೆ 44 ರಿಂದಲೂ[೬] ಕಲ್ಯಾಣವು ಸಂಕಮನ ನೆಲೆವೀಡೆಂದೂ ಕ್ರಿ. ಶ. 1178 ನೆಯ ಕುಕ್ಕನೂರಿನ[೭] ಶಾಸನದಿಂದ ಅವನ ನೆಲೆವೀಡು ಮೊದೆಗನೂರೆಂದೂ ತಿಳಿಯುವುದರಿಂದ, ಅವನಿಗೆ ಎರಡಾದರೂ ರಾಜಧಾನಿಗಳಿರಬೇಕು. ಕ್ರಿ. ಶ. 1181 ರಲ್ಲಿ ಸಂಕಮನ ಕಾಲಾನಂತರ ಅವನ ತಮ್ಮನಾದ ವೀರನಾರಾಯಣ ಆಹವಮಲ್ಲನು ಆಳಿದನು. ಶೋಭಕೃತು ಸಂ| ಆಷಾಢ ಬಹುಳ ಪಂಚಮಿ ಸೋಮವಾರ = ಕ್ರಿ. ಶ. 1183 ಜುಲಾಯಿ 11 ಸೋಮವಾರದ ಶಿಕಾರಿಪುರ 159 ನೆಯ ಶಾಸನವು[೮] ಆಹವಮಲ್ಲನ ಆಳಿಕೆಯ ಕೊನೆಯದೆಂದು ತೋರುತ್ತದೆ. ಕ್ರಿ. ಶ. 1183 ರಲ್ಲಿ ಆಹವಮಲ್ಲನು ಕಾಲವಾದ ತರುವಾಯ ಅವನ ತಮ್ಮ ಸಿಂಘಣನು[೯] ಆಳತೊಡಗಿದ ಕಿರುಗಾಲದಲ್ಲಿಯೇ ಆ ಮುಂಚೆ ಸೋವಿದೇವನ ಮಹಾಪ್ರಧಾನನೂ ಸೇನಾಧಿಪತಿಯೂ ಆಗಿದ್ದ[೧೦] ಬಮ್ಮಿದೇವರಸ ಅಥವಾ ವೀರಬಮ್ಮರಸ ದಣ್ಣಾಯಕನೆಂಬವನು ಈಗ ಕಲಚುರಿ

೧. FKD, ಪು. 485, f.n. 4. ೨. SIE, 1934, ನಂ. 160. ೩. ಹರಿಹರ ದೇವ, ಪು. ೪೪. ೪. SIE, 1933, (Appendix D) ಪು. 99, ನಂ. 79. ೫. EC VII. ೬. EC XI. ೭. FKD, ಪು. 487. ೮. EC VII. ೯. ಕ್ರಿ. ಶ. 1183 ಅಕ್ಟೋಬರ 18ನೆಯ ಬೇಹಟ್ಟಿಯ ಅದೊಂದೇ ಸಿಂಘಣನ ಶಾಸನವದೆ (FKD, ಪು. 489). ೧೦. SIE, 1930, App. E. ಪು. 65, ನಂ. 13.

ವಂಶದಾವಾನಲನೆಂದೂ ಚಾಳುಕ್ಯರಾಜ್ಯಪ್ರತಿಷ್ಠಾಪಕನೆಂದೂ ಮುಂದೆ ಬಂದು[೧] ಕಳಚುರ್ಯರ ಅರಸನಾದ ಸಿಂಘಣನನ್ನು ಕೆಳತಳ್ಳಿ ಚಾಳುಕ್ಯ III ತೈಲನ ಮಗನಾದ ತ್ರಿಭುವನಮಲ್ಲ IV ವೀರಸೋಮೇಶ್ವರನನ್ನು ಚಾಳುಕ್ಯ ಚಕ್ರವರ್ತಿ ಎಂಬ ಬಿರುದಿನೊಂದಿಗೆ ಕ್ರಿ. ಶ 1184 ರಲ್ಲಿ ಅವನ ಹಿರಿಯರ ಸಿಂಹಾಸನದಲ್ಲಿ ಕುಳ್ಳಿರಿಸುತ್ತಲೆ ಕಳಚುರ್ಯರ ಸಾಮ್ರಾಜ್ಯವು ವಿಧ್ವಸ್ತವಾಯಿತು.

ಚಾಳುಕ್ಯ IV ಸೋಮೇಶ್ವರನ ಕಾಲದ ಪ್ರಾಯಶಃ ಮೊತ್ತಮೊದಲನೆಯ ದೆಂದು ತೋರುವ, ಆತನ ಆಳಿಕೆಯ ೨ ನೆಯ ವರ್ಷದ ಕ್ರೋಧಿ ಸಂ| ಅಮಾವಾಸ್ಯೆ ಸೂರ್ಯಗ್ರಹಣ ಸಂಕ್ರಮಣದಂದಿನ, ಮಾಸನಾಮವೂ ವಾರದ ಹೆಸರೂ ಇಲ್ಲದ ಕ್ರಿ. ಶ. 1185 ಆಕ್ಟೋಬರ 25ರ ಸೂರ್ಯಗ್ರಹಣದಂದಿನ (ವೃಶ್ಚಿಕ ಸಂಕ್ರಮಣ= ಅಕ್ಟೋಬರ ತಾ. 27), ಅಣ್ಣಿಗೆರೆಯ ಶಾಸನದಿಂದ[೨] ಸೌಮ್ಯ ಸಂ| ಜೇಷ್ಠ ಶುದ್ಧ 2 ಸೌರಿ (=ಶನಿ) ವಾರ= ಕ್ರಿ. ಶ. 1188 ಎಪ್ರಿಲ್ 30 ರ ಸೊರಬ 179 ನೆಯ ಶಾಸನದ[೩] ವರೆಗಣ ಶಾಸನಗಳಿಂದ ತೋರುವ ಮೇರೆಗೆ ಆ ನಡುವೆ ಆತನ ಸಾಮ್ರಾಜ್ಯವು ಅಷ್ಟರ ಮಟ್ಟಿಗೆ ಕುಂದಿಲ್ಲವಾದರೂ ಆ ಮೇಲಣ ಕ್ರಿ. ಶ. 1189 ರ ಮುತ್ತಗೆಯ ಹಾಗೂ ಅಣ್ಣಿಗೆರೆಯ ಶಾಸನಗಳಿಂದ[೪] ದೇವಗಿರಿಯ ಯಾದವ ವಂಶದ ಭಿಲ್ಲಮನು (1187 – 1911) ಚಾಳುಕ್ಯ ರಾಜ್ಯದ ಬಡಗಣ ಮತ್ತು ಮೂಡಣ ಭಾಗಗಳನ್ನೂ ಕ್ರಿ. ಶ. 1192ರ ಗದುಗಿನ ಮತ್ತು ಬೆಳಗಾಮಿಯ ಶಾಸನಗಳಿಂದ[೪] ಹೊಯ್ಸಳ II ವೀರಬಲ್ಲಾಳನು (1173 – 1220) ಅದರ ತೆಂಕಣ ಭಾಗಗಳನ್ನೂ ಗೆದ್ದುಕೊಂಡರೆಂದು ತಿಳಿಯುವುದರಿಂದ, 1189 ರಿಂದ ಮುಂದೆ ಚಾಳುಕ್ಯರ ರಾಜ್ಯವು ದಿನೇ ದಿನೇ ಹ್ರಸ್ವವಾಗುತ್ತಲಿರಬೇಕು. IV ಸೋಮೇಶ್ವರನ ಆ ಮೇಲಣ ಶಾಸನಗಳು ಆತನ ರಾಜ್ಯದ ಬಡಗಲ್ಲಿ ದೊರೆ ಯದೆ ತೆಂಪಡುವಲಲ್ಲಿ ಮಾತ್ರ ಕೆಲವೇನೋ ದೊರೆಯುವುದರಿಂದ, ಅವುಗಳಲ್ಲಿ (ಉದಾ. ಮುಂದೆ ಕಾಣುವ ಕ್ರಿ. ಶ. 1198 ರ ಚಿತ್ರದುರ್ಗ 36) ಆತನಿಗೆ 'ಮಹಾರಾಜಾಧಿರಾಜ ರಾಜಪರಮೇಶ್ವರ ಪರಮಭಟ್ಟಾರಕ' ಎಂಬ ಚಕ್ರವರ್ತಿತ್ವದ ಬಿರುದನ್ನು ಹೇಳಿದೆಯಾದರೂ ಆತನು ಕ್ರಿ. ಶ. 1189 ರಿಂದ ಮುಂದೆ

---

೧. SIE, 1929, App. E. ಪು. 54, ನಂ. 207. ೨. SIE, App. E. ಪು. 54, ನಂ. 207. ಅಲ್ಲಿ (App. F. ಪು. 60) ಈ ತೇದಿಯನ್ನು ಕ್ರಿ. ಶ. 1184 ನವಂಬರ 5 ರ ಸೂರ್ಯಗ್ರಹಣಕ್ಕೆ ಹೊಂದಿಸಿದೆ. ಆದರೆ ಅದು ಆ ತಿಂಗಳ ಸಂಕ್ರಮಣಕ್ಕೆ ಶಾನೆ ದೂರವಾಗುವುದರಿಂದಲೂ 1184 ಅವನ ಆಳಿಕೆಯ ೨ನೆಯ ವರ್ಷವಾಗಲಾದುದರಿಂದಲೂ, ಅದನ್ನು ವಿಸರ್ಜಿಸಿ ಮಾರನೆಯ ವರ್ಷದಲ್ಲಿ (1185) ಸಂಕ್ರಮಣಕ್ಕೆ (ಅಕ್ಟೋಬರ 27) ಸಮೀಪವಾದ ಸೂರ್ಯಗ್ರಹಣವನ್ನು ಇಲ್ಲಿ ಆಯ್ದುಕೊಂಡಿದೆ. ೩. EC VIII. ೪. FKD, ಪು. 466.

ಹೆಸರಿಗಷ್ಟೇ ಚಕ್ರವರ್ತಿಯಾಗಿದ್ದು ತನ್ನ ರಾಜ್ಯದ ತೆಂಪಡುವಣ ಕೆಲವು ಸೀಮೆಗಳನ್ನಷ್ಟೇ ಆಳುತ್ತಿದ್ದನು. ಆತನ ಕಟ್ಟಕಡೆಯದಾದ ಶಾ. ಶ. ೧೧೨೧ ಕಾಳಯುಕ್ತ ಸಂ| ಮಾಘ ಶುದ್ಧ ಪಾಡ್ಯ ಸೋಮವಾರ ಸೂರ್ಯಗ್ರಹಣದಂದಿನ, ಅಂದರೆ ಕ್ರಿ. ಶ. 1181 ರಿಂದ 1227 ರ ವರೆಗೆ ಪುಷ್ಯ ಬಹುಳ ಅಮಾವಾಸ್ಯೆಯಂದು ಗ್ರಹಣವಿದ್ದಿಲ್ಲದುದರಿಂದ, ಕ್ರಿ. ಶ. 1198 ಫೆಬ್ರುವರಿ 8 ಆದಿತ್ಯವಾರ ಮಾಘ ಬಹುಳ ಅಮಾವಾಸ್ಯೆಯ ಸೂರ್ಯಗ್ರಹಣದ ಮಾರನೆಯ ಫೆಬ್ರುವರಿ 9 ಫಾಲ್ಗುಣ ಶುದ್ಧ ಪಾಡ್ಯ ಸೋಮವಾರದಂದಿನ ಚಿತ್ರದುರ್ಗ 36 ನೆಯ ಶಾಸನದಲ್ಲಿ[೧] ಆತನ ನೆಲೆವೀಡು ಜಯಂತೀಪುರ, ಅಂದರೆ ಬನವಾಸಿ, ಎಂದಿರುವುದರಿಂದ, ಪ್ರಾಯಶಃ ಆ ಮುಂಚಿನಿಂದಲೆ ಬನವಾಸಿ ಆತನ ರಾಜಧಾನಿಯಾಗಿರಬೇಕು. ಇದರ ಬಳಿಕ ಆತನ ಶಾಸನವೂ ಇಲ್ಲ, ಆತನ ಬಳಿಕ ಚಾಳುಕ್ಯರ ರಾಜ್ಯವೂ ಇಲ್ಲ.

IV ಸೋಮೇಶ್ವರನ ಶಾಸನಗಳಿಂದ ಅವನ ಮೊತ್ತಮೊದಲಿನ ರಾಜಧಾನಿ ಧಾರವಾಡ ಜಿಲ್ಲೆಯ ಅಣ್ಣಿಗೆರೆ ಎಂದು ತಿಳಿಯುತ್ತದೆ[೨]. ಕ್ರಿ. ಶ. 1185ರ ಪ್ರಾಯಶಃ ಅದೊಂದು ಶಾಸನದಲ್ಲೇನೋ[೨] ಅವನು ಕಲ್ಯಾಣದ ನೆಲೆವೀಡಿನಲ್ಲಿ ಇದ್ದನೆಂದರೂ ಶಾ. ಶ. ೧೧೦೮ ಪ್ಲವಂಗ ಸಂ| ಆಶ್ವಯುಜ ಪೂರ್ಣಮಿ ೭ ವಾರ ( = ಶನಿವಾರ) ಚಂದ್ರಗ್ರಹಣ = ಕ್ರಿ. ಶ. 1187 ಸಪ್ಟಂಬರ 18 ಶುಕ್ರವಾರದ ರಾತ್ರಿಯ ಚಂದ್ರಗ್ರಹಣದ ಮಾರನೆಯ ಸಪ್ಟಂಬರ 19 ಶನಿವಾರದಂದಿನ ಚಿತ್ರದುರ್ಗ 33 ನೆಯ ಶಾಸನದಲ್ಲಿಯೂ[೩] ಮೇಲೆ ಕಂಡಿರುವ ಕ್ರಿ. ಶ. 1198 ನೆಯ ಫೆಬ್ರವರಿ 9 ರ ಚಿತ್ರದುರ್ಗ 36ನೆಯ ಶಾಸನದಲ್ಲಿಯೂ ಜಯಂತೀಪುರವೆಂಬ ಬನವಾಸಿಯನ್ನು ಅವನ ನೆಲೆವೀಡು ಎಂದಿರುವುದರಿಂದ, ಪ್ರಾಯಶಃ 1187 ರಿಂದಲೆ ಬನವಾಸಿ ಅವನ ರಾಜಧಾನಿಯಾಗಿರಬೇಕು. ಹೇಗೂ ಕಲ್ಯಾಣವು ಅವನ ರಾಜಧಾನಿಯಾಗಿತ್ತಾದರೆ ಹೆಚ್ಚಾದರೆ ಒಂದೆರಡು ( 1185–86 ) ವರ್ಷಗಳಿಗಷ್ಟೇ. ಅತಏವ ಚಾಳುಕ್ಯ ಸಾಮ್ರಾಜ್ಯವನ್ನು ಇತ್ತಣಿಂದ ಒಬ್ಬ ಅತ್ತಣಿಂದ ಒಬ್ಬನಂತೆ ಬಾಚಿ ಹರಿಹಂಚಿಕೊಂಡ II ವೀರಬಲ್ಲಾಳನಾಗಲಿ ಹೇಮಾದ್ರಿಯ ವ್ರತಖಂಡದಿಂದ[೪] ' ಕಲ್ಯಾಣ ಶ್ರಿಯಮಪ್ಯವಾಪ್ಯ ' ಎಂದು ತಿಳಿವ ಭಿಲ್ಲಮನಾಗಲಿ ಕಲ್ಯಾಣವನ್ನು ತಮ್ಮ ರಾಜಧಾನಿ ಮಾಡಿಕೊಂಡಿಲ್ಲದುದರಿಂದ, ಪಡುವಣ ಚಾಳುಕ್ಯ ಆಹವಮಲ್ಲ ತ್ರೈಲೋಕ್ಯಮಲ್ಲ I ಸೋಮೇಶ್ವರನಿಂದ(1042-1068,[೫] ತ್ರೈಲೋಕ್ಯಮಲ್ಲ ನೂರ್ಮಡಿ III ತೈಲನ (1149–63)ವರೆಗೆ ಆ ಚಾಳುಕ್ಯರ ರಾಜಧಾನಿಯೂ

---

೧. EC, XI. ೨. FKD, ಪು. 465, f.n. 6. ೩. EC, XI. ೪. Bhandarkar's Early History of the Dekkan (EHD), 1928; Appendix C, ಪು. 243. ೫. FKD, ಪು. 427–28.

ಆಮೇಲೆ ಕಳಚುರ್ಯರ ರಾಜಧಾನಿಯೂ ಆಗಿದ್ದ ಕಲ್ಯಾಣದ ದೀರ್ಘಸೌಭಾಗ್ಯಕ್ಕೆ ಚಾಳುಕ್ಯ IV ಸೋಮೇಶ್ವರನ ರಾಜ್ಯವು ಅಳಿದಂದಿನಿಂದಲೂ ಅಲ್ಲ, ಆತನು ತನ್ನ ರಾಜಧಾನಿಯನ್ನು ಇತರತ್ರ ಒಯ್ದಂದಿನಿಂದಲೂ ಅಲ್ಲ, ಕಳಚುರ್ಯ ಸೋವಿದೇವನೂ ಅವನ ತಮ್ಮಂದಿರೂ ಕಲ್ಯಾಣದಲ್ಲಿ ಅಷ್ಟು ಆಸ್ಥೆಯಿಲ್ಲದೇನೋ, ತಮ್ಮ ರಾಜಧಾನಿಗಳನ್ನು ಅನ್ಯತ್ರವೂ ಇರಿಸಿದಂದಿನಿಂದ, ಹೇಗೂ ಕಳಚುರ್ಯರ ಉತ್ಪಾಟನವಾದಂದಿನಿಂದ, ಇಳಿಗಾಲಾಗಿರಬೇಕು; ಭಿಲ್ಲಮನು ಕಲ್ಯಾಣವನ್ನು ಕೊಂಡಂದಿನಿಂದ ಅದರ ಜೀವಕಳೆಗೆ ಇತಿಶ್ರೀಯಾಗಿರಬೇಕು.




ಕಿಸುಕಾಡು ೭೦, ಬಾಗೆ ಅಥವಾ ಬಾಗಡಗೆ ೭೦, ಕೆಳವಾಡಿ ೩೦೦, ನರೆಯಂಗಲ್ಲು ೧೨ನ್ನು ಕೂಡ[೧] ಒಳಕೊಂಡ (**ಬಡಗಣ**) ಸಿಂದವಾಡಿ ಎಂಬ ನಾಡನ್ನು ಆಳುತ್ತಿದ್ದ (**ಬಡಗಣ**)[೨] ಸಿಂದ ವಂಶದ ಅರಸರಲ್ಲಿ ಕ್ರಿ. ಶ. 1113ರಿಂದ 1125 ರ ವರೆಗಣ ಶಾಸನಗಳುಳ್ಳ II ಆಚುಗಿ ಅಥವಾ ಆಚರಸನೂ ಅವನ ಬಳಿಕ ಅವನ ಹಿರೇ ಮಗನಾದ ಕ್ರಿ. ಶ. 1144 ರ ಶಾಸನದ ಪೆರ್ಮನೂ[೩] ಆಳಿದ ಮೇಲೆ II ಆಚುಗಿಯ ಮತ್ತೊಬ್ಬ ಮಗನಾದ II ಚಾವುಂಡನು ಆಳತೊಡಗಿದನು. ಚಾಳುಕ್ಯ ವಿಕ್ರಮ ವರ್ಷ ೭೬ ನೆಯ ಪ್ರಜಾಪತಿ ಸಂ| ಪುಷ್ಯ ಬಹುಳ ೨ ಬುಧವಾರ ಉತ್ತರಾಯಣ ಸಂಕ್ರಾಂತಿ = ಕ್ರಿ. ಶ. 1151 ದಶಂಬರ 26 ಬುಧವಾರದ ಅರಸೀ

೧. FKD, ಪು. 576. ಇವಲ್ಲದೆ ಹಂಗರಗೆ ೧೨ ಮತ್ತು ಕರಿವಿಡಿ ೩೦ ಕೂಡ ಈ (ಬಡಗಣ) ಸಿಂದವಾಡಿಯಲ್ಲಿ ಸೇರಿದ್ದುವೆಂದು ಹೊಸೂರ ಹಾಗು ಕಟಗೇರಿಯ ಶಾಸನಗಳಿಂದ (SIE 1929, App. E-, ಪು. 50, ನಂ. 147 ಮತ್ತು 151) ತಿಳಿಯುತ್ತದೆ.

೨. ಈ ಸಿಂದರಲ್ಲದೆ ಈಗಣ ಶಿವಮೊಗ್ಗೆ, ಚಿತ್ರದುರ್ಗ, ಬಳ್ಳಾರಿ ಮೊದಲಾದ ಜಿಲ್ಲೆಗಳ ಆಯಾ ಭಾಗಗಳನ್ನು ಒಳಕೊಂಡ ರಾಜ್ಯವನ್ನು ಇವರಂತೆಯೇ ಮಹಾಮಂಡಳೇಶ್ವರರಾಗಿ ಈಗಣ ಹೊನ್ನಾಳಿ ತಾಲೂಕಿನ ಬೆಳಗವರ್ತಿ (ಬೆಳಗುತ್ತಿ) ಎಂಬ ತಮ್ಮ ರಾಜಧಾನಿಯಿಂದ ಆಳುತ್ತಿದ್ದ ಸಿಂದರೂ ಇದ್ದರು. ಅವರ ರಾಜ್ಯದ ಹೆಸರೂ ಸಿಂದವಾಡಿ ಎಂದೇ (Mysore & Coorg from Inscriptions, ಪು. 147). ಇವೆರಡೂ ಶಾಖೆಗಳನ್ನು ಪ್ರತ್ಯೇಕಿಸಲೆಂದೇ ಕಿಸುಕಾಡು ಇತ್ಯಾದಿ ರಾಜ್ಯದ ಸಿಂದರನ್ನು ಇಲ್ಲಿ ಬಡಗಣ ಸಿಂದರೆಂದಡೆ. ೩. EI, XX, ಪು. 112-114.

ಬೀಡಿಯ ಶಾಸನದಲ್ಲಿ[೧] ಚಾಳುಕ್ಯ III ತೈಲನ ಮಹಾಮಂಡಳೇಶ್ವರನೆಂದಿರುವ ಈ ಚಾವುಂಡನನ್ನು ಮೇಲೆ ಕಂಡಿರುವಂತೆ ಕ್ರಿ. ಶ. 1163 ನೆಯ ಪಟ್ಟದಕಲ್ಲಿನ ಶಾಸನದಲ್ಲಿಯೂ[೨] III ತೈಲನ ಮಹಾಮಂಡಳೇಶ್ವರನೆಂದೂ 1166 – 67 ರ ಬೆಣಚಮಟ್ಟಿಯ (A) ಶಾಸನದಲ್ಲಿ[೩] ಕಳಚುರ್ಯ ಬಿಜ್ಜಳನ ಮಹಾಮಂಡಳೇಶ್ವರ ನೆಂದೂ ಹೇಳಿರುವುದರಿಂದ, ಇವನು ಕ್ರಿ. ಶ. 1151 ರ ಮುಂಚೆಯೇ ಚಾಳುಕ್ಯರ ಮಹಾಮಂಡಳೇಶ್ವರನಾಗಿ ಪಟ್ಟವೇರಿ ಚಾಳುಕ್ಯರ ಪತನಾನಂತರ ಬಿಜ್ಜಳನ ಮಹಾ ಮಂಡಳೇಶ್ವರನಾಗಿರಬೇಕು. ಈ (ಬಡಗಣ) ಸಿಂದರ ರಾಜಧಾನಿ ಎರಂಬರಗೆ, ಅಂದರೆ ಈಗಣ ನಿಜಾಮು ಸರಕಾರದಲ್ಲಿರುವ ಯೆಲ್ಬುರ್ಗ. ಶಾ. ಶ. ೧೧೦೧ ವಿಳಂಬಿ ಸಂ| ಶ್ರಾವಣ ಶುದ್ಧ ಹುಣ್ಣಿಮೆ ಸೋಮವಾರ = ಕ್ರಿ. ಶ. 1178 ಜುಲಾಯಿ 31 ಸೋಮವಾರದ ಕಟಗೇರಿಯ ಶಾಸನದಿಂದಲೂ[೪] ಮೇಲೆ ಹೇಳಿರುವ ಐಹೊಳೆ, ರೋಣ ಮತ್ತು ಸೂಡಿಯ ಶಾಸನಗಳಿಂದಲೂ II ಚಾವುಂಡನು ಕಳಚುರ್ಯ ಬಿಜ್ಜಳನ ಮಗಳಾದ ಸಿರಿಯಾದೇವಿಯನ್ನು ಮದುವೆಯಾಗಿ ಅವಳಲ್ಲಿ ವೀರಬಿಜ್ಜಳ ಮತ್ತು ವೀರವಿಕ್ರಮಾದಿತ್ಯ ಎಂಬ ಇಬ್ಬರು ಮಗಂದಿರನ್ನು ಪಡೆದಿದ್ದನೆಂದು ತಿಳಿಯುತ್ತದೆ. ತನ್ನ ಹಿರೇ ಹೆಂಡತಿಯಾದ ದೇಮಲ ದೇವಿಯಲ್ಲಿ ಹುಟ್ಟಿದ ತನ್ನ ಹಿರೇಮಗನಿಗೆ ತನ್ನ ತಂದೆಯ ಆಚುಗಿ ಎಂದೂ ಕಿರಿಯವನಿಗೆ ತನ್ನ ಅಣ್ಣನ ಪೆರ್ಮ – ಪೆರ್ಮಾಡಿ ಎಂದು II ಚಾವುಂಡನು ಹೆಸರಿಕ್ಕಿದಂತೆ ತನ್ನ ಕಿರೇ ಹೆಂಡತಿಯ ಹಿರೇ ಮಗನಿಗೆ ತನ್ನ ಮಾವನ, ಅಂದರೆ ಅವಳ ತಂದೆಯ, ಬಿಜ್ಜಳ ಎಂದು ಅವನ ಮಾತಾಮಹನ ಹೆಸರಿಕ್ಕಿದುದು ಲೋಕರೂಢಿಗೆ ವಿಹಿತವಾಗಿದೆ. ಶಾ. ಶ. ೧೦೯೧ ವಿರೋಧಿ ಸಂ| ಪುಷ್ಯ ಶುದ್ಧ ೩ ಗುರುವಾರ ಉತ್ತರಾಯಣ ಸಂಕ್ರಾಂತಿ = ಕ್ರಿ ಶ. 1169 ದಶಂಬರ 25 ಗುರುವಾರದ ಹಿರೇಮನ್ನೂರಿನ ಶಾಸನದಲ್ಲಿ[೫] II ಚಾವುಂಡನನ್ನು ಮಹಾಮಂಡಳೇಶ್ವರನೆಂದೂ ಕಳಚುರ್ಯ ರಾಯ ಮುರಾರಿ ಸೋವಿದೇವನ ಆಳ್ವಿಕೆಯ ವರ್ಷದ ಶಾ. ಶ. ೧೦೯೪ ಖರ ಸಂ| ಪುಷ್ಯ ಬಹುಳ ೧೩ ಸೋಮವಾರ = ಕ್ರಿ. ಶ. 1171 ದಶಂಬರ 27 ರ ನಿಡಗುಂದಿಯ ಶಾಸನದಲ್ಲಿ[೬] II ಚಾವುಂಡನ ಮಗಂದಿರಾದ ಬಿಜ್ಜಳನನ್ನೂ ವಿಕ್ರಮನನ್ನೂ ಅವರ ಸೋದರಮಾವ ನಾದ ಸೋವಿದೇವನ ಮಹಾಮಂಡಳೇಶ್ವರರೆಂದೂ ಹೇಳಿರುವುದರಿಂದ, II ಚಾವುಂ ಡನು ಕ್ರಿ. ಶ. 1170 – 71 ರಲ್ಲಿ ಕಾಲವಾಗಿರಬೇಕು. ನಿಡಗುಂದಿಯ ಈ ಶಾಸನ ದಲ್ಲಿಯೂ ಶಾ. ಶ. ೧೦೯೬ ಜಯ ಸಂ| ಮಾರ್ಗಶಿರ ಶುದ್ಧ ಹುಣ್ಣಿಮೆ ಆದಿತ್ಯವಾರ

---

೧. SIE, 1929, App. E. ಪು. 43, ನಂ. 33. ೨. FKD 460; 575. ೩. EI. XX, ಪು. 115 – 116. ೪. SIE, 1929, App. E ಪು. 50 ನಂ. 151; EI XX, ಪು. 111. ೫. SIE, 1928, App. E. ಪು. 20, ನಂ. 4. ೬. SIE, 1927 (Sup), ಪು. 16, ನಂ. 208.

ಚಂದ್ರಗ್ರಹಣ=ಕ್ರಿ. ಶ. 1174 ನವಂಬರ 10 ಆದಿತ್ಯವಾರ ಚಂದ್ರಗ್ರಹಣದಂದಿನ ಅಲ್ಲಿಯ ಮತ್ತೊಂದು ಶಾಸನದಲ್ಲಿಯೂ[೧] ಈ ಬಿಜ್ಜಳನನ್ನೂ ವಿಕ್ರಮಾದಿತ್ಯನನ್ನೂ ಕುಮಾರರೆಂದೂ ಅವರ ತಾಯಿ ಸಿರಿಯಾದೇವಿಯನ್ನು ಪಟ್ಟಮಹಾದೇವಿ ಎಂದೂ ಹೇಳಿರುವುದರಿಂದ, ಆಗ್ಗೆ ಅವರಿನ್ನೂ ಎಳೆಯರಾಗಿದ್ದು ಪ್ರಾಯಶಃ ಅವರ ತಾಯಿಯೇ ರಾಜ್ಯಧರಳಾಗಿ (regent) ಸಿಂದವಾಡಿಯನ್ನು ಆಳುತ್ತಲಿರಬೇಕು. ದೇವಗಿರಿಯ ಯಾದವ ಸಿಂಘಣನ (1210-47) ಆಳೊತ್ತಿನ ವಿಕ್ರಮ ಸಂ| ಕಾರ್ತಿಕ ಹುಣ್ಣಿಮೆ ಸೋಮವಾರ = ಕ್ರಿ. ಶ. 1221 ನವಂಬರ 1 ರ ಕಳಕಪ್ಪನ ಗುಡ್ಡದ ಶಿಲಾಲೇಖದಿಂದ[೨] ಈ ಸಿಂದ ಸೋದರರಲ್ಲಿಯ ವಿಕ್ರಮಾದಿತ್ಯನು ಆಗ್ಗೆ ಸಿಂಘಣನ ಮಹಾಮಂಡಳೇಶ್ವರನಾಗಿದ್ದನೆಂದು ತಿಳಿಯುವುದರಿಂದ, ಆಗ್ಗೆ ಆತನಿಗೆ ೬೦ ವರ್ಷವೆಂದರೂ ಕ್ರಿ. ಶ. 1174 ರಲ್ಲಿ ಈ ಸೋದರರಿಗೆ ಇನ್ನೂ ಪ್ರಾಯತುಂಬಿರದು. ಸಿರಿಯಾದೇವಿಯ ಸೋದರನಾದ ರಾಯಮುರಾರಿ ಸೋವಿದೇವನ ಆಳಿಕೆಯ ೭ ನೆಯ ವರ್ಷದ ವಿಜಯ ಸಂ| ಕಾರ್ತಿಕ ಹುಣ್ಣಿಮೆ ಸೋಮವಾರ= ಕ್ರಿ. ಶ 1173 ಅಕ್ಟೋಬರ 23 ರ ವೀರಬಿಜ್ಜಳನೆಂಬ ಈ ಸಿಂದ ಬಿಜ್ಜಳನ ಕಣ್ವಿಯ ಶಾಸನದಲ್ಲಿ,[೩] ಅಂದರೆ ಆತನಿನ್ನೂ ಎಳೆಯವನಾಗಿದ್ದಂದಿನ ಶಾಸನದಲ್ಲಿ, ಆತನನ್ನು ಓಲಗಿಸುತ್ತಿದ್ದನೆಂಬ ಬಲದೇವನಾಯಕನು II ಚಾವುಂಡನ ಕಾಲದಿಂದಲೊ ಅದಕ್ಕೂ ಮುಂಚಿನಿಂದಲೊ ಈ ಸಿಂದರ ಕೈಯ್ಕೆಳಗಣ ಅಧಿಕಾರಿಯಾಗಿರಬೇಕು.

ಶಾ ಶ. ೧೧೦೨ ವಿಕಾರಿ ಸಂ| ಆಶ್ವಯುಜ ಅಮಾವಾಸ್ಯೆ ಸೋಮವಾರ= ಕ್ರಿ. ಶ. 1180 ಅಕ್ಟೋಬರ 20 ರ ಕಳಚುರ್ಯ ಸಂಕಮನ ರೋಣದ ಶಾಸನದಲ್ಲಿ[೪] ಸಿಂದ ಬಿಜ್ಜಳನೂ ಅವನ ತಮ್ಮ ವಿಕ್ರಮಾದಿತ್ಯನೂ ಅವರ ಸೋದರಮಾವನಾದ ಸಂಕಮನ ಮಹಾಮಂಡಳೇಶ್ವರರೆಂದಿರುವಲ್ಲಿಯೂ ವಿಶ್ವಾವಸು ಸಂ| ಮಾಘ ಬಹುಳ ಅಮಾವಾಸ್ಯೆ ಸೋಮವಾರ = ಕ್ರಿ. ಶ. 1184 ಫೆಬ್ರವರಿ 13 ರ ಸುಳಿಭಾವಿಯ ಶಾಸನದಲ್ಲಿಯೂ[೫] ಶಾ. ಶ. ೧೧೦೯ ಪ್ಲವಂಗ........ ಚತುರ್ದಶಿ ಸೋಮವಾರ ಸಂಕ್ರಾಂತಿ =1187 ಮಾರ್ಚಿ 24 (ಚೈತ್ರ ಶುದ್ಧ ಚತುರ್ದಶಿ ಮೇಷ ಸಂಕ್ರಾಂತಿ) ಸೋಮವಾರದ ಬೆಣಚಮಟ್ಟಿಯ (B) ಶಾಸನದಲ್ಲಿಯೂ[೬] ಸಿರಿಯಾದೇವಿಯ ಹೆಸರಿಲ್ಲದೆ ಈ ಸಿಂದ ಸೋದರರಿಬ್ಬರ ಹೆಸರುಗಳೂ ಒಟ್ಟಿಗೆ ಇರುವುದರಿಂದ, ಕ್ರಿ. ಶ. 1180 ರಷ್ಟಕ್ಕೆ ಇವರು ಆಳತಕ್ಕ ಪ್ರಾಯಕ್ಕೆ ಬಂದು ಜತೆಯಾಗಿ ಆಳುತ್ತಿದ್ದರೆಂದೂ ಇವರ ರಾಜಧಾನಿ ಎರಂಬರಗೆ ಎಂದೂ ತಿಳಿಯುತ್ತದೆ.

---

೧. SIE. 1927 (Sup.) ಪು. 16, ನಂ. 205; EI. XX, ಪು. 113. ೨. SIE. 1928, App. E. ಪು. 23, ನಂ. 36. ೩. SIE, 1927 (Sup), ಪು. 10, ನಂ. 119 A. ೪. ಅದೇ, ಪು. 14, ನಂ. 174. ೫. SIE, 1929, App. E. ಪು. 46, ನಂ. 65. ೬. EI. XX, ಪು. 117—118.

ಮುಂಚಿನಿಂದ ಮಹಾಮಂಡಳೇಶ್ವರರಾಗಿದ್ದ ಈ ಸಿಂದರು ಚಾಳುಕ್ಯರ ಒಡೆತನದಲ್ಲಿ ಅವರ ಮಹಾಮಂಡಳೇಶ್ವರರೂ ಕಳಚುರ್ಯರ ಒಡೆತನದಲ್ಲಿ ಅವರ ಮಹಾಮಂಡಳೇಶ್ವರರೂ ಆಗಿದ್ದರೂ ಬೆಣಚಮಟ್ಟಿಯ(B) ಶಾಸನದಲ್ಲಿಯೂ ಈ ಸಿಂದ ಸೋದರರನ್ನು ಮಹಾಮಂಡಳೇಶ್ವರರೆಂದವೆಯಾದರೂ ಯಾವನಾದರೂ ಅಧಿರಾಜನ ಹೆಸರಿಲ್ಲದ ಈ ಬೆಣಚಮಟ್ಟಿಯ (B) ಶಾಸನದಲ್ಲಿ ಇವರಲ್ಲಿಯ ವಿಕ್ರಮಾದಿತ್ಯನನ್ನು (ಬಂ. ೬)

..............ಚಕ್ರವರ್ತಿ ಪದವೀ ಪತಿಯೊ ।
ನ್ನೀತನೆನಲೆಸೆವನೂರ್ವೀ
ಖ್ಯಾತಯಶಂ ವೀರ ವಿಕ್ರಮಾವನಿಪಾಲಂ ॥

ಎಂದಿರುವುದರಿಂದ, ಆ ತಕ್ಕ ರಾಜ್ಯವೈಪುಲ್ಯವಿಲ್ಲದ ಇವರು ಚಕ್ರವರ್ತಿತ್ವಕ್ಕೆ ಅನರ್ಹರೇ ಆದರೂ ಅವರನ್ನು ಹೀಗೆನ್ನಬೇಕಾದರೆ, ಕಳಚುರ್ಯರ ಪತನಾನಂತರ ಈ ಶಾಸನದ ಕಾಲದ ವರೆಗಾದರೂ ಈ ಸೋದರರು ಯಾರಿಗಾದರೂ ಉಪರಾಜರಾಗಿರಲಿಲ್ಲವೆಂದು ಭಾವಿಸಬಹುದು.

ಶಾ. ಶ. ೧೧೧೩ ಸೌಮ್ಯ (?) ಸಂ| ಪುಷ್ಯ ಬಹುಳ ೧೧ ಆದಿತ್ಯವಾರ = ಕ್ರಿ. ಶ. 1192 ಜನವರಿ 12 ರ ಚನ್ನರಾಯಪಟ್ಟಣ 179 ನೆಯ ಶಾಸನದಲ್ಲಿ[೧] ಹೊಯ್ಸಳ II ವೀರ ಬಲ್ಲಾಳನು ಸೇವುಣರಿಂದ, ಅಂದರೆ ದೇವಗಿರಿಯ ಯಾದವರಿಂದ, ಯುದ್ಧಮುಖದಲ್ಲಿ ಗೆದ್ದುಕೊಂಡನೆಂದಿರುವ ಸೊರಟೂರಿಂದ ಬೆಳ್ವೊಲ ವರೆಗಣ ಪ್ರಾಂತದಲ್ಲಿ ಎರಂಬರಗೆಯೂ ಇದೆ; ಶಾ. ಶ. ೧೧೧೭ ರಿಂದ ರಾಕ್ಷಸ ಸಂ| ಫಾಲ್ಗುಣ ಶುದ್ಧ ಹುಣ್ಣಿಮೆ ವಡ್ಡವಾರ = ಕ್ರಿ. ಶ. 1196 ಫೆಬ್ರವರಿ 15 ಗುರುವಾರದ ಅರಸಿಕೆರೆ 104 ರಲ್ಲಿ[೧] II ವೀರಬಲ್ಲಾಳನು 'ಎರಂಬರಗೆಯ ನೆಲೆವೀಡಿನೊಳು ಪೃಥ್ವೀರಾಜ್ಯಂಗೆಯುತ್ತುಮಿರೆ' (ಬಂ. ೧೭ - ೧೮) ಎಂದಿದೆ. ಆದಕಾರಣ ಕ್ರಿ. ಶ. 1192 ರ ಮುಂಚೆಯೇ II ವೀರಬಲ್ಲಾಳನು ಎರಂಬರಗೆಯನ್ನು, ಅತಏವ ಎರಂಬರಗೆ ರಾಜಧಾನಿಯಾಗಿದ್ದ (ಬಡಗಣ) ಸಿಂದರ ರಾಜ್ಯವನ್ನು, ಆ ಸಿಂದರಿಂದಲ್ಲ, ಸೇವುಣರಿಂದ ಗೆದ್ದುಕೊಂಡಿರಬೇಕು. ಕ್ರಿ. ಶ. 1189 ರ ಅಣ್ಣಿಗೆರೆಯ ಮತ್ತು 1191 ರ ಗದುಗಿನ ಶಾಸನಗಳಲ್ಲಿ[೨] ದೇವಗಿರಿಯ ಯಾದವ ಭಿಲ್ಲಮನು (1187-91) ಮಲಪ್ರಭಾ ಮತ್ತು ಕೃಷ್ಣಾ ನದಿಗಳ ತೆಂಕಣ ಹಾಗೂ ಬಡಗಣ ಪ್ರಾಂತಗಳನ್ನು ಗೆದ್ದುಕೊಂಡನೆಂಬಲ್ಲಿ ಅವಲ್ಲಿ ಸಿಂದವಾಡಿಯೂ ಅವನ ಕೈಯ್ವಶವಾಗಿರಬೇಕೆಂದು ಪ್ರತ್ಯಕ್ಷವಿರುವುದರಿಂದ, ಅವನು ಸಿಂದವಾಡಿಯನ್ನು ಕ್ರಿ. ಶ. 1188 ರಲ್ಲಿ ಸಿಂದರಿಂದ ಕಿತ್ತುಕೊಂಡಿದ್ದು ಕ್ರಿ. ಶ. 1191 ರ ಉತ್ತರಾರ್ಧದಲ್ಲಿ ಯಾದವರಿಗೂ ಹೊಯ್ಸಳರಿಗೂ ಆದ ಯುದ್ಧದಲ್ಲಿ ಅವನು ಮಡಿದಾಗ[೨] II ವೀರ ಬಲ್ಲಾಳನು ಸಿಂದವಾಡಿಯನ್ನು ತನ್ನ ಕೈಯ್ವಶಮಾಡಿಕೊಂಡಿರಬೇಕು.

---

೧. EC. V. ೨. FKD, ಪು. 504; 519—520.

ಕ್ರಿ. ಶ. 1187ರ ಬೆಣಚಮಟ್ಟಿಯ ( B ) ಶಾಸನದಿಂದೀಚೆ ಸಿಂದ ಬಿಜ್ಜಳನ ಹೆಸರುಳ್ಳ ಶಾಸನವಿಲ್ಲ; ಮೇಲೆ ಕಂಡಿರುವ 1221 ರ ಕಳಕಪ್ಪನ ಗುಡ್ಡದ ಶಾಸನದಲ್ಲಿ ಅವನ ತಮ್ಮನಾದ ವಿಕ್ರಮಾದಿತ್ಯನನ್ನು ಭಿಲ್ಲಮನ ಮೊಮ್ಮಗನಾದ ಸಿಂಘಣನ ( 1210 – 47 ) ಮಹಾಮಂಡಳೇಶ್ವರನೆಂದದೆ; ಅತಏವ ಭಿಲ್ಲಮನ ಜೈತ್ರಯಾತ್ರೆಯಲ್ಲಿ ಸಿಂದ ಬಿಜ್ಜಳನು ಮಡಿದಿರಬೇಕು, ಆ ಮೇಲೆ ಅವನ ತಮ್ಮ ವಿಕ್ರಮಾದಿತ್ಯನು ಆ ನಡುವೆ ಹೊಯ್ಸಳರಿಂದ ಯಾದವರು ಮಾರ್ಕೊಂಡ ಸಿಂದವಾಡಿಯಲ್ಲಿ ಆ ಯಾದವರ ಮಹಾಮಂಡಳೇಶ್ವರನಾಗಿ ಆಳುತ್ತಿರಬೇಕು. ಆ ಮೇಲಣ ಶಾ. ಶ. ೧೧೫೧ ವಿಜಯ ( ಅಂದರೆ ಉತ್ತರ ಸಂಪ್ರದಾಯದ ವಿಜಯ = ನಮ್ಮ ದಕ್ಷಿಣ ಸಂಪ್ರದಾಯದ ವಿರೋಧಿ ) ಸಂ| ಚೈತ್ರ ಶುದ್ಧ ಹುಣ್ಣಿಮೆ ಆದಿತ್ಯವಾರ = ಕ್ರಿ. ಶ. 1229 ಮಾರ್ಚಿ 11 ರ ನಿಡಗುಂದಿಯ ಬಸವಣ್ಣನ ಗುಡಿಯಲ್ಲಿಯ ಶಾಸನದಿಂದ[೧] ಯಾದವ ಸಿಂಘಣನ ಮಹಾಪ್ರಧಾನನಾದ ವಾಸುದೇವನಾಯಕನು ( ಸಿಂದವಾಡಿಯಲ್ಲಿಯ ) ಕಿಸುಕಾಡು ೭೦ ನ್ನು ಎರಂಬರಗೆಯ ರಾಜಧಾನಿಯಿಂದ ಆಳುತ್ತಿದ್ದನೆಂದು ತಿಳಿಯುವುದರಿಂದ, ಕ್ರಿ. ಶ. 1221–1229 ರ ನಡುವೆ ಪ್ರಾಯಶಃ ಬಿಜ್ಜಳನ ತಮ್ಮನಾದ ವಿಕ್ರಮಾದಿತ್ಯನೊಂದಿಗೆಯೇ ಏನೋ, ಬಡಗಣ ಸಿಂದರ ಆಳಿಕೆ ನಾಮಶೇಷವಾಗಿ ಅವರ ಸಿಂದವಾಡಿಯನ್ನು ಸಿಂಘಣನು ತನ್ನ ಸಾಮ್ರಾಜ್ಯಕ್ಕೆ ಕೂಡಿಸಿಕೊಂಡಿರಬೇಕು.

ಹೇಮಾದ್ರಿಯ ವ್ರತಖಂಡದಲ್ಲಿ[೨] ದೇವಗಿರಿಯ ಯಾದವ ಭಿಲ್ಲಮನನ್ನು ಕುರಿತು

ಯೋ ವಾ ಮಂಗಲವೇಷ್ಟಕಂ ಕ್ಷಿತಿಪತಿಂ ಶ್ರೀ **ಬಿಲ್ಲಣಂ** ( **ವಜ್ರಿಣಂ** ) ಜಘ್ನಿವಾನ್

ಎಂದಿರುವಲ್ಲಿ ಬಿಲ್ಲಣ ಎಂಬ ಹೆಸರಿನ ಯಾವೊಬ್ಬ ಅರಸನಾದರೂ ಕರ್ನಾಟಕದಲ್ಲೇ ಏಕೆ ದಕ್ಷಿಣಾಪಥದಲ್ಲಿಯೇ ಇದ್ದಿಲ್ಲದುದರಿಂದ, ‘ ಬಿಜ್ಜಣ ’ ಎಂಬ ಹೆಸರನ್ನು ಬರೆವಲ್ಲಿ ಸಂಪ್ರತಿಕಾರರು ‘ ಬಿಲ್ಲಣ ’ ಎಂದು ಎಡಹಿರಬೇಕೆಂದು ಊಹಿಸಲಿಕ್ಕೆ ತಕ್ಕಷ್ಟು ಆಸ್ಪದವಿರುವುದರಿಂದಲೂ ‘ ಬಿಲ್ಲಣಂ ’ ಎಂಬ ದ್ವಿತೀಯೈಕವಚನದ ಪಾಠಾಂತರವಾಗಿ ಅಲ್ಲಿಯೇ ಹೇಳಿರುವ ‘ ವಜ್ರಿಣಂ ’ ಎಂಬುದು ಪ್ರಾಯಶಃ ‘ ಬಿಜ್ಜಣಂ ’ ಎಂಬುದರ ಸಂಸ್ಕೃತಿಸಿದ ರೂಪವೆಂದು ಸಾಕಷ್ಟು ಪ್ರತ್ಯಕ್ಷವಿರುವುದರಿಂದಲೂ ಭಿಲ್ಲಮನು ಮಡುಹಿದ ಈ ಅರಸನ ಹೆಸರು ಬಿಜ್ಜಣ ಎಂದಿರಬೇಕೆಂದು ನಿಶ್ಚಯಿಸಲಾಗುವುದರಿಂದ, ಈ ಬಿಜ್ಜಣನನ್ನು ಭಿಲ್ಲಮನ ಕಾಲದಲ್ಲಿ ( 1187-91 ) ಬಿಜ್ಜಣನೆಂಬ ಹೆಸರಿನ ಅದೊಬ್ಬನೇ ಇದ್ದ ಹಾಗೂ ಮೇಲೆ ಕಂಡಿರುವಂತೆ ಭಿಲ್ಲಮನ ಜೈತ್ರಯಾತ್ರೆ

---

೧. SIE, 1927 ( Sup. ) ಪು 15, ನಂ. 200; EI. XX, ಪು. 114.

೨. EHD. App.C, ಪು. 243; ( f.n. 1. )

ಯಲ್ಲಿ ಹತನಾದ ಸಿಂದ ಬಿಜ್ಜಳನೊಂದಿಗೆ ಸಮೀಕರಿಸಬಹುದು ಎನಿಸುತ್ತದೆ. ಹೇಮಾದ್ರಿ ಈತನನ್ನು ಮಂಗಲ**ವೇಷ್ಟ**ಕನೆನ್ನಬೇಕಾದರೆ ಈತನ ರಾಜಧಾನಿಯ ಹೆಸರು ಮಂಗಲ**ವೇಷ್ಟ**ಕ = ಮಂಗಳ**ವೇ**ಡ – ಮಂಗಳ**ವೇ**ಡೆ ( ಮಂಗಳ**ವಾಡ**? ) ಎಂದಿರಬೇಕು. ಆದರೆ ಕಳಚುರ್ಯ ಬಿಜ್ಜಳನು ಕಲ್ಯಾಣವನ್ನು ಚಾಳುಕ್ಯರಿಂದ ಕಿತ್ತುಕೊಳ್ಳುವ ಮುಂಚೆ ತಾನಿನ್ನೂ ಮಹಾಮಂಡಳೇಶ್ವರನಾಗಿದ್ದಾಗ ಮಂಗಳ**ವಾಡ**ವು ಅವನ ರಾಜಧಾನಿಯಾಗಿತ್ತೆಂದೂ ಅವನ ಮಗನಾದ ಸೋವಿದೇವನ ರಾಜಧಾನಿಗಳಲ್ಲಿಯೂ ಮಂಗಳ**ವಾಡ**ವು ಒಂದಾಗಿತ್ತೆಂದೂ ಮೇಲೆ ಕಂಡಿರುವೆವಲ್ಲದೆ, ಸಿಂದರ ಯಾವ ಶಾಸನದಲ್ಲಾದರೂ, ಏಮಂಚ II ಚಾವುಂಡನ ಹಾಗೂ ಅವನ ಮಗಂದಿರಾದ ಬಿಜ್ಜಳ ಮತ್ತು ವಿಕ್ರಮಾದಿತ್ಯರ ಶಾಸನಗಳಲ್ಲಿ, ಎರಂಬರಗೆಯನ್ನೇ ಅವರ ರಾಜಧಾನಿ ಎಂದದೆ ವಿನಾ ಮಂಗಳವೇಡೆಯ ಹೆಸರು ಹೇಗೂ ಇಲ್ಲವಷ್ಟೇ, ಅವರಿಗೆ ಮತ್ತೊಂದು ರಾಜಧಾನಿಯನ್ನೂ ಹೇಳಿಲ್ಲದುದರಿಂದಲೂ ಭಿಲ್ಲಮನಿಂದ ಸಿಂದವಾಡಿಯನ್ನು ಗೆದ್ದ II ವೀರಬಲ್ಲಾಳನು ಬೀಡು ಬಿಟ್ಟಿದ್ದೂ ಎರಂಬರಗೆಯಲ್ಲಿ, ಸಿಂದರ ಅವಸಾನಾನಂತರ ಸಿಂಘಣನ ಮಹಾಪ್ರಧಾನ ವಾಸುದೇವನಾಯಕನ ರಾಜಧಾನಿ ಇದ್ದುದೂ ಎರಂಬರಗೆಯಲ್ಲಿ ಎಂದು ಮೇಲೆ ಕಂಡಿರುವುದರಿಂದಲೂ ಹೇಮಾದ್ರಿಯ ಬಿಲ್ಲಣನು ಸಿಂದ ಬಿಜ್ಜಳನೇ ಎಂದಾದರೆ ಕಳಚುರ್ಯರ ವಿಧ್ವಂಸದ ಮತ್ತು ಚಾಳುಕ್ಯ IV ಸೋಮೇಶ್ವರನ ಪ್ರತಿಷ್ಠಾಪನೆಯ ನಡುವಣ ಸಂದುಕಟ್ಟಿನಲ್ಲಿ ಆ ಸಿಂದ ಬಿಜ್ಜಳನು ತನ್ನ ಮಾತಾಮಹನ ಹಾಗೂ ಸೋದರಮಾವಂದಿರ ರಾಜ್ಯದಿಂದ ಮಂಗಳವೇಡೆಯ ( ಅಥವಾ ಮಂಗಳವಾಡದ ) ಪ್ರಾಂತವನ್ನು ತನ್ನ ಕೈವಶ ಮಾಡಿಕೊಂಡಿದ್ದು ಭಿಲ್ಲಮನಿಂದ ಪರಾಜಿತನಾಗುವಂದಿಗೆ ತನ್ನ ಆಳಿಕೆಯ ಕೊನೆಯ ಈಷತ್ಕಾಲಕ್ಕಾದರೂ ಅಲ್ಲಿಯ ನೆಲವೀಡಿನಲ್ಲಿ ಇದ್ದನೇನೋ ಎಂದು ಊಹಿಸಬಹುದಷ್ಟೇ ವಿನಾ ಪ್ರಮಾಣಿಸಲಾಗುವುದಿಲ್ಲ. ಅನ್ಯತ್ರ ಕ್ರಿ. ಶ. 1179 ರ ರೋಣದ ಮತ್ತು 1180 ರ ಸೂಡಿಯ ಶಾಸನಗಳಿಂದ[೧] ಕಳಚುರ್ಯ ಬಿಜ್ಜಳನ ಮಗನೆಂದು ತಿಳಿವ ಹಾಗೂ ಕಲ್ಯಾಣದ ಸಿಂಹಾಸನದಲ್ಲಿ ಕುಳ್ಳಿರದ ವಜ್ರದೇವನ ಹೆಸರೇ ಹೇಮಾದ್ರಿಯ ಆ ಶಾರ್ದೂಲವಿಕ್ರೀಡಿತದ ಚರಣದಲ್ಲಿ ಛಂದೋನುಕೂಲವಾಗಿ 'ವಜ್ರಣಂ' ಎಂದೂ ಪಾಠಾಂತರದ ತದ್ಭವದಲ್ಲಿ 'ವಜ್ರ ( ಣ್ )' ಎಂಬುದರ ಸ್ವರವಿಪರ್ಯಾಸದಿಂದ 'ಬಿಜ್ಜ ( ಣಂ )' ಎಂದೂ ಆ ಬಿಜ್ಜಣವು ಬರೆವಣಿಗರ ತಪ್ಪಿನಿಂದ 'ಬಿಲ್ಲಣಂ' ಎಂದೂ ಆಗಿರಬಹುದೆಂದೂ ತೋರುವುದರಿಂದ, ಕಳಚುರ್ಯರ ಪತನಾನಂತರ ಈ ವಜ್ರದೇವನು ಪ್ರಾಯಶಃ ಚಾಳುಕ್ಯ IV ಸೋಮೇಶ್ವರನ ಉಪರಾಜನಾಗಿ ಮಂಗಳವೇಡೆಯ ಹಾಗೂ ಅದರ ಕೆಲಬಲದ

---

೧. FKD, ಪು. 477.

ಸೀಮೆಯನ್ನು ಆಳುತ್ತಿದ್ದರೆ (ಆದರೆ ಈ ಕುರಿತು ಶಾಸನಾಧಾರವೂ ಇಲ್ಲ, ವಜ್ರದೇವನದೇ ಎಂಬ ಶಾಸನವೂ ಇಲ್ಲ), ಭಿಲ್ಲಮನಿಂದ ಹತನಾದ ಮಂಗಳವೇಡೆಯ ಅರಸನು ಈತನೇನೋ ಎಂದು ಊಹಿಸಬಹುದಲ್ಲದೆ ಇದನ್ನೂ ಪ್ರಮಾಣಿಸಲಾಗುವುದಿಲ್ಲ. ಹೀಗಾಗಿ ಹೇಮಾದ್ರಿಯು ಮಂಗಲವೇಷ್ಟಕನಾದ ಬಿಲ್ಲಣ(೦) ಅಥವಾ ವಜ್ರ(ಣಂ) ಎಂಬುವನು ಇಂಥವನೇ ಎಂದು ಸುನಿಶ್ಚಿತವಾಗಿ ತೀರ್ಮಾನಿಸಲಾಗುವುದಿಲ್ಲ.

ಬೆಣಚಮಟ್ಟಿಯ (B) ಶಾಸನದಲ್ಲಿ (ಬಂ. ೪) ಸಿಂದ ಬಿಜ್ಜಳನನ್ನು

ನಂಬಿಯ ತೆಱದಿಂ ಶಿವನಂ
ನಂಬಿದನೋಹಿಲನ ತೆಱದಿನೋಹಿಲ್ಲದ ಭ ।
ಕ್ತಂ ಬಾಣನಂತೆ ಜಾಣಂ
ಕಿಂಬಹುನಾ ವೀರ ಬಿಜ್ಜಳಾವನಿಪಾಲಂ ॥

ಎಂದು ಬಸವೇಶ್ವರನ ವಚನಗಳಿಂದಲೂ ಹರಿಹರನ ರಗಳೆಗಳೇ ಮೊದಲಾದ ವೀರಶೈವ ಗ್ರಂಥಗಳಿಂದಲೂ ಪರಮ ಶಿವಭಕ್ತರೆಂದು ತಿಳಿವ ನಂಬಿ, ಓಹಿಲ, ಬಾಣರೊಂದಿಗೆ ಹೋಲಿಸಿರುವುದರಿಂದ, ಆತನು ಪ್ರಾಯಶಃ ವೀರಶೈವನೇ ಆಗಿದ್ದನೇನೋ.

(ಅವನ ಮಾತಾಮಹನಾದ) ಕಳಚುರ್ಯ ಬಿಜ್ಜಳನ ಮತವಾವುದೆಂದು ನಿರ್ಣಯಿಸುವಲ್ಲಿ ಬಿಜ್ಜಳನ ಮಗಂದಿರ ಸೋಮೇಶ್ವರ (ಸೋವಿದೇವ) ಹಾಗೂ ಶಂಕರ (ಸಂಕಮ) ಎಂಬ ಹೆಸರುಗಳೂ[೧] ಅವನ ಸುವರ್ಣ ವೃಷಭಧ್ವಜವೂ[೨] ಆತನು ಜೈನನಲ್ಲವೆಂಬುದಕ್ಕೆ ತಕ್ಕಷ್ಟು ದ್ಯೋತಕವಾಗಿವೆ. ಮುಂದೆ ಕಾಣುವ ಮೇರೆಗೆ ಈ ಬಿಜ್ಜಳನು ಜೈನರ ವಾದವನ್ನು ಅಲ್ಲಗಳೆದು ಪರಮ ಶೈವನಾದ ಏಕಾಂತ ರಾಮಯ್ಯನ ಕಾಲು ತೊಳೆದು ಅವನು ಅಬ್ಬಲೂರಿನ ಜೈನ ಬಸದಿಯಲ್ಲಿಯ ಜಿನ ಮೂರ್ತಿಯನ್ನು ಕೆಡವಿ ಅಲ್ಲಿ ಶಿವಲಿಂಗವನ್ನು ಪ್ರತಿಷ್ಠಿಸಿದ ಆ ವೀರ ಸೋಮನಾಥ ದೇವಾಲಯಕ್ಕೆ ಸತ್ತಳಿಗೆ ೭೦ ರಲ್ಲಿಯ ಗೋಗಾವೆ ಎಂಬ ಹಳ್ಳಿಯನ್ನು ದತ್ತಿ ಬಿಟ್ಟನೆಂಬ ಅಬ್ಬಲೂರಿನ ಶಾಸನದ[೩] ಹೆಚ್ಚುಕಡಿಮೆ ಸಮಕಾಲೀನವಾದ ಹೇಳಿಕೆಯಿಂದ

೧. ಜೈನರಲ್ಲಿ ಶಂಕರ ಎಂಬ ಹೆಸರಿದೆಯಾದರೂ— ಉದಾ. ಅಜಿತಪುರಾಣ (XII. ೯)ದಲ್ಲಿ ಶಂಕರಗಂಡ; ಶಿಕಾರಿಪುರ 197 ರಲ್ಲಿ (EC VII; ಬಂ. ೧೫) 'ಜಿನಸಮಯೋಚ್ಚಿಂತಾಮಣಿ ಶಂಕರ ಸಾಮಂತ'; ಅಬ್ಬಲೂರಿನ ಶಾಸನದಲ್ಲಿ ಹೇಳಿರುವ ಜೈನರ ಮುಂಬಿಗನಾದ ಸಂಕ(ರ) ಗಾವುಂಡ, ಇತ್ಯಾದಿ —ಅವರಲ್ಲಿ ಸೋಮೇಶ್ವರ ಎಂಬ ಹೆಸರಿರುವಂತಾಗಲಿ ಜೈನ ಅರಸರಿಗೆ ವೃಷಭಧ್ವಜವಿದ್ದಂತಾಗಲಿ ತಿಳಿದಿಲ್ಲ. ೨. ಬಿಜ್ಜಳನ ಸುವರ್ಣ ವೃಷಭಧ್ವಜದ ಉಲ್ಲೇಖವು ಅವನ ಹಲವು ಶಾಸನಗಳಲ್ಲಿದೆ; ಉದಾ. EC VII. ಶಿಕಾರಿಪುರ 18; 92; 102, 171; 198; 242 ಇತ್ಯಾದಿ. ೩. FKD, ಪು. 482-484; ಕವಿಚರಿತೆ I, ಪು. 297-98.

ಬಿಜ್ಜಳನು ಜೈನನಾಗಿರದೆ ಶಿವಭಕ್ತನಾಗಿದ್ದನೆಂದು ತಿಳಿಯುತ್ತದೆ. 'ದಕ್ಷಿಣ ದಿಗ್ವಿಜಯಂಗೆಯ್ದು ಬಳ್ಳಿಗಾವೆ ಯೊಳು ಬೀಡಂ ಬಿಟ್ಟು ಸುಖಸಂಕಥಾ ವಿನೋದದಿಂದಮಿರ್ಪುದುಮನಿಬರು ಮೊಂದಾಗಿ ಬಂದು ಕುಳ್ಳಿರ್ದು ಕೋಡಿಯ ಮಠದ ಧರ್ಮಪ್ರಸಂಗಮಂ ಮಾಳ್ಪುದುಮಾ ಪ್ರಸ್ತಾವದೊಳು' (ಬಂ. ೩೪-೩೫) ಆ ಕೋಡಿಯ 'ಮಠದೊಳೀನಾನುಂ ಧರ್ಮ್ಮಮಂ ದೇವಮ್ಮಾಡಿದೊಡದು ಚಂದ್ರಾರ್ಕ್ಕಸ್ಥಾಯಿಯಾಗಿ ನಡೆವುದು' (ಬಂ. ೪೪-೪೫) ಎಂದ ತನ್ನ ಪಾದಪದ್ಮೋಪಜೀವಿಯಾದ ಕಸಪಯ್ಯನಾಯಕನ ವಿಜ್ಞಾಪನೆಯ ಮೇರೆಗೆ ಕಳಚುರ್ಯ ಬಿಜ್ಜಳ ಮಹೀಪಾಲನು 'ದಕ್ಷಿಣ ಕೇದಾರೇಶ್ವರ ದೇವರಂಗಭೋಗಕ್ಕಂ ತಪೋಧನರಾಹಾರ ದಾನಕ್ಕಂ ವಿದ್ಯಾದಾನಕ್ಕಂ ಖಂಡಸ್ಫುಟಿತ ಜೀರ್ಣ್ಣೋದ್ಧಾರಕ್ಕಂ ಶಿಷ್ಟೇಷ್ಟ ಸಂತರ್ಪ್ಪಣಕ್ಕಂ' (ಬಂ. ೪೫-೪೬) ದತ್ತಿ ಬಿಟ್ಟನೆಂಬ ಅವನ ಆಳಿಕೆಯ ೬ ನೆಯ ವರ್ಷದ ವಿಷು ಸಂ| ಪುಷ್ಯ ಮಾಸದ ಮಾವಾಸ್ಯೆ ಸೂರ್ಯಗ್ರಹಣ = ಕ್ರಿ. ಶ. 1162 ಜನವರಿ 17 ಬುಧವಾರ ಸೂರ್ಯಗ್ರಹಣದಂದಿನ ಶಿಕಾರಿಪುರ 102 ನೆಯ ಶಾಸನದಿಂದ[೧] ಬಿಜ್ಜಳನು ಶಿವಭಕ್ತನೆಂದು ಸ್ಪಷ್ಟವಾಗುತ್ತದೆ. ಈ ಬಿಜ್ಜಳನ ಮಗನಾದ ಕಳಚುರ್ಯ ಆಹವಮಲ್ಲನ (1181-83) ದಂಡನಾಥನಾದ ಜೈನ ರೇಚಣ ಅಥವಾ ರೇಚಿದೇವರಸನ ತೇದಿಯಿಲ್ಲದ ಶಿಕಾರಿಪುರ 197 ನೆಯ ಶಾಸನದ[೧] ಅವತಾರಿಕೆಯಲ್ಲಿ ಜೈನ ಶಾಸನಗಳು ಎಲ್ಲವೆಂಬಂತೆ ಮೊದಲಾಗುವ 'ಶ್ರೀಮತ್ಪರಮ ಗಂಭೀರ ಸ್ಯಾದ್ವಾದಾಮೋಘ ಲಾಂಛನಂ' ಇತ್ಯಾದಿ ಶ್ಲೋಕವೂ ಆ ಮೇಲೆ (ಬಂ. ೨-೩) 'ಧರ್ಮ್ಮಂ ಶಾಂತಿ ಕುಂಥುವೆಂಬೀ ರತ್ನತ್ರಯದೇವರ' ಎಂದು ಜೈನರ ಧರ್ಮನಾಥ, ಶಾಂತಿನಾಥ, ಕುಂಥುನಾಥ ಎಂಬೀ ಮೂರು ತೀರ್ಥಂಕರರ ಹೆಸರೂ ಇದ್ದು ಅದು ಪ್ರತ್ಯಕ್ಷ ಜೈನ ಶಾಸನವೇ ಆದರೂ ಅದರಲ್ಲಿ ಕೊಟ್ಟಿರುವ ಕಳಚುರ್ಯ ವಂಶಾವಳಿಯಲ್ಲಿ ಯಾವೊಬ್ಬ ಅರಸನನ್ನೂ ಜೈನನೆಂದಿಲ್ಲ. ಅವರೆಲ್ಲರಾಗಲಿ ಅಥವಾ ಅವರಲ್ಲಿ ಯಾರೊಬ್ಬನಾಗಲಿ ಜೈನರಾಗಿದ್ದರೆ, ಆ ಜೈನ ಶಾಸನದಲ್ಲಿ ಅದನ್ನೆಂದಿಗೂ ಪ್ರಕಾಶಿಸದೆ ಇರುತ್ತಿದ್ದಿಲ್ಲ ಎಂಬುದಿಷ್ಟು ಕಂಡಿತವಿರುವುದರಿಂದ, ಕಳಚುರ್ಯ ಬಿಜ್ಜಳನಾಗಲಿ ಅವನ ಮಕ್ಕಳಾಗಲಿ ಜೈನರಾಗಿರಲಿಲ್ಲವೆಂಬುದಕ್ಕೆ ಬೇರೆ ಸಾಕ್ಷಿ ಬೇಡ. ಮೇಲೆ ಕಂಡಿರುವ ನದಿಹರಳಹಳ್ಳಿಯ ಶಾಸನದಲ್ಲಿ[೨] ಕಳಚುರ್ಯ ಬಿಜ್ಜಳನು ಜೈನರಿಗೆ ಬಿಟ್ಟ ದತ್ತಿಯನ್ನು ಹೇಳಿದೆಯಾದರೆ, ಅದರಿಂದ ಅವನು ಪರಧರ್ಮ ಸಹಿಷ್ಣುವೆಂದೇ ಹೊರತು ಸ್ವಯಂ ಜೈನನೆಂದಾಗದು.

---

೧. EC VII.

೨. SIE, 1935, ನಂ. 58,

ಹೀಗೆ ಬಸವೇಶ್ವರನ ಸಮಸಾಮಯಿಕರಾಗತಕ್ಕ ಕಳಚುರ್ಯ ಬಿಜ್ಜಳನೂ ಅವನ ದೌಹಿತ್ರನಾದ ಸಿಂದ ಬಿಜ್ಜಳನೂ ಇವರಿಬ್ಬರೇ ಇದ್ದ ಅರಸ ಬಿಜ್ಜಳರಲ್ಲಿ ಯಾವಾತನಾದರೂ ಜೈನನಲ್ಲವೆಂದು ಇಷ್ಟು ಸ್ಪಷ್ಟವಿರುವುದರಿಂದ, ಬಸವೇಶ್ವರನು ಓಲಗಿಸಿದ ಬಿಜ್ಜಳನನ್ನು ಕ್ರಿ. ಶ. 1584 ರ ವೀರಶೈವ ವಿರೂಪಾಕ್ಷ ಪಂಡಿತನ ಚನ್ನಬಸವಪುರಾಣದಲ್ಲಿ ( I. ೫. ೬ ) ಜಿನ ಬಿಜ್ಜಳನೆಂದೂ ಕ್ರಿ. ಶ. ಸು. 1650 ರ ಜೈನ ಧರಣಿ ಪಂಡಿತನ ಬಿಜ್ಜಳರಾಯ ಚರಿತೆಯಲ್ಲಿ[೧]

ಜೈನ ಶಾಸನ ಪಾರ್ಥಿವರ್ಧನ ಚಂದ್ರನು
ಜೈನವಂಶಾನ್ವಯ ತಿಲಕ।
ಜೈನ ಮಾರ್ಗಾನಂದಪರ

ನೆಂದೂ ಹೇಳಿರುವುದಾದರೊ ಇತಿಹಾಸದ ದೃಷ್ಟಿಯಿಂದ ತೀರ ಅಯಥಾರ್ಥವೇ ಸೈ. ಅತಏವ ' ಭವಿ ಬಿಜ್ಜಳನ ಗದ್ದುಗೆಯ ಕೆಳಗೆ ಕುಳ್ಳಿರ್ದು ಓಲೈಸಿಹೆನೆಂದು ನುಡಿವ ರಯ್ಯ ' ಎಂಬ ಬಸವೇಶ್ವರನ ವಚನದಲ್ಲಿಯು ( ಪು. ೧೦೪, ನಂ ೬ ) ಭವಿ ಎಂಬು ದನ್ನು ವೀರಶೈವೇತರನೆಂದೇ ಅರ್ಥವಿಸಬೇಕಲ್ಲದೆ ಜೈನನೆಂದು ಸರ್ವಥಾ ಅಲ್ಲ.

ಇನ್ನೂ ಹೇಳುವುದಾದರೆ ಕೂಡಲ ಸಂಗಮೇಶ್ವರನೇ ಬಸವೇಶ್ವರನ ಕನಸಿ ನಲ್ಲಿ ಸ್ವಯವಾಗಿ ' ಎಲೆ ಮಗನೆ ಬಸವ, ಬಸವಣ್ಣ, ಬಸವಿದೇವ,............... ನೀಂ ಬಿಜ್ಜಳರಾಯನಿಪ್ಪ ಮಂಗಳವಾಡಕ್ಕೆ ಪೋಗು ' ಎಂದು ಆಜ್ಞಾಪಿಸಿದನೆಂದು ವೀರಶೈವನಾದ ಹಾಗೂ ಬಸವೇಶ್ವರನ ಕಿರಿಯ ಸಮಕಾಲೀನನಾದ ಹರಿಹರನ ಬಸವರಾಜದೇವರ ರಗಳೆಯಲ್ಲಿ ( ಪು. ೨೧ ) ಹೇಳಿರಬೇಕಾದರೆ, ವೀರಶೈವವು ಇನ್ನೂ ಸ್ಥಾಪಿತವಾಗಿಲ್ಲದ ( ಅಥವಾ ಬಸವೇಶ್ವರನು ವೀರಶೈವದಲ್ಲಿ ಇನ್ನೂ ಕೂಡಿಲ್ಲದ ) ಕಾಲದ ಆ ಕನಸಿನಂದಿನ ಬಿಜ್ಜಳನು ಶಿವಭಕ್ತನೇ ಆಗಿರಬೇಕಲ್ಲದೆ ಜೈನನಲ್ಲ. ಆ ಬಿಜ್ಜಳನಿಗೂ ಬಸವೇಶ್ವರನಿಗೂ ಕೊನೆಗೆ ತಾಗಿಬಂದ ವೈಮನಸ್ಯ ವನ್ನು ಕೂಡ ಹೇಳಿರುವ ಬಸವಪುರಾಣದಲ್ಲಿಯ ( ಕ್ರಿ. ಶ. 1369 )— ಉದಾ. ಏಕಾಂತದ ರಾಮಯ್ಯನ ಪ್ರಸಂಗದಲ್ಲಿ ( 53. ೪೮ ) ಜೈನರು ಬಿಜ್ಜಳನಲ್ಲಿಗೆ ಒಯ್ದ ವಾದವು ಬಿದ್ದುಹೋಗಲು ಶಿವಭಕ್ತರು ಬಿಜ್ಜಳನ ರಾಜಧಾನಿಯಲ್ಲಿಯೇ

ಅವಿರತಂ ಕಲ್ಯಾಣದೊಳಗೆಣಿ
ಸುವರೆ ಜಿನನುಂ ಬಸದಿಯೆಂಬೀ
ಜವಳಿ ನುಡಿಯಿಲ್ಲೆನಲು ಹುಡಿಹುಡಿ

ಮಾಡಿದರು—ಎಂಬಿತ್ಯಾದಿ ಪ್ರಸ್ತಾವಗಳಿಂದ ತೋರುವಂತೆ ಬಿಜ್ಜಳನು ಜೈನನೂ ಅಲ್ಲ, ಅವರ ವೈಮನಸ್ಯಕ್ಕೆ ಭಿನ್ನಮತೀಯತೆ ಕಾರಣವೂ ಅಲ್ಲ. ಅತಏವ

೧. ಕರ್ಣಾಟಕ ಕವಿಚರಿತೆ II, ಪು. 417-18.

ಬಸವೇಶ್ವರನ ಬಿಜ್ಜಳನು ವಾಸ್ತವಿಕವಾಗಿಯೂ ಜೈನನಾಗಿದ್ದರೆ ಚನ್ನಬಸವಪುರಾಣ ಮತ್ತು ಬಿಜ್ಜಳರಾಯಚರಿತೆಗಿಂತ ಎಷ್ಟೋ ಹಿಂದಣ ಹಾಗೂ ಅವರ ಕಾಲಕ್ಕೆ ಶಾನೆ ಸಮೀಪತರವಾದ ಬಸವರಾಜದೇವರ ರಗಳೆ ಮತ್ತು ಬಸವಪುರಾಣಗಳಲ್ಲಿ ಅದನ್ನು ಕಂಡಿತವಾಗಿಯೂ ಪ್ರಕಟವಾಗಿ ಹೇಳದೆ ಇರುತ್ತಿದ್ದಿಲ್ಲ ಎಂಬುದರಿಂದ, ಕಳಚುರ್ಯರ ಕಾಲದ ಶಾಸನಗಳಲ್ಲಿ ಹೇಗೋ ಹಾಗೆಯೇ ಈ ಕಾವ್ಯಗಳಲ್ಲಿಯೂ ಜೈನನೆನ್ನದ ಬಿಜ್ಜಳನು ಸರ್ವಥಾ ಜೈನನಲ್ಲ.

ಇನ್ನು ಮಾತಾಮಹನೂ ದೌಹಿತ್ರನೂ ಆದ ಈ ಕಳಚುರ್ಯ ಹಾಗೂ ಸಿಂದ ಬಿಜ್ಜಳರಲ್ಲಿ ಬಸವೇಶ್ವರನು ಓಲಗಿಸಿದ ಬಿಜ್ಜಳನು ಯಾವನೆಂದು ನೋಡೋಣ.

೧. ಬಸವೇಶ್ವರನ ವಚನದಲ್ಲಿಯ ಭವಿ ಬಿಜ್ಜಳನು ವೀರಶೈವನಲ್ಲವೆಂದು ಕಂಡಿತವಿರುವುದರಿಂದಲೂ ಮೇಲೆ ಕಂಡಿರುವಂತೆ ಕ್ರಿ. ಶ. 1187ರ ಬೆಣಚಮಟ್ಟಿಯ (B) ಶಾಸನದಲ್ಲಿ ಸಿಂದ ಬಿಜ್ಜಳನನ್ನು ಪರಮಶೈವರಾದ ನಂಬಿ ಓಹಿಲರೊಂದಿಗೆ ಹೋಲಿಸಿರುವುದರಿಂದ ಆತನು ಪ್ರಾಯಶಃ ವೀರಶೈವನೇ ಎನಿಸುವುದರಿಂದಲೂ ಸಿಂದ ಬಿಜ್ಜಳನು ಬಸವೇಶ್ವರನ 'ಭವಿ' ಬಿಜ್ಜಳನಾಗಿರಲಾರನು.

೨. ಬೆಣಚಮಟ್ಟಿಯ (B) ಶಾಸನದಲ್ಲಿ ಹೇಳಿರುವ ನಂಬಿ ಮತ್ತು ಓಹಿಲರ ಹೆಸರುಗಳು ಬಸವೇಶ್ವರನ ವಚನಗಳಲ್ಲಿ ದೊರೆವುದರಿಂದ, ಆ ಶಿವಭಕ್ತರನ್ನು ಬಸವೇಶ್ವರನು ಹೊಗಳಿದಂದಿನಿಂದ ತಾನೆ ಅವರು ಕರ್ಣಾಟಕದ ವೀರಶೈವರಲ್ಲಿ ಪ್ರಖ್ಯಾತರಾದರೆಂದಾದರೆ, ಬಸವೇಶ್ವರನ ವಚನಗಳು ಕ್ರಿ. ಶ. 1187 ನೆಯ ಈ ಶಾಸನಕ್ಕೆ ಸಾಕಷ್ಟು ಹಿಂದೆಯೇ ರಚಿತವಾಗಿದ್ದು ಆಗ್ಗ ಲೋಕವಾಡಿಕೆಯಾಗಿರಬೇಕು ಎಂದಾಗುವುದರಿಂದ, ಮೇಲೆ ಕಂಡಿರುವಂತೆ ತನ್ನ ತಂದೆಯಾದ II ಚಾವುಂಡನು ಕ್ರಿ. ಶ. 1170–71 ರಲ್ಲಿ ಕಾಲವಾಗಿ ತಾನು ಪಟ್ಟಕ್ಕೆ ಬಂದರೂ 1180 ರಷ್ಟಕ್ಕೆ ರಾಜ್ಯಭಾರವನ್ನು ವಹಿಸಿಕೊಂಡ ಸಿಂದ ಬಿಜ್ಜಳನು ಬಸವೇಶ್ವರನ ಬಿಜ್ಜಳನಾಗಿರಲಾರನು.

೩. ಸಿಂದ ಬಿಜ್ಜಳನ ಎಲ್ಲವೆಂಬಂತೆ ಶಾಸನಗಳಲ್ಲಿ ಅವನ ಹೆಸರೊಂದಿಗೆ ಅವನ ತಮ್ಮ ವಿಕ್ರಮಾದಿತ್ಯನ ಹೆಸರೂ ಇದ್ದು ಅವರು ಪ್ರಾಯಶಃ ಜತೆಯಾಗಿ ಆಳುತ್ತಿದ್ದರೆಂದೂ ಮೇಲೆ ಕಂಡಿರುವಂತೆ ಬೆಣಚಮಟ್ಟಿಯ (B) ಶಾಸನದಲ್ಲಿ ವಿಕ್ರಮಾದಿತ್ಯನನ್ನು ಚಕ್ರವರ್ತಿ ಪದವಿಗೆ ಯೋಗ್ಯನೆಂದಿರುವುದರಿಂದ ಬಿಜ್ಜಳನು ಹಿರಿಯನಾದರೂ ವಿಕ್ರಮಾದಿತ್ಯನು ಹೆಚ್ಚಿನ ಪ್ರತಾಪಿ ಎಂದೂ ತೋರುವುದರಿಂದ, ಸಿಂದ ಬಿಜ್ಜಳನೇ ಬಸವೇಶ್ವರನ ಬಿಜ್ಜಳನಾಗಿದ್ದರೆ, ಬಸವೇಶ್ವರನ ವಚನಗಳಲ್ಲಿಯೂ ಅವರ ಸಮಸಾಮಯಿಕನಾದ ಹರಿಹರನ (ಕ್ರಿ. ಶ. ಸು. 1145 – 1220) ಬಸವ

ರಾಜದೇವರ ರಗಳೆಯಲ್ಲಿಯೂ ಇಬ್ಬರೂ ಸೋದರರ ಹೆಸರುಗಳು ಜತೆಯಲ್ಲಿ ಬಾರದಿರುತ್ತಿದ್ದಿಲ್ಲ, ಅಥವಾ ವಿಕ್ರಮಾದಿತ್ಯನ ಹೆಸರು ಒಮ್ಮೆಯಾದರೂ ಬಾರದೆ ಇರುತ್ತಿದ್ದಿಲ್ಲ. ಹಾಗಿಲ್ಲವಕಾರಣ ಬಸವೇಶ್ವರನ ಬಿಜ್ಜಳನು ಸಿಂದ ಬಿಜ್ಜಳನಲ್ಲ.

೪. ಶಿವಭಕ್ತನಾದ ಏಕಾಂತದ ರಾಮಯ್ಯನು ಅಬ್ಬಲೂರಿನ ಜೈನ ಬಸದಿಯಲ್ಲಿಯ ಜಿನಮೂರ್ತಿಯನ್ನು ಕೆಡವಿ ಅಲ್ಲಿ ವೀರ ಸೋಮನಾಥನ ಲಿಂಗವನ್ನು ಪ್ರತಿಷ್ಠಿಸಿರುವನೆಂದು ಜೈನರು ಮಹಾಮಂಡಳೇಶ್ವರನಾದ ಬಿಜ್ಜಳನಲ್ಲಿ ದೂರು ಕೊಡುತ್ತಲೆ, ಆತನು ರಾಮಯ್ಯನನ್ನು ಕರತರಿಸಿ ತಕ್ಕ ವಿಚಾರ ನಡಿಸಿ, ರಾಮಯ್ಯನಲ್ಲಿ ತಪ್ಪಿಲ್ಲವೆಂದು ಕಂಡು ಜೈನರಿಗೆ ಬುದ್ಧಿ ಹೇಳಿ ಅವರನ್ನು ಹಿಂದಟ್ಟಿ ಏಕಾಂತದ ರಾಮಯ್ಯನ ಕಾಲು ತೊಳೆದು, ಅವನಿಗೆ ಜಯಪತ್ರವಿತ್ತು ಅವನ ಅದೇ ವೀರ ಸೋಮನಾಥ ದೇವಾಲಯಕ್ಕೆ ಬನವಾಸಿ ೧೨೦೦೦ದ ಸತ್ತಳಿಗೆ ೭೦ ರಲ್ಲಿಯ ಗೋಗಾವೆ ಎಂಬ ಹಳ್ಳಿಯನ್ನು ದತ್ತಿ ಬಿಟ್ಟನೆಂದೂ ಆ ಮೇಲೆ ಚಾಳುಕ್ಯ IV ಸೋಮೇಶ್ವರನೂ ಏಕಾಂತದ ರಾಮಯ್ಯನನ್ನು ಕರತರಿಸಿ ಆ ದೇವಾಲಯಕ್ಕೆ ದತ್ತಿ ಬಿಟ್ಟನೆಂದೂ ಆ ಬಳಿಕ ಕಾದಂಬ ಮಹಾಮಂಡಳೇಶ್ವರ ಕಾಮದೇವನೂ ರಾಮಯ್ಯನನ್ನು ಬರಿಸಿಕೊಂಡು ಆ ದೇವಾಲಯಕ್ಕೆ ದತ್ತಿ ಬಿಟ್ಟನೆಂದೂ ತೇದಿಯಿಲ್ಲದ ಅಬ್ಬಲೂರಿನ ಶಾಸನದಲ್ಲಿ[೧] ಹೇಳಿದೆ. ಇತರ ಶಾಸನಗಳಿಂದ ಕ್ರಿ. ಶ. 1181 ರಿಂದ 1203 ರ ವರೆಗೆ ತೇದಿ ದೊರೆವ ಕಾದಂಬ ಕಾಮದೇವನ ಆಳಿಕೆಯಲ್ಲಿ ಹುಟ್ಟಿದ ಈ ಶಾಸನದ ತೇದಿ ಸು. 1190 ಆಗಿರಬಹುದು ಈ ಏಕಾಂತದ ರಾಮಯ್ಯನನ್ನು ಕುರಿತು

ಆ ಸಮಯವೊಂದೆಸೆಯೊಳಿರಲು
ಲ್ಲಾಸದಿಂ ಬಸವಂ ಸಹಿತ ಮಹಿ
ಮಾಸಮರ್ಥರು ಭಕ್ತರೋಲಗವಿತ್ತು ಕುಳ್ಳಿರಲು ॥ ೩೭ ॥
ಧಾರುಣೀಶನು ಬಿಜ್ಜಳನು ಪರಿ
ವಾರ ಸಹಿತಂ ಬಂದು ನೋಡಲು
ಪೌರಜನ ತಾವೆಲ್ಲರುಂ ನಡೆತಂದು ಹಿಂದಿರಲು ।
ವೀರ ಶೃಂಗಾರದೊಳಮರ್ದಿಭ
ವೈರಿಯಂತೇಕಾಂತರಾಮನು........................॥ ೩೮ ॥

ತನ್ನ ತಲೆಯನ್ನು ಕಡಿದುಕೊಂಡು ಏಳು ದಿನಗಳ ಬಳಿಕ ಅದನ್ನು ಮರಳಿ ಅಟ್ಟಿಗೆ ಸಂದಿಸಿದ ಪವಾಡವನ್ನು ಮೆರಸಿದನೆಂದು ಬಸವಪುರಾಣದಲ್ಲಿ (ಸಂ. 52) ಹೇಳಿರುವುದರಿಂದ, ಏಕಾಂತದ ರಾಮಯ್ಯನ ಬಿಜ್ಜಳನೂ ಬಸವೇಶ್ವರನ ಬಿಜ್ಜಳನೂ ಒಬ್ಬನೇ ಎಂದಾಗುತ್ತದೆ. ಆ ಬಿಜ್ಜಳನು ರಾಮಯ್ಯನಿಗೆ ದತ್ತಿ ಬಿಟ್ಟ ಗೋಗಾವೆ

೧. FKD, ಪು. 482 – 484; ಕರ್ಣಾಟಕ ಕವಿಚರಿತೆ I, ಪು. 297 – 298.

ಇರುವ ಬನವಾಸಿ ೧೨೦೦೦ ವಾದರೊ ಮೇಲೆ ಕಂಡಿರುವ ಶಿಕಾರಿಪುರ 108[೧] ಮೊದಲಾದ ಶಾಸನಗಳಿಂದ ಕಳಚುರ್ಯ ಬಿಜ್ಜಳನ ರಾಜ್ಯದಲ್ಲಿ ತಾನೆ ಸೇರಿದ್ದಿತಲ್ಲವೆ ಸಿಂದ ಬಿಜ್ಜಳನ ಸಿಂದವಾಡಿಯಲ್ಲಿ ಯಾವಂದೂ ಇದ್ದಿಲ್ಲದುದರಿಂದ, ಬಸವೇಶ್ವರನ ಬಿಜ್ಜಳನು ಕಳಚುರ್ಯ ಬಿಜ್ಜಳನಲ್ಲದೆ ಸಿಂದ ಬಿಜ್ಜಳನಲ್ಲ. ಏಕಾಂತದ ರಾಮಯ್ಯ ನಿಗೆ ಬಿಜ್ಜಳನು ದತ್ತಿ ಬಿಟ್ಟಂದು ಆತನು ಮಹಾಮಂಡಳೇಶ್ವರನಾಗಿದ್ದನೆಂದು ಅಬ್ಬಲೂರಿನ ಶಾಸನದಲ್ಲಿ[೨] ಸ್ಪಷ್ಟವಾಗಿ ಹೇಳಿರುವುದರಿಂದ, ಕಳಚುರ್ಯ ಬಿಜ್ಜಳನು ಮಹಾಮಂಡಳೇಶ್ವರನಾಗಿದ್ದ ಕ್ರಿ. ಶ. 1140–45 ರಿಂದ 1163 ರೊಳಗೆ ಏಕಾಂತದ ರಾಮಯ್ಯನು ಅವನ ಆಸ್ಥಾನಕ್ಕೆ ಹೋಗಿರಬೇಕು. ಹಾಗಾದರೆ ರಾಮಯ್ಯನು ಅವನ ಆಸ್ಥಾನಕ್ಕೆ ಹೋದಾಗ ಅಲ್ಲಿದ್ದನೆಂಬ ಬಸವೇಶ್ವರನು ಆ ಮುಂಚಿನಿಂದಲೇ ಬಿಜ್ಜಳನನ್ನು ಓಲಗಿಸುತ್ತಿರಬೇಕು, ಅಂದರೆ ಬಿಜ್ಜಳನು ಮಹಾಮಂಡಳೇಶ್ವರನಾಗಿದ್ದಂದು ತಾನೆ ಬಸವೇಶ್ವರನು ಆತನಲ್ಲಿಗೆ ಹೋಗಿರಬೇಕು.

೫. ಹರಿಹರನ ರೇವಣ ಸಿದ್ಧೇಶ್ವರನ ರಗಳೆಯಲ್ಲಿ[೩]

ಅಂತಿರ್ದು ಮತ್ತೆ ಮಂಗಳವಾಡದೊಳ್ಪೊಕ್ಕು
ಸಂತತಂ ಬಿಜ್ಜಳನ ಸಭೆಯೊಳ್ಮನಂ ಮಿಕ್ಕು (ಪು. ೨೯)

..............................................

ಇರಲಿತ್ತಲತ್ತ ಮಂಗಳವಾಡದೊಳಗಿರ್ಪ
ನರಪ ಬಿಜ್ಜಳರಾಯನೋಲಗದೊಳೆಸೆದಿರ್ಪ (ಪು. ೩೧)

..............................................

ಮಂಗಳವಾಡದೊಳ್ ಗುಡಿಗಟ್ಟಿ ಸಕಲ ಪರಿಜನ
ಸಹಿತಂ ಬಿಜ್ಜಣರಾಯನಿದಿರ್ಗೊಂಡು........... (ಪು. ೩೭)

ಎಂದೂ ಬಸವರಾಜದೇವರ ರಗಳೆಯಲ್ಲಿ (ಪು. ೨೧) ಬಸವೇಶ್ವರನಿಗೆ ಸ್ವಪ್ನದಲ್ಲಿ ಸಾಕ್ಷಾತ್ಕರಿಸಿದ ಕೂಡಲ ಸಂಗಮೇಶ್ವರನು 'ಎಲೆ ಮಗನೆ ಬಸವ, ನೀಂ ಬಿಜ್ಜಳ ರಾಯನಿಪ್ಪ ಮಂಗಳವಾಡಕ್ಕೆ ಪೋಗು' ಎಂದೂ ಹೇಳಿರುವಲ್ಲಿ ಮಂಗಳವಾಡವು ಬಿಜ್ಜಳನ ರಾಜಧಾನಿಯಾಗಿದ್ದು ಬಸವೇಶ್ವರನು ಅವನ ಆಸ್ಥಾನವನ್ನು ಹೊಕ್ಕಂದು ಬಿಜ್ಜಳನು ಆ ರಾಜಧಾನಿಯಲ್ಲಿ ಇದ್ದನೆಂದೂ ಬಸವೇಶ್ವರನು ಬಿಜ್ಜಳನನ್ನು ಓಲಗಿಸುತ್ತಿದ್ದಾಗ ಅವನ ಆಸ್ಥಾನದಲ್ಲಿ ಮಂಡಳೇಶ್ವರರೂ ಮಹಾಸಾಮಂತರೂ ಇದ್ದರೆಂಬ ಬಸವರಾಜದೇವರ ರಗಳೆಯಲ್ಲಿ (ಪು. ೩೫) ಮಹಾಮಂಡಳೇಶ್ವರರನ್ನು ಹೇಳದಿರುವುದರಿಂದ, ಸ್ವಯಂ ಬಿಜ್ಜಳನೇ ಆಗ್ಗೆ ಮಹಾಮಂಡಳೇಶ್ವರನಾಗಿದ್ದನೆಂದೂ ತಿಳಿಯು

---

೧. EC, VII. ೨. FKD, ಪು. 484. ೩. ಶಿವಾನುಭವ ಗ್ರಂಥಮಾಲಾ, ನಂ. ೩೫ (ಹರಿಹರನ ರಗಳೆಗಳು, ಭಾಗ ೨)

ತ್ತದೆ. ಕ್ರಿ. ಶ. 1147 ರ ಮಾಸವಾಡದ ಶಾಸನದಿಂದ[೧] ಕಳಚುರ್ಯ ಬಿಜ್ಜಳನ ರಾಜಧಾನಿ ಆಗ್ಗೆ ಮಂಗಳವಾಡವೆಂದು ಕಂಡಿರುವೆವಲ್ಲದೆ, (ಮೇಲೆ ಕಂಡಿರುವಂತೆ) ಹೇಮಾದ್ರಿಯು ಮಂಗಲವೇಷ್ಟಕನಾದ ಬಿಲ್ಲಣನು ಸಿಂದ ಬಿಜ್ಜಳನೇ ಎಂದು ನಿಶ್ಚಯವೂ ಇಲ್ಲ, ಮಂಗಲವೇಷ್ಟಕ ಎಂಬ ಮಂಗಳವೇಡೆಯೂ ಹರಿಹರನ ರಗಳೆಗಳ ಮಂಗಳವಾಡ (= ಮಂಗಲವಾಟಕ) ವೂ ಒಂದೇ ಊರೊ ಬೇರೆ ಬೇರೆಯೊ ಎಂದು ನಿಶ್ಚಯವೂ ಇಲ್ಲ. ಅತಏವ ಮಂಗಳವಾಡದ ಬಿಜ್ಜಳನು ಆಗ್ಗೆ ಮಹಾಮಂಡಳೇಶ್ವರನಾಗಿದ್ದ ಕಳಚುರ್ಯ ಬಿಜ್ಜಳನೆಂದೇ ಸಿದ್ಧವಾಗುವುದರಿಂದ, ಬಸವೇಶ್ವರನ ಬಿಜ್ಜಳನು ಆತನೇ ವಿನಾ ಸಿಂದ ಬಿಜ್ಜಳನಲ್ಲ.

೬. 'ಅರಸು ವಿಚಾರ ಸಿರಿಯು ಶೃಂಗಾರ ಸ್ಥಿರವಲ್ಲ ಮಾನವ.
ಕೆಟ್ಟಿತ್ತು ಕಲ್ಯಾಣ ಹಾಳಾಯಿತ್ತು ನೋಡಯ್ಯ! ಒಬ್ಬ ಜಂಗಮ
ದಭಿಮಾನದಿಂದ ಚಾಳುಕ್ಯರಾಯನ ಆಳಿಕೆ ತೆಗೆಯಿತ್ತು,
ಸಂದಿತ್ತು ಕೂಡಲ ಸಂಗಮದೇವ ನಿಮ್ಮ ಕವಳಿಕೆಗೆ'

ಎಂಬೀ ವಚನದಲ್ಲಿ[೨] ಬಸವೇಶ್ವರನು ಕಲ್ಯಾಣಕ್ಕೂ ಚಾಳುಕ್ಯರಾಯನ ಆಳಿಕೆಯ ಮುಗಿತಾಯಕ್ಕೂ ಗಂಟಿಕ್ಕಿರುವುದರಿಂದ, ಆ ಕಲ್ಯಾಣವು ಕಲ್ಯಾಣದ ಚಾಳುಕ್ಯರೆಂಬ ಪಡುವಣ ಚಾಳುಕ್ಯರ ರಾಜಧಾನಿಯಾದ ಕಲ್ಯಾಣವೆಂದು ತಿಳಿವಂತೆಯೇ, ಐಶ್ವರ್ಯದ ನಶ್ವರತೆಯನ್ನೂ ಶೃಂಗಾರದ ಅಸ್ಥಿರತೆಯನ್ನೂ ನಿದರ್ಶಿಸಲಿಕ್ಕೆ ವಾತಾಪಿಯ ಚಳುಕ್ಯರ ರಾಜಧಾನಿಯಾಗಿದ್ದ ಬಾದಾಮಿಯನ್ನಾಗಲಿ ರಾಷ್ಟ್ರಕೂಟರ ರಾಜಧಾನಿಯಾಗಿದ್ದ ಮಾನ್ಯಖೇಟವನ್ನಾಗಲಿ ಹೇಳದೆ ಕಲ್ಯಾಣವನ್ನು ತಾನೆ ಇಲ್ಲಿ ಹೇಳಿರುವುದರಿಂದ, ಬಸವೇಶ್ವರನು ಕಲ್ಯಾಣದ ಆ ಚಾಳುಕ್ಯರಾಯನ ಆಳಿಕೆ ಕೊನೆಗಂಡುದನ್ನು ಸ್ವಯಂ ಕಂಡಿರಬೇಕು, ಆತನು ಕಂಡ ಕಲ್ಯಾಣವು ಐಶ್ವರ್ಯ ಸಂಪನ್ನವಾಗಿರಬೇಕು, ಶೃಂಗಾರಭರಿತವಾಗಿರಬೇಕು ಎಂದು ಮಾತ್ರವಲ್ಲ, ಆತನಿಗೆ ಆ ಕಲ್ಯಾಣದಲ್ಲಿ ತಕ್ಕಷ್ಟು ಆತ್ಮಸಂಯೋಗವೂ ( personal interest ), ಅತಏವ ಸಮೀಪತರವಾದ ಸಂಸರ್ಗವೂ, ಇದ್ದಿರಬೇಕು, ಅಂದರೆ ತನ್ನ ಜೀವಮಾನದ ಕೆಲವಾದರೂ ಸುಭಿಕ್ಷ ವರ್ಷಗಳನ್ನು ಆತನು ಅಲ್ಲಿ ಸಲ್ಲಿಸಿರಬೇಕು ಎಂದು ತಿಳಿಯುತ್ತದೆ. ಆ ಚಾಳುಕ್ಯರಾಯನ ಆಳಿಕೆ (= ಅರಸುತನ, ಪ್ರಭುತ್ವ) ತೆಗೆಯಿತ್ತು, ಅಂದರೆ ಅಪಹರಿಸಲ್ಪಟ್ಟಿತು[೩] ಎಂಬುದರಿಂದ ಅವನ ರಾಜ್ಯಪದವನ್ನು ಪರಕೀಯನೊಬ್ಬನು ಸೆಳಕೊಂಡಿರಬೇಕೆಂದೂ ಅದು 'ಸಂದಿತ್ತು ಕೂಡಲ ಸಂಗಮ

೧. ಹರಿಹರದೇವ (ಕೊಲ್ಹಾಪುರದ ರಾಜಾರಾಮ ಕಾಲೇಜಿನ ಕರ್ಣಾಟಕ ಸಂಘದವರ ಪ್ರಕಟನೆ), ಪು. ೪೪. ೨. ಬಸವೇಶ್ವರನ ವಚನಗಳು, ಪು. ೯೧, ನಂ. ೯೦. ೩. ತೆಗೆದನೇ ಬುಧರ್ಗಿತ್ತ ವೃತ್ತಿಯನುಚಿತವಂ ಮರೆದು ॥ (ಬಸವಪುರಾಣ, 45, ೧೯)

ದೇವ ನಿಮ್ಮ ಕವಳಿಕೆಗೆ' ಅಂದರೆ ಅದು ಶಿವನ ಕಪಾಲಿಕೆ (= ಕವಳಿಕೆ) ಎಂಬ ಭಿಕ್ಷಾಪಾತ್ರಕ್ಕೆ[೧] ಸಂದಿತು ಎಂಬುದರಿಂದ ಅದು ಮುಗಿಯಿತು, ನಾಮಶೇಷವಾಯಿತು ಎಂದೂ ಸ್ಪಷ್ಟವಿರುವುದರಿಂದ, ಆ ಚಾಳುಕ್ಯರಾಯನಾದರೊ ಕಳಚುರ್ಯ ಬಿಜ್ಜಳನು ತನ್ನ ರಾಜ್ಯಾಧಿಕಾರವನ್ನು ತೆಗೆವ ವರೆಗೆ, ತನ್ನ ಪ್ರಭುತ್ವವನ್ನು ಆತನು ಅಪಹರಿಸುವ ವರೆಗೆ ಚಾಳುಕ್ಯ ಸಾಮ್ರಾಜ್ಯವನ್ನು ಸರ್ವಸಂಪನ್ನವಾದ ಕಲ್ಯಾಣದ ರಾಜಧಾನಿಯಿಂದ ಆಳಿದ ಪಡುವಣ ಚಾಳುಕ್ಯ III ತೈಲನೇ ವಿನಾ ಕಳಚುರ್ಯರ ಬಳಿಕ ಆ ಚಾಳುಕ್ಯರ ಪಟ್ಟದಲ್ಲಿ ಕುಳ್ಳಿರಿಸಲ್ಪಟ್ಟರೂ ಮೇಲೆ ಕಂಡಿರುವಂತೆ ಕಳಚುರ್ಯ ಬಿಜ್ಜಳನಿಂದ ಈಚೆಯ ಕಳಚುರ್ಯ ಸೋದರರ ಆಳಿಕೆಯಲ್ಲಿಯೇ ಅಲ್ಲವಾದರೆ ಅವರ ಪತನದೊಂದಿಗೆ ಕುಂದಿದ ಕಲ್ಯಾಣದಲ್ಲಿ ೧–೨ ವರ್ಷವೇನೋ ತನ್ನ ರಾಜಧಾನಿ ಇದ್ದ ಚಾಳುಕ್ಯ IV ಸೋಮೇಶ್ವರನಲ್ಲ. ಹೀಗೆ ಬಸವೇಶ್ವರನ ಚಾಳುಕ್ಯರಾಯನು III ತೈಲನೆಂದು ಕಂಡಿತವಾಗುವುದರಿಂದ, ಅವನ ಬಿಜ್ಜಳನು ಆ III ತೈಲನಿಂದ ಕಲ್ಯಾಣದ ಸಿಂಹಾಸನವನ್ನು ಸೆಳಕೊಂಡ ಕಳಚುರ್ಯ ಬಿಜ್ಜಳನಲ್ಲದೆ ಬೇರೊಬ್ಬನಲ್ಲ. ಬಸವೇಶ್ವರನೊಮ್ಮೆ ಕಲ್ಯಾಣದಲ್ಲಿ ಬಿಜ್ಜಳನ ಆಸ್ಥಾನದಲ್ಲಿದ್ದಾಗ ಆಕಾಶದಿಂದ ಆಕಸ್ಮಿಕವಾಗಿ ಬಂದು ಅವರ ಸಮ್ಮುಖದಲ್ಲಿ ಬಿದ್ದ ಓಲೆಯನ್ನು ಓದಿ—

ನನ್ನಿಯನೆ ಪೇಳುವೆನರಸ ಕೇಳ್
ನಿನ್ನ ಚಾಳುಕ್ಯಾನ್ವಯುದವರು
ಮುನ್ನ ನಿಕ್ಷೇಪಿಸಿದದೆಂಬತ್ತೆಂಟು ಕೋಟಿ ಧನ ।
ನಿನ್ನ ಸಿಂಹಾಸನದ ಕೆಳಗಿದೆ

ಎಂದು ತೋರಿಸಿಕೊಟ್ಟನೆಂದು ಬಸವಪುರಾಣದಲ್ಲಿ (5. ೫೭) ಹೇಳಿರುವಲ್ಲಿಯೂ ಬಿಜ್ಜಳನೆಂಬ ಹೆಸರಿನ ಅರಸನು ಕಳಚುರ್ಯರಲ್ಲಿ ಮತ್ತು (ಬಡಗಣ) ಸಿಂದರಲ್ಲಿಯೇ ವಿನಾ ಚಾಳುಕ್ಯರಲ್ಲಿ ಇಲ್ಲದಿದ್ದರೂ ಬಸವೇಶ್ವರನ ಬಿಜ್ಜಳನನ್ನು ಚಾಳುಕ್ಯಾನ್ವಯದವನೆನ್ನಬೇಕಾದರೆ, ಸ್ವಯಂ ಚಾಳುಕ್ಯ ವಂಶೀಯನಲ್ಲದ ಆತನು ಚಾಳುಕ್ಯರ ಉತ್ತರಾಧಿಕಾರಿಯಾವರೂ ಆಗಿರಬೇಕು, ಅಂದರೆ ಚಾಳುಕ್ಯರಂತೆಯೇ ಅವನೂ ಕಲ್ಯಾಣದ ಒಡೆಯನಾಗಿ ಅವರ ರಾಜ್ಯವನ್ನು ಅವರ ಬಳಿಕಲೇ ಆಳಿರಬೇಕು ಎಂಬ ಕಾರಣದಿಂದ ತಾನೆ ಅವನನ್ನು ಹಾಗೆಂದಿರಬೇಕು ಎಂದು ಪ್ರತ್ಯಕ್ಷವಿರುವುದರಿಂದ, ಬಸವೇಶ್ವರನ ಬಿಜ್ಜಳನು ಚಾಳುಕ್ಯರ ಉತ್ತರಾಧಿಕಾರಿಯಾಗಿ ಅವರ ಸಮನಂತರವೇ

೧. ಪ್ರಮಥರುದ್ರ ಪುರಾತನ ಗಣೋ। ತ್ರಮರ ಕವಳಿಗೆಗಯ್ದಿ ಸಂದಿತ್ತು....। (ಬಸವ ಪುರಾಣ, 39. ೬೨); ಬಿಜ್ಜಳನ ಸಾಮ್ರಾ। ಜ್ಯೋನ್ನತಿಯನೀಶನ ಕವಳಿಗೆಯೊಳಂತು ತೊಡೆಯಿಸುತ ॥ (ಅದೇ, 61; ೭)

ಕಲ್ಯಾಣದಲ್ಲಿ ಆಳಿದ ಬಿಜ್ಜಳನಾಗಿರಬೇಕು ಎಂದು ಬೇಕಾದಷ್ಟು ಸ್ಪಷ್ಟವಾಗುತ್ತದೆ. ಹರಿಹರನ ಬಸವರಾಜದೇವರ ರಗಳೆಯಲ್ಲಿ ಬಿಜ್ಜಳನ ರಾಜಧಾನಿ ಮಂಗಳವಾಡ ಎಂದದೆಯಲ್ಲದೆ ಕಲ್ಯಾಣದ ಹೆಸರಿಲ್ಲವಾದರೆ, ಅಪೂರ್ಣವಾಗಿರುವ ಆ ಗ್ರಂಥದ ದೊರೆತಷ್ಟರ ಭಾಗದಲ್ಲಿ ಬಿಜ್ಜಳನ ಆಸ್ಥಾನದಲ್ಲಿ ಮಹಾಮಂಡಳೇಶ್ವರರೂ ಇದ್ದ ರೆನ್ನದೆ ಮಂಡಳೇಶ್ವರರೂ ಮಹಾಸಾಮಂತರೂ ಇದ್ದರೆಂದು ( ಪು. ೩೫ ) ಮಾತ್ರ ಹೇಳಿರುವ ಕಾರಣ ಬಿಜ್ಜಳನು ಮಹಾಮಂಡಳೇಶ್ವರನಾಗಿದ್ದಂದಿನ ಕಥೆಯೇ ಇನ್ನೂ ಮುಗಿಯದಿರುವಲ್ಲಿ, ಆ ಮೇಲಣ ಕಥಾಭಾಗವು ನಷ್ಟವಾಗಿದೆ ಎಂದು ಪ್ರತ್ಯಕ್ಷವಿರು ವುದರಿಂದ, ಬಿಜ್ಜಳನು ಮಹಾಮಂಡಳೇಶ್ವರನಾಗಿದ್ದಾಗ ಅವನ ರಾಜಧಾನಿ ಮಂಗಳ ವಾಡವೆಂದು ಮಾತ್ರ ನಿಷ್ಪನ್ನವಾಗುತ್ತದಲ್ಲದೆ, ಆತನು ಚಕ್ರವರ್ತಿಯಾದ ಮೇಲೂ ಕಲ್ಯಾಣವು ಆತನ ರಾಜಧಾನಿಯಾಗಿರಲಿಲ್ಲ ಎಂದಲ್ಲ. ಅತಏವ ಬಸವೇಶ್ವರನ ಬಿಜ್ಜಳನು ಕಳಚುರ್ಯ ಬಿಜ್ಜಳನೇ ವಿನಾ ಚಾಳುಕ್ಯರ ಉತ್ತರಾಧಿಕಾರಿಯೂ ಅಲ್ಲದ, ಕಲ್ಯಾಣದಲ್ಲಿ ಕದಾಪಿ ನೆಲೆವೀಡೂ ಇದ್ದಿಲ್ಲದ ಸಿಂದ ಬಿಜ್ಜಳನೆಂದಿಗೂ ಅಲ್ಲ.

ಇವೆಲ್ಲ ಕಾರಣಗಳಿಂದ ಕಳಚುರ್ಯ ಬಿಜ್ಜಳನೇ ಬಸವೇಶ್ವರನ ಬಿಜ್ಜಳನೆಂದು ನಿಷ್ಕೃಷ್ಟವಾಗುವುದರಿಂದ, ಇನ್ನು ಬಸವೇಶ್ವರನ ಜೀವಮಾನದಲ್ಲಿಯ ವಿಶೇಷ ಘಟನೆ ಗಳನ್ನು ಹೀಗೆ ತೇದಿಸಬಹುದು.

ತನ್ನ ತಂದೆಯಾದ ಪೆರ್ಮಾಡಿಯ ಕಾಲಾನಂತರ ಕ್ರಿ. ಶ. 1140–45 ರೊಳಗೆ ಪಟ್ಟವೇರಿ ಮಹಾಮಂಡಳೇಶ್ವರನಾಗಿದ್ದು ಆ ಮೇಲೆ 1161 – 62 ರಲ್ಲಿ ಕಲ್ಯಾಣದ ಚಕ್ರವರ್ತಿಯಾದ ಬಿಜ್ಜಳನು ಇನ್ನೂ ಮಹಾಮಂಡಳೇಶ್ವರನಾಗಿದ್ದಾಗ ಕ್ರಿ. ಶ. ಸು. 1150 ರಲ್ಲಿ ಅವನ ಆಸ್ಥಾನವನ್ನು ಹೊಕ್ಕಿರಬಹುದಾದ ಬಸವೇಶ್ವರನ ವಯಸ್ಸು ಆಗ್ಗ ೨೦ ರಿಂದ ೨೫ ರೊಳಗೆಂದರೆ ಈತನು ಕ್ರಿ. ಶ. 1125 ರಿಂದ 1130 ರೊಳಗೆ ಹುಟ್ಟಿರಬೇಕು. ಬಸವೇಶ್ವರನು ಭೂಮಿದೇವಾಗ್ರಣಿಯಾದ (ಬಸವಪುರಾಣ 2.೪೬) ಮಾದಿರಾಜನೆಂಬ ವಿಪ್ರನ ( ಬಸವರಾಜದೇವರ ರಗಳೆ, ಪು. ೫ ) ಮಗನು. ಮೇಲೆ ಕಂಡಿರುವ ಅರ್ಜುನವಾಡದ ಶಾಸನದಿಂದ[೧] ಬಸವೇಶ್ವರನು ಮಾದಿರಾಜನ ಎರಡ ನೆಯ ಮಗನೆಂದು ತಿಳಿಯುತ್ತದೆ ( ಆದರೆ ಈ ಸಂಗತಿಯನ್ನು ಬಸವರಾಜದೇವರ ರಗಳೆಯಲ್ಲೂ ಬಸವಪುರಾಣದಲ್ಲೂ ಹೇಳಿಲ್ಲ ). ಬಸವೇಶ್ವರನ ಅಣ್ಣನಾದ ದೇವ ರಾಜನನ್ನು ದೇವರಾಜ ಮುನಿಪ ( ಓಂ. ೩೫ – ೩೬ ) ಎಂದಿರುವೊಂದಿಗೆ ಆ ಶಾಸನ ದಲ್ಲಿ ಅಲ್ಲಿಯೇ ಅವನ ಪುತ್ರ ಪೌತ್ರರನ್ನೂ ಹೇಳಿರುವುದರಿಂದ, ದೇವರಾಜನು ಪ್ರಾಯಶಃ ತನ್ನ ಅಪರವಯಸ್ಸಿನಲ್ಲಿ ಸಂನ್ಯಾಸವನ್ನು ಕೈಕೊಂಡನೆಂದು ತೋರು ತ್ತದೆ. ಬಸವರಾಜದೇವರ ರಗಳೆಯಿಂದ ( ಪು. ೫) ಬಾಗೆವಾಡಿಯ ಅಗ್ರೇಶ್ವರನೆಂದೂ

---

೧. EI. XXI, ಪು. 12 – 13.

ಬಸವಪುರಾಣದಿಂದ ( 2. ೪೫ – ೪೬ ) ಬಾಗವಾಡಿಯ ಗ್ರಾಮಣೀಮಣಿ ಎಂದೂ ಅರ್ಜುನವಾಡದ ಶಾಸನದಿಂದ ( ಬಂ. ೮ ) ಬಾಗವಾಡಿ ಪುರವರಾಧೀಶ್ವರನೆಂದೂ ತಿಳಿವ ಮಾದಿರಾಜನ ಬಾಗೆವಾಡಿಯಾದರೊ ( ಬಡಗಣ ) ಸಿಂದರ ಸಿಂದವಾಡಿಯ ರಾಜ್ಯದೊಂದು ವಿಭಾಗವೆಂದು ಮೇಲೆ ಕಂಡಿರುವ[೧] ಬಾಗಡಗೆ ಅಥವಾ ಬಾಗೆ ( ನಾಡು ) ೭೦ ರಲ್ಲಿ ಇದ್ದಿತೆಂದು ತಿಳಿಯುವುದರಿಂದ,[೨] ಮಾದಿರಾಜನು ( ಬಡಗಣ ) ಸಿಂದರ ಕೆಳಗೆ ಬಾಗೆವಾಡಿಯ ಊರೊಡೆಯನಾಗಿರಬೇಕು.[೩] ಹಾಗಾದರೆ ಬಸವೇಶ್ವರನು ಬಡಗಣ ಸಿಂದವಾಡಿಯಲ್ಲಿ ಜನ್ಮವೆತ್ತಿದನೆಂದು ನಿಷ್ಪನ್ನವಾಗುತ್ತದೆ.

ಮಾದಿರಾಜನು ಬಸವೇಶ್ವರನಿಗೆ ಗರ್ಭಾಷ್ಟಕದಲ್ಲಿ ಮುಂಜಿಗಟ್ಟಲೆಂದು ಶುಭ ಲಗ್ನಕ್ಕೆ ತೊಡಗುತ್ತಲೆ ಬಸವೇಶ್ವರನು 'ಪ್ರಕಟಿಸದಿರಾ ಮುಂಜಿಯೆಂಬುದನಕಟ ಪಾತಕವ' ( ಬಸವಪುರಾಣ, 3. ೫೧ ) ಎಂದು ಅದನ್ನೊಲ್ಲದೆ ಬಾಗೆವಾಡಿಯನ್ನು ಬಿಟ್ಟು ಆ ಉಪನಯನಕ್ಕೆಂದು ಅಲ್ಲಿಗೆ ಬಂದಿದ್ದ ತನ್ನ ಸೋದರಮಾವನಾದ ಭಂಡಾರಿ ಬಲದೇವನ ಜತೆಯಲ್ಲಿ ಹೊರಟು ಹೋದನೆಂದು ಬಸವಪುರಾಣದಲ್ಲಿ ( ಕ್ರಿ. ಶ. 1369 ) ಹೇಳಿದೆಯಾದರೂ ಅದಕ್ಕಿಂತ ಶಾನೆ ಹಿಂದಣ ಹಾಗೂ ಬಸವೇಶ್ವರನ ಸಮಕಾಲೀನನಾದ ಹರಿಹರನ ( ಕ್ರಿ. ಶ. ಸು. 1200 ರ ಆಚೀಚೆಯ ) ಬಸವರಾಜ ದೇವರ ರಗಳೆಯಲ್ಲಿ ( ಪು. ೯ – ೧೧ ) ಷೋಡಶಪ್ರಾಯನಾದ ಬಸವೇಶ್ವರನು ಕರ್ಮಲತೆಯಂತಿದ್ದ ಜನಿವಾರವನ್ನು ಕಳೆದು ಬಿಸುಟೊ ಹೋತಿನ ಗಂಟಲನ್ನು ಬಿಗಿವಂತಿದ್ದ ಮೌಂಜಿಯನ್ನು ಹರಿದು ಬಿಸುಟೊ ಬಾಗೆವಾಡಿಯಿಂದ ಹೊರಟು ಹೋದನೆಂದು ಇರುವುದರಿಂದ, ಆತನಿಗೆ ಗರ್ಭಾಷ್ಟಮದಲ್ಲಿ ಉಪನಯನವಾಗಿಯೇ ಆತನು ತನ್ನ ೧೬ ನೆಯ ವಯಸ್ಸಿನಲ್ಲಿ ಬಾಗೇವಾಡಿಯನ್ನು ಬಿಟ್ಟು ಹೋಗಿರಬೇಕು. ತರುವಾಯ ಅವನು ತನ್ನ ಸೋದರಮಾವನಾದ ಆ ಬಲದೇವ ಮಂತ್ರಿಯ ಮಗಳನ್ನು ಮದುವೆಯಾದನೆಂಬಲ್ಲಿಯ ( ಬಸವಪುರಾಣ, ಸಂ. 4 ) ಬಲದೇವನು ( ಬಡಗಣ ) ಸಿಂದರಲ್ಲಿ II ಚಾವುಂಡನ ಕಾಲದಲ್ಲಿಯೂ ಅದಕ್ಕೆ ಹಿಂದೆಯೂ ಅಧಿಕಾರಿಯಾಗಿದ್ದನೆಂದು ಮೇಲೆ ಕಂಡಿರುವ[೪] ಬಲದೇವನಾಯಕನೆಂದು ತೋರುತ್ತದೆ. ಮಾದಿರಾಜನ ತರುವಾಯ ಬಾಗೆವಾಡಿಯ ಪುರಾಧಿಪತ್ಯವು ಅವನ ಹಿರಿಯ ಮಗನಾದ ದೇವರಾಜನಿಗೆ ಸಲಬೇಕಾದುದರಿಂದ, ಬಸವೇಶ್ವರನು ತನ್ನ ಮಾವನಾದ ಬಲದೇವನಲ್ಲಿದ್ದು ಅವನೊಂದಿಗೆ ಕೆಲಕಾಲ ಸಿಂದರಾಜನನ್ನು ಓಲಗಿಸುತ್ತಿದ್ದ

---

೧. FKD ಪು. 572. ೨. EI. XXI. ಪು. 11. ೩. ಅತಏವ ಜೈನ ಬಿಜ್ಜಳ ರಾಯಚರಿತೆಯಲ್ಲಿ ( ಕ್ರಿ. ಶ. 1650 ) ಮಾದಿರಾಜನನ್ನು ಬಿಜ್ಜಳನ ಜೋಯಿಸನೆಂದಿರುವುದನ್ನು ( ಕವಿಚರಿತೆ II. ಪು. 418 ) ಒಪ್ಪಲಾಗುವುದಿಲ್ಲ. ೪. SIE. 1927 ( Sup. ) ಪು. 10, ನಂ. 119 A.

ನೇನೋ. ಆ ಮೇಲೆ ಬಸವೇಶ್ವರನು ಅಲ್ಲಿಂದ ಹೊರಟು ಮಲಪ್ರಭಾ ಮತ್ತು ಕೃಷ್ಣಾ ನದಿಗಳು ಸಂಗಮಿಸುವಲ್ಲಿಯ ಕಪ್ಪಡಿಗೆ ಹೋಗಿ ಕೂಡಲ ಸಂಗಮೇಶ್ವರನ ಅರ್ಚನೆಯಲ್ಲಿ ನಿರತನಾಗಿರುವಲ್ಲಿ, ಒಂದಿರುಳು ಸಂಗಮೇಶ್ವರನು ಅವನ ಕನಸಿನಲ್ಲಿ ಅಪರೋಕ್ಷಿಸಿ 'ಎಲೆ ಮಗನೆ ಬಸವ, ಬಸವಣ್ಣಾ, ಬಸವಿದೇವ, ನೀಂ ಬಿಜ್ಜಳ ರಾಯನಿಪ್ಪ ಮಂಗಳವಾಡಕ್ಕೆ ಪೋಗು' (ಬಸವರಾಜದೇವರ ರಗಳೆ, ಪು. ೨೧) ಎಂದು ಎಚ್ಚರಿಸುತ್ತಲೆ, ಬಸವೇಶ್ವರನು ಅಲ್ಲಿಂದೆದ್ದು ಆಗ್ಗೆ ಕಳಚುರ್ಯ ಬಿಜ್ಜಳನ ರಾಜಧಾನಿಯಾಗಿದ್ದ ಮಂಗಳವಾಡಕ್ಕೆ ಬಂದು ಅವನ ದಂಡನಾಯಕನೆಂದು ಮೇಲೆ ಕಂಡಿರುವ[೧] ಸಿದ್ಧಪಯ್ಯ ದಂಡನಾಯಕನ ಕೆಳಗೆ ಪ್ರಾಯಶಃ ಭಂಡಾರದ ಕಾಯಕದಲ್ಲಿ ನೇಮಿಸಲ್ಪಟ್ಟನು. ಹೀಗೆ ಅಲ್ಲಿ ನೇಮಿಸಲ್ಪಡುವಂದೇ ಬಸವೇಶ್ವರನು ಹೆಚ್ಚಿನ ಹೊಣೆಗಾರಿಕೆಯ ಉಚ್ಚಾಧಿಕಾರಕ್ಕೆ ಹಚ್ಚಲ್ಪಡದೆ ಬಹುಶಃ ಕೆಲಸವನ್ನು ಕಲಿಯಲೆಂದೇ ಬೇರೊಬ್ಬರ ಕೈಯ್ಕೆಳಗೆ ಇರಿಸಲ್ಪಟ್ಟುದರಿಂದ, ಆಗ್ಗೆ ಆತನಿಗೆ ೨೫ ರಷ್ಟಾದರೂ ಪ್ರೌಢಿ ಇರದೆಂದೂ ಆತನು ತನ್ನ ೧೬ ನೆಯ ವರ್ಷದಲ್ಲಿ ಮನೆ ಬಿಟ್ಟಂದಿನಿಂದ ಮಂಗಳವಾಡದಲ್ಲಿ ನಿಯೋಗಿಸಲ್ಪಟ್ಟುದರ ನಡುವೆ ಹೆಚ್ಚಾದರೆ ೪–೫ ವರ್ಷಗಳೇನೋ ಸಂದಿರಬಹುದೆಂದೂ ತೋರುವುದರಿಂದ, ಬಿಜ್ಜಳನ ಆಸ್ಥಾನವನ್ನು ಹೊಕ್ಕಂದು ಹರೆಯದವನೂ (ಬಸವರಾಜದೇವರ ರಗಳೆ, ಪು. ೨೯) ಕುಮಾರನೂ (ಬಸವಪುರಾಣ, 5. ೪೮) ಎಂದು ತಿಳಿವ ಬಸವೇಶ್ವರನು ಕ್ರಿ. ಶ. 1130 ರಲ್ಲೊ ಅಥವಾ ಅದರ ೧–೨ ವರ್ಷಗಳ ಹಿಂದೊ ಹುಟ್ಟಿರಬೇಕು.

ಬಸವೇಶ್ವರನ ಮೊತ್ತಮೊದಲಣ ಮೇಲಾಧಿಕಾರಿಯಾಗಿದ್ದ ಸಿದ್ಧಪಯ್ಯ ದಂಡನಾಯಕನು ಬಿಜ್ಜಳನಲ್ಲಿ ಮಾತ್ರವಲ್ಲ, ಬಿಜ್ಜಳನ ಮಗನಾದ ಸೋವಿದೇವನಲ್ಲಿಯೂ ದಂಡನಾಯಕನಾಗಿದ್ದನೆಂದು ಶಾಸನಾಧಾರದಿಂದ[೨] ಮೇಲೆ ಕಂಡಿರುವುದರಿಂದ ಹರಿಹರನೆಂದಿರುವಂತೆ (ಬಸವರಾಜದೇವರ ರಗಳೆ, ಪು. ೩೧) ಆ ಸಿದ್ಧದಂಡಾಧಿಪನು ಅಪುತ್ರಕನಾಗಿ ಸತ್ತಮೇಲೆ ತಾನೆ ಬಸವೇಶ್ವರನು ಅವನ ಜಾಗದಲ್ಲಿ ಬಸವಣ್ಣ ದಂಡನಾಥನಾದುದಲ್ಲ, ಆವನು ಇದ್ದಿರುವಂದೇ ಮೇಲಕ್ಕೇರಿ ಅವನ ಓರಗೆಯ ಮತ್ತೊಬ್ಬ ದಂಡನಾಥನಾಗಿಯೊ ಅಥವಾ ಬಸವೇಶ್ವರನನ್ನು ಅಲ್ಲಿಯೇ ದಂಡನಾಥ ಚೂಡಾಮಣಿ (ಬಸವರಾಜದೇವರ ರಗಳೆ, ಪು. ೫೩; ೮೪), ದಂಡನಾಥ ಪಂಚಾನನ (ಪು. ೮೪), ನಾಯಕರ ದೇವ (ಪು. ೬೯) ಎಂದಿರುವುದರಿಂದ, ಅವನನ್ನು ಮಿಕ್ಕ ಅಮಾತ್ಯನಾಗಿಯೊ (ಬಸವಪುರಾಣ, 60. ೨) ನಿಯೋಗಿಸಲ್ಪಟ್ಟಿರಬೇಕು. ಈ ಘಟನೆಯನ್ನು ಕ್ರಿ. ಶ. 1155–60 ರೊಳಗೆ ಹೊಂದಿಸಬಹುದು.

---

೧. FKD, ಪು. 476. ೨. SIE, 1933, Appendix D, ಪು. 99, ನಂ. 79.

ಬಿಜ್ಜಳನು ಮಂಗಳವಾಡದಲ್ಲಿದ್ದಂದು, ಅಂದರೆ ಅವನು ಇನ್ನೂ ಮಹಾಮಂಡಳೇಶ್ವರನಾಗಿದ್ದಂದು, ಆತನು ಪರಸಮಯಿಗಳ ಚಾಡಿ ಕೇಳಿ ಬಸವೇಶ್ವರನೊಂದಿಗೆ ಲೆಕ್ಕ ವಿಚಾರಿಸಿ ಸೋತು ಹೋದನೆಂದು ಹರಿಹರನ ಬಸವರಾಜದೇವರ ರಗಳೆಯಲ್ಲಿ (ಪು. ೫೨–೫೫) ಹೇಳಿರುವಲ್ಲಿ, ಬಿಜ್ಜಳನು ಹಿತ್ತಾಳಿಯ ಕಿವಿಯವನೆಂದು ವ್ಯಕ್ತವಾಗುವುದರಿಂದ, ಅಂದಲ್ಲವಾದರೆ ಮುಂದಾದರೂ ಅವರಲ್ಲಿ ಬೇಗನೆ ಒಡಕು ಬಾರದಿರದೆಂದು ನಿಶ್ಚಯಿಸಬಹುದು. ಇದಕ್ಕೆ ಸರಿಯಾಗಿ 'ಬಿಜ್ಜಳನ ಭಂಡಾರ ಎನಗೇಕಯ್ಯ?' ಎಂಬ ಬಸವೇಶ್ವರನ ವಚನದಿಂದ (ಪು. ೧೧೦, ನಂ. ೧೭) ಬಸವೇಶ್ವರನು ಮಾಡಿದ ತನ್ನ ಭಂಡಾರದ ವಿನಿಯೋಗವನ್ನು ಬಿಜ್ಜಳನು ಮೆಚ್ಚಲಿಲ್ಲವೆಂದೂ ಆ ಮಾತಿನಲ್ಲಿ ಅಷ್ಟು ಸ್ಪಷ್ಟವಿರುವ ಜುಗುಪ್ಸೆಯಿಂದ ಆ ಮುಂದೆ ಬಸವೇಶ್ವರನು ಆತನಲ್ಲಿ ಉಳಕೊಳ್ಳಲೊಲ್ಲನೆಂದೂ ವ್ಯಕ್ತವಾಗುವಂತೆಯೇ 'ಆನೀ ಬಿಜ್ಜಳಂಗಂಜುವೆನೆ?' ಎಂಬ ಮತ್ತೊಂದು ವಚನದಿಂದ (ಪು. ೧೦೮, ನಂ. ೨) ಬಸವೇಶ್ವರನು ಆಗ್ಗೆ ಅಲ್ಲಿಂದ ತೊಲಗಿರಬೇಕೆಂದೂ ವ್ಯಕ್ತವಾಗುತ್ತದೆ.

ಕೆಟ್ಟಿತ್ತು ಕಲ್ಯಾಣ ಹಾಳಾಯಿತ್ತು ನೋಡಯ್ಯ! ಒಬ್ಬ
ಜಂಗಮದಭಿಮಾನದಿಂದ ಚಾಳುಕ್ಯರಾಯನ ಆಳಿಕೆ
ತೆಗೆಯಿತ್ತು, ಸಂದಿತ್ತು ಕೂಡಲಸಂಗಮದೇವ ನಿಮ್ಮ ಕವಳಿಕೆಗೆ.

ಎಂಬೀ ಬಸವೇಶ್ವರನ ವಚನದಿಂದ[೧] ಆ ಚಾಳುಕ್ಯರಾಯನು ಒಬ್ಬ ಜಂಗಮಕ್ಕೆ ಅಥವಾ ಜಂಗಮನಿಗೆ ಮಾಡಿದ ಅಭಿಮಾನ[೨] ಅಂದರೆ ಹಿಂಸೆಯ ಕಾರಣದಿಂದ ಅವನ ಆಳಿಕೆ ತೆಗೆಯಿತ್ತು, ಅಂದರೆ ಪರಕೀಯ ಅರಸನೊಬ್ಬನು ಅವನ ಒಡೆತನವನ್ನು ಕಿತ್ತುಕೊಂಡು ತಾನು ಅರಸನಾದನು, ಆ ಕಾರಣ ಆ ಚಾಳುಕ್ಯನ ಪ್ರಭುತ್ವವು ಶಿವನ ಕವಳಿಕೆಗೆ ಸಂದಿತ್ತು, ಅಂದರೆ ನಾಶವಾಯಿತು ಎಂದು ತಿಳಿಯುವುದರಿಂದ, ಚಾಳುಕ್ಯ III ತೈಲನೆಂದು ಮೇಲೆ ಕಂಡಿರುವ ಆ ಚಾಳುಕ್ಯರಾಯನು ಆಳುತ್ತಿರುವಂದೇ, ಅಂದರೆ ಬಿಜ್ಜಳನು ಅವನಿಂದ ಕಲ್ಯಾಣವನ್ನು ಸೆಳಕೊಂಡ ಕ್ರಿ. ಶ. 1162ರ ಮುಂಚೆಯೇ, ವೀರಶೈವರು ಕಲ್ಯಾಣದಲ್ಲಿ ಹಿಂಸಿಸಲ್ಪಡುತ್ತಿರಬೇಕಾದರೆ, ಲೋಕದಲ್ಲಿ ಸಾರ್ವತ್ರಿಕವಾಗಿಯೂ ಸಾರ್ವಕಾಲಿಕವಾಗಿಯೂ ಎಂಬಂತೆ ಹೊಸತಾಗಿ ಸ್ಥಾಪಿತವಾದ ಧರ್ಮದವರನ್ನು ಇಲ್ಲವೆ ಸುಧಾರಕರನ್ನು ಆಯಾ ಪುರಾತನ ಧರ್ಮದವರು ಹಿಂಸಿಸುವುದು ಸಹಜವಾಗಿರುವುದರಿಂದ, ವೀರಶೈವವು ಆಗ್ಗೆ ನೂತನವಾಗಿರಬೇಕು ಮಾತ್ರವಲ್ಲ, ಅದು ಕ್ರಿ. ಶ. 1162ಕ್ಕಿಂತ ಮುಂಚೆ ಬಿಜ್ಜಳನು

---

೧. ಬಸವೇಶ್ವರನ ವಚನಗಳು, ಪು. ೯೧, ನಂ. ೯೦. ೨. ಅಭಿಮಾನಸ್ತ್ವಹಂಕೃತೌ || ಹಿಂಸಾಯಾಂ ಪ್ರಣಯೇ ಜ್ಞಾನೇ | (ಹೇಮಚಂದ್ರನ ಅನೇಕಾರ್ಥ ಸಂಗ್ರಹ, ಶ್ಲೋ. ೧೭೨೭–೨೮.)

ಇತರತ್ರ ಮಹಾಮಂಡಳೇಶ್ವರನಾಗಿದ್ದಂದು ತಾನೆ ಸ್ಥಾಪಿತವಾಗಿ III ತೈಲನ ಆಳಿಕೆಯಲ್ಲಿ ಅವನ ರಾಜಧಾನಿಯಾದ ಕಲ್ಯಾಣದಲ್ಲಿ ಪಸರಿಸುತ್ತಿರಬೇಕು. ಹಾಗೆಯೇ III ತೈಲನ ಆಳಿಕೆಯಲ್ಲಿ ವೀರಶೈವರಿಗೆ ಹಿಂಸೆಯಾದ ಕಾರಣ ಅವನ ರಾಜ್ಯವನ್ನು ಪರಕೀಯನು ಗದ್ದನೆಂದಿರಬೇಕಾದರೆ, ಮತ್ತೊಬ್ಬನಲ್ಲ ಪ್ರಾಯಶಃ ಬಸವೇಶ್ವರನೇ, ಆ ವಚನದಲ್ಲಿ ವೀರಶೈವರಿಗೆ ಹಿಂಸೆಯಾದ ದೆಸೆಯಿಂದ ಕಲ್ಯಾಣವು ಕೆಟ್ಟಿತ್ತು ಹಾಳಾಯಿತ್ತು ಎಂದಿರುವ ಬಸವೇಶ್ವರನೇ, ಆ ಪರಕೀಯನನ್ನು, ಅಂದರೆ ಮೇಲೆ ಕಂಡಿರುವಂತೆ III ತೈಲನ ಸರ್ವಾಧಿಕಾರಿಯಾಗಿದ್ದ ಹಾಗೂ ತಾನು ಆಗ್ಗೆ ಓಲಗಿಸುತ್ತಿದ್ದ ಕಳಚುರ್ಯ ಬಿಜ್ಜಳನನ್ನು, ಆ ಚಾಳುಕ್ಯರಾಯನನ್ನು ದಂಡಿಸುವಂತೆ, ಅಂದರೆ ಅವನ ರಾಜ್ಯವನ್ನು ಗೆದ್ದುಕೊಳ್ಳುವಂತೆ ಪ್ರೇರೇಪಿಸಿರಬೇಕು. ಹಾಗಾದರೆ ಕಲ್ಯಾಣದ ಸಿಂಹಾಸನವನ್ನು ಏರಿದಂದಿನಿಂದ ಬಿಜ್ಜಳನು ಬಸವೇಶ್ವರನಿಗೆ ಸಾಹಜಿಕವಾಗಿ ಅತ್ಯಂತ ವಿಧೇಯನಾಗಿದ್ದು ಅವನಿಗೆ ತನ್ನ ರಾಜ್ಯದಲ್ಲಿ ಸರ್ವಾಧಿಕಾರವನ್ನು ಕೊಟ್ಟಿರಬೇಕೆಂದು ದೃಢವಾಗಿ ಊಹಿಸಬಹುದು. ಅಲ್ಲಿಂದ ಮುಂದೆ ವೀರಶೈವ ಧರ್ಮಪ್ರಚಾರಕ್ಕೆ ತೊಡಕಿಲ್ಲದೆ ಅದು ಕರ್ಣಾಟಕದಲ್ಲಿ ಹಬ್ಬುತ್ತಿರಬೇಕಾದರೂ 'ಭವಿ ಬಿಜ್ಜಳನ ಗದ್ದುಗೆಯ ಕೆಳಗೆ ಕುಳ್ಳಿರ್ದು ಓಲೈಸಿಹೆನೆಂದು ನುಡಿವರಯ್ಯ!' ಎಂಬ ಬಸವೇಶ್ವರನ ವಚನದಲ್ಲಿ (ಪು. ೧೦೪, ನಂ. ೬) ಬಿಜ್ಜಳನನ್ನು ಭವಿ ಎಂದಿರುವುದರಿಂದ ಅವನು ವೀರಶೈವನಾಗಲಿಲ್ಲ.

ಆ ಮೇಲಣ ಮಡಿವಾಳ ಮಾಚಯ್ಯನ (ಬಸವಪುರಾಣ, ಸಂ. 21) ಇತ್ಯಾದಿ ಕಥೆಯಿಂದ ತಿಳಿವ ಮೇರೆಗೆ ವೀರಶೈವರಲ್ಲಿ ಕೆಲವರಾದರೂ ನವೀನ ಧರ್ಮದವರಿಗೆ ಸ್ವಾಭಾವಿಕವಾದ ಉತ್ಸಾಹಾತಿರೇಕ್ಯದಿಂದ ಉನ್ಮತ್ತರಾದ ಕಾರಣವೇನೋ ಪರವಾದಿಗಳು ಅವರ ಮೇಲೆ ಬಿಜ್ಜಳನಲ್ಲಿ ಆಗಾಗ್ಗೆ ದೂರು ಕೊಡುತ್ತಲೂ ಚಾಡಿ ಹೇಳುತ್ತಲೂ ಇದ್ದುದರಿಂದ, ಬಸವೇಶ್ವರನ ದಿನೇ ದಿನೇ ಬೆಳೆದುಬರುವ ಕೀರ್ತಿಯು ಹಾಗೂ ಪ್ರತಾಪದ ಮುಂದೆ ಆಗಲೇ ನೆರಳಪಾಲಾಗಿ, ಇನ್ನು ಅವನ ವೀರಶೈವ ಧರ್ಮವನ್ನೂ ಕೈಕೊಂಡರೆ, ಚಕ್ರವರ್ತಿಯಾದ ತಾನು ತನ್ನ ರಾಜ್ಯದಲ್ಲೇ ಅವನ ಮುಂದೆ ಏನೂ ಅಲ್ಲದವನಾದೇನೆಂಬ ಶಂಕೆಯಿಂದೇನೋ ಬಸವೇಶ್ವರನ ಧರ್ಮವನ್ನು ಸೇರದ ಬಿಜ್ಜಳನು, III ತೈಲನ ಸರ್ವಾಧಿಕಾರಿಯಾಗಿದ್ದ ತಾನು ಆತನ ರಾಜ್ಯವನ್ನು ಸುಲಭವಾಗಿ ಕಸಕೊಂಡಂತೆ ಬಸವೇಶ್ವರನೂ ತನ್ನ ಸಿಂಹಾಸನವನ್ನು ಕಿತ್ತುಕೊಂಡಾನೆಂಬ ಅಂಜಿಕೆಯಿಂದೇನೋ, ಅವನ ಸಾನ್ನಿಧ್ಯವನ್ನು ಇನ್ನು ತಡೆಯಲಾರದೆ ಆ ದೂರುಗಳನ್ನೂ ಚಾಡಿಯನ್ನೂ ಕಿವಿತುಂಬ ಕೇಳುತ್ತಿದ್ದು, ಬಸವೇಶ್ವರನ ತ್ಯಾಗೌದಾರ್ಯಗಳಿಂದ ತನ್ನ ಭಂಡಾರಕ್ಕೆ ಆಗುತ್ತಿರುವ ನಷ್ಟವನ್ನೂ ಅವನ ಧರ್ಮಪ್ರಚಾರದಿಂದ ತನ್ನ ರಾಜ್ಯದಲ್ಲಿಯ ಅಧಿಕಸಂಖ್ಯಾಕ ಪುರಾತನ ಧರ್ಮಿಯ

ರಿಗೆ ಆಗುತ್ತಿರುವ ಅಸಮಾಧಾನವನ್ನೂ ನೆವ ಮಾಡಿಕೊಂಡು ಅವನನ್ನು ದೂರ ಮಾಡಬೇಕೆಂದು ನಿಶ್ಚಯಿಸಿ, ಪದವಿಯ ಅತ್ಯುಚ್ಚತೆಯಿಂದಲೂ ನವೀನ ಧರ್ಮದ ಪ್ರವರ್ತಕತ್ವದಿಂದಲೂ ತನ್ನ ರಾಜ್ಯದಲ್ಲಿ ಮಹತ್ತಮನಾದ ಬಸವೇಶ್ವರನನ್ನು ತನ್ನಿಂದ ದೂರ ಮಾಡುವುದೆಂದರೆ ಕೊಲ್ಲಿಸಿಯೇ ವಿನಾ ಅನ್ಯಥಾ ಅಲ್ಲ ಎಂಬುದರಿಂದ ಅವನನ್ನು ಕೊಲ್ಲಿಸುವ ಹಂಚಿಕೆಯನ್ನು ಯೋಚಿಸುತ್ತಿರಬೇಕು. ಅದನ್ನು ಮುಂಗಂಡೇ ಏನೋ ಬಸವೇಶ್ವರನು 'ಇನ್ನು ಕೆಲಕೆಲ ದಿನಕತಿ ಶಿವದ್ರೋಹವು' ಉದಯಿಸಲಿಕ್ಕಿದೆ ( ಬಸವಪುರಾಣ, 60. ೫೯ ) ಎಂದಿರಬೇಕು.

ಬಸವೇಶ್ವರನೂ ಬಿಜ್ಜಳನೂ ಹೇಗೆ ಕಾಲವಾದರೆಂಬುದನ್ನು ಕುರಿತು ಕನ್ನಡ ಸಾಹಿತ್ಯದಲ್ಲಿರುವ ಕಥನವು ಒಮ್ಮುಖವಾಗಿಲ್ಲ. ನನಗಾದರೂ ಅವರ ಅವಸಾನವು ಹೀಗಾಯಿತೆಂದು ತೋರುತ್ತದೆ.

ಬಸವೇಶ್ವರನ ವಚನಗಳಲ್ಲಿ ಒಬ್ಬ ಜಂಗಮದಭಿಮಾನದಿಂದ ಚಾಳುಕ್ಯರಾಯನ ಆಳಿಕೆ ತೆಗೆದುದನ್ನು ಹೇಳಿರುವಂತೆ ತನ್ನಲ್ಲಿ ದ್ರೋಹವೆಣಿಸಿದ ಬಿಜ್ಜಳನ ಆಳಿಕೆ ಮುಗಿದುದನ್ನು ಹೇಳದಿರುವುದರಿಂದ, ಬಿಜ್ಜಳನು ಸಾಯುವ ಮುಂಚೆ ಮಾತ್ರವಲ್ಲ, ಅವನ ಆಳಿಕೆ ಮುಗಿಯುವ ಮುಂಚೆಯೇ ಬಸವೇಶ್ವರನು ಕಾಲವಾಗಿರಬೇಕು; ಅಂದರೆ ಬಿಜ್ಜಳನು ಯಲಿಸಿರೂರಿನ ಶಾಸನದ[೧] ಕ್ರಿ. ಶ. 1167 ಸಪ್ಟಂಬರ 29 ರ ಹಾಗೂ ಶಿಕಾರಿಪುರ 92 ಶಾಸನದ[೨] 1168 ಮಾರ್ಚ 24 ರ ನಡುವೆ ಕ್ರಿ. ಶ. 1167 ರಲ್ಲಿಯೆ ರಾಜ್ಯಭಾರವನ್ನು ತನ್ನ ಮಗನಾದ ಸೋವಿದೇವನಿಗೆ ಒಪ್ಪಿಸಿದನೆಂದು ಮೇಲೆ ಕಂಡಿರುವುದರಿಂದ, ಬಸವೇಶ್ವರನು ಕ್ರಿ. ಶ. 1167 ರ ಪೂರ್ವ ಭಾಗದಲ್ಲಿ ಕಾಲವಾಗಿರಬೇಕು. ಆಗ್ಗೆ ಅವನ ವಯಸ್ಸು ೩೭ – ೩೮ ರಷ್ಟಾಗುವುದರಿಂದ, ಅವನನ್ನು ೩೦ ರಿಂದ ೪೦ ರೊಳಗೆ ತಮ್ಮ ಅವತಾರವನ್ನು ಸಮಾಪ್ತಿಸಿದ ಶಂಕರಾಚಾರ್ಯ, ಯೇಸುಕ್ರಿಸ್ತ ಮೊದಲಾದ ಅಲ್ಪಸಂಖ್ಯಕರಾದ ಮಹಾಪುರುಷರೊಂದಿಗೆ ಸೇರಿಸಬಹುದು.

ಸೋವಿದೇವನ ಆಳಿಕೆಯ ಕ್ರಿ. ಶ. 1168 ಮಾರ್ಚ 24 ರ ಚಂದ್ರಗ್ರಹಣದಂದೇ[೩] ಕಲ್ಯಾಣದಲ್ಲಿ ಬಿಜ್ಜಳನೂ ದತ್ತಿ ಬಿಟ್ಟನೆಂದು ಮೇಲೆ ಕಂಡಿರುವ ನದಿಹರಳಹಳ್ಳಿಯ ಶಾಸನಾಧಾರದಿಂದ[೪] ರಾಜ್ಯಭಾರದಿಂದ ನಿವೃತ್ತನಾದ ಬಿಜ್ಜಳನು ಕೂಡಲೆ ಅಥವಾ ಬೇಗನೆ ಸಾಯದೆ ಆ ಮೇಲೂ ತನ್ನ ಮಗನಾದ ಸೋವಿದೇವನ ಆಳಿಕೆಯಲ್ಲಿ ಬದುಕಿದ್ದನೆಂದು ತಿಳಿಯುತ್ತದೆ. ಅವನ ರಾಜ್ಯತ್ಯಾಗಕ್ಕೆ ಕಾರಣವೇನೆಂದು ಕಂಡುಕೊಳ್ಳಬಹುದೊ ನೋಡೋಣ.

---

೧. SIE (Sup.) 1927, ಪು. 5, ನಂ. 65. ೨. EC VII. ೩. EC VII, ಶಿಕಾರಿಪುರ 92. ೪. SIE, 1935, ನಂ. 58.

ಬಿಜ್ಜಳನು ಸಾಹಜಿಕವಾಗಿ ಮೃತ್ಯುವಶನಾದರೆ ಹೇಗೋ ಹಾಗೆಯೋ ಅವನು ಯಾವ ಕಾರಣದಿಂದ ರಾಜ್ಯಭಾರವನ್ನು ಬಿಟ್ಟರೂ ಸೋವಿದೇವನು ಅವನ ಜ್ಯೇಷ್ಠ ಪುತ್ರನಾಗಿದ್ದ ಪಕ್ಷದಲ್ಲಿ ಆ ನಿಮಿತ್ತವೇ ಬಿಜ್ಜಳನ ಯುವರಾಜನೂ ಆಗಿರಬೇಕಾದ ಆತನಿಗೆ ತಾನೆ ಯಥಾನ್ಯಾಯವಾಗಿ ಸಲ್ಲಬೇಕಾದ ತನ್ನ ಪಟ್ಟವನ್ನು ಸೋವಿದೇವನಿಗೆಂದು ಸವಿಶೇಷವಾಗಿ ಬಿಜ್ಜಳನು ಬೇರೆ ನಿರೂಪಿಸಲಿಕ್ಕೆ ಕಾರಣವಿಲ್ಲ. ಬಿಜ್ಜಳನು ಹಾಗೆ ನಿರೂಪಿಸಿದನೆಂಬುದರಿಂದಲೆ, ಸೋವಿದೇವನು ಅವನ ಜ್ಯೇಷ್ಠ ಪುತ್ರನಲ್ಲವೆಂದೂ, ಅತಏವ ಆಗ್ಗೆ ಬಿಜ್ಜಳನ ಪಟ್ಟಕ್ಕೆ ಸೋವಿದೇವನಿಗಿಂತ ಸಮೀಪತರವ ಬಾಧ್ಯತೆಯುಳ್ಳ ಬೇರೊಬ್ಬ ಹಕ್ಕುದಾರನಿದ್ದನೆಂದೂ ಆತನಿಗೆ ತನ್ನ ಪಟ್ಟವು ಹೋಗಬಾರದೆಂದೇ ಆತನನ್ನು ವಿನಾಯಿಸಿ ಬಿಜ್ಜಳನು ಸೋವಿದೇವನನ್ನು ತನ್ನ ಉತ್ತರಾಧಿಕಾರಿಯಾಗಿ ನಿರೂಪಿಸಿರಬೇಕೆಂದೂ ತನ್ನಷ್ಟಕ್ಕೆ ವ್ಯಕ್ತವಾಗುತ್ತದೆ. ಶಾಸ್ತ್ರೋಕ್ತ ಆಚರಣೆಯ ಮೇರೆಗೆ ರಾಜಪಟ್ಟವು ತಂದೆಯ ಬಳಿಕ ಅವನ ಹಿರೇ ಮಗನಿಗೆ ಹೋಗಬೇಕು, ಆ ಹಿರೇ ಮಗನು ತನ್ನ ತಂದೆಯ ಮುಂಚೆಯೇ ಕಾಲವಾಗಿದ್ದರೆ ಅದು ಜ್ಯೈಷ್ಠ್ಯಕ್ರಮದಿಂದ ಆ ಹಿರೇ ಮಗನ ಹಿರೇ ಮಗನಿಗೆ, ಅಂದರೆ ಹಿರೇ ಮೊಮ್ಮಗನಿಗೆ, ಸಲ್ಲಬೇಕಲ್ಲದೆ ಆ ತಂದೆಯ ಇತರ ಮಗಂದಿರಿಗೆ ಹೋಗಬಾರದು ಎಂಬಂತೆಯೇ ಅರಸರು ತಮ್ಮ ಹಿರೇ ಮಗಂದಿರು ತಮಗೆ ಪ್ರತಿಕೂಲರಾಗಿ ಮಾರ್ಮಲೆತರೆ, ಇಲ್ಲವೆ ಇತರಥಾ ಪಟ್ಟಕ್ಕೆ ಅನರ್ಹರೆಂದು ತೋರಿದರೆ, ಅಂಥವರಿಗೆ ತಮ್ಮ ಪಟ್ಟವನ್ನು ಏರಲೀಯದೆ ತಮ್ಮ ಯೋಗ್ಯರಾದ ಬೇರೆ ಮಕ್ಕಳಿಗೆ ಕೊಟ್ಟಿರುವ ಉದಾಹರಣೆಗಳೂ ಶಾಸನಗಳಲ್ಲಿ ದೊರೆವುದರಿಂದ, ಬಿಜ್ಜಳನ ಹಿರೇ ಮಗನೊ, ಅಥವಾ ಅವನು ಬಿಜ್ಜಳನ ಮುಂಚೆಯೇ ಕಾಲವಾಗಿದ್ದರೆ ಆ ಹಿರೇ ಮಗನ ಮಗನೊ, ಅಂದರೆ ಬಿಜ್ಜಳನ ಹಿರೇ ಮೊಮ್ಮಗನೊ, ಬಿಜ್ಜಳನಿಗೆ ಮಾರ್ಮಲೆತಿದ್ದು, ಇಲ್ಲವೆ ಅನ್ಯಥಾ ಅಯೋಗ್ಯನಾಗಿದ್ದು, ಅಂಥವನು ತನ್ನ ಪಟ್ಟಕ್ಕೆ ಬರಬಾರದೆಂದೇ ಬಿಜ್ಜಳನು ತನ್ನಲ್ಲಿ ತುಂಬ ಶ್ರದ್ಧೆ ಇದ್ದು ತನಗೆ ಬಲು ವಿಧೇಯನಾದ ಹಾಗೂ ಪ್ರಾಯಶಃ ತನ್ನ ಇತರ ಮಕ್ಕಳಲ್ಲಿ ಹಿರಿಯನಾದ ಸೋವಿದೇವನನ್ನು ತನ್ನ ರಾಜ್ಯಾಧಿಕಾರಕ್ಕೆ ನಿರೂಪಿಸಿರಬೇಕು. ಬಿಜ್ಜಳನ ಮಗಂದಿರಲ್ಲಿ ಸೋವಿದೇವನಿಗಿಂತ ಹಿರಿಯವನ ಹೆಸರು ಶಾಸನಗಳಲ್ಲಿ ದೊರೆಯದುದರಿಂದ, ಅವನು ತನ್ನ ತಂದೆಯ ರಾಜ್ಯಾಧಿಕಾರದಲ್ಲಿ ಭಾಗಿಯಾಗತಕ್ಕ ಮುಂಚೆಯೇ, ಹೇಗೂ ತನ್ನ ತಂದೆಯ ಜೀವಕಾಲದಲ್ಲಿಯೇ, ಕಾಲವಾಗಿರಬೇಕು. ಆಗ್ಗೆ ಅವನ ಮಗನು, ಅಂದರೆ ಬಿಜ್ಜಳನ ಮೊಮ್ಮಗನು, ತೀರ ಚಿಕ್ಕವನಾಗಿದ್ದು ಆತನು ಪ್ರಾಯಭರಿತನಾಗುವಷ್ಟರ ವರೆಗೆಂದು ಬಿಜ್ಜಳನು ಸೋವಿದೇವನಿಗೆ ತನ್ನ ಪಟ್ಟವನ್ನು ಬಿಟ್ಟುಕೊಟ್ಟಿದ್ದರೆ, ಆ ವಿಷಯವು ಕಳಚುರ್ಯರ ಒಂದಲ್ಲ ಒಂದು ಶಾಸನದಿಂದ ತಿಳಿಯದೆ

ಇರುತ್ತಿದ್ದಿಲ್ಲ. ಹಾಗೇನೂ ಇಲ್ಲದುದರಿಂದ ಬಿಜ್ಜಳನ ಆಳಿಕೆಯ ಕೊನೆಗಾಲದಲ್ಲಿ ಪ್ರಾಯಶಃ ಅವನ ಮೊಮ್ಮಗನೇ ಅವನಿಗೆ ಮಾರ್ಮಲೆತಿರಬೇಕು, ಮತ್ತು ಆ ಕಾರಣವೇ ಬಿಜ್ಜಳನು ತನ್ನ ರಾಜ್ಯಭಾರವನ್ನು ಸೋವಿದೇವನಿಗೆ ಒಪ್ಪಿಸಿ ತಾನು ನಿವೃತ್ತನಾಗಿರಬೇಕು. ಆದರೆ ಈ ಬಗ್ಗೆ ಶಾಸನಾಧಾರವಿದೆಯೇ? ಬಿಜ್ಜಳನಿಗೆ ಅಂತಹ ಮೊಮ್ಮಗನಿದ್ದನೇ?

ಬಿಜ್ಜಳನ ಮಗನಾದ ಆಹವಮಲ್ಲನ ಕಾಲದ (1181 – 83) ತೇದಿ ಇಲ್ಲದ ಶಿಕಾರಿಪುರ 197 ನೆಯ ಶಾಸನದಲ್ಲಿ[೧] ( ಬಂ. ೨೧ – ೨೨ ) ಬಿಜ್ಜಳನು ರಾಜ್ಯತ್ಯಾಗ ಮಾಡಿದನೆಂದಾಗಲಿ ಕಾಲವಾದನೆಂದಾಗಲಿ ಹೇಳದೆ ಆತನ ಪ್ರತಾಪವನ್ನು ವರ್ಣಿಸುತ್ತಿರುವ ಎಡೆಯಲ್ಲಿಯೇ ಒಮ್ಮಿಂದೊಮ್ಮೆ

ಜಗಮಂ ಸಂಪ್ರೀತಿಯಿಂ ಬಿಜ್ಜಲ ನೃಪತಿಯ ತಮ್ಮಂ ಭುಜಾಗರ್ವದಿಂ ಮೈ
ಳುಗಿದೇವಂ ಪಾಲಿಸುತ್ತುಂ ಮೆಱೆದ ಬಳಿಕವಾ ಬಿಜ್ಜಲೋರ್ವೀಶ ಪೌತ್ರಂ।
ತ್ರಿಗುಣೀಭೂತ ಪ್ರತಾಪಂ ತಳೆದನೆಳೆಯ ( ನಾ ) ಕನ್ದರ ಕ್ಷೋಣಿಪಂ ತ
ಜ್ಜಗತೀನಾಥಾನುತಾತಂ ಬಳಿಕಮವನಿಯುಂ ತಾಳ್ದಿದಂ ಸೋಯಿದೇವಂ॥

ಬಿಜ್ಜಳನ ತಮ್ಮನಾದ ಮೈಳುಗಿಯೂ ಆ ಮೇಲೆ ಬಿಜ್ಜಳನ ಮೊಮ್ಮಗನಾದ ಕಂದರನೂ ಆಳಿದ ಮೇಲೆ ಕಂದರನ (ಅನುತಾತ=) ಚಿಕ್ಕಪ್ಪನಾದ ಸೋಯಿದೇವ, ಅಂದರೆ ಬಿಜ್ಜಳನ ಮಗನಾದ ಸೋವಿದೇವನು ಆಳಿದನೆಂಬಲ್ಲಿ, ಬಿಜ್ಜಳ ಮತ್ತು ಸೋವಿದೇವರ ನಡುವೆ ಮೂರನೆಯುವನ ಆಳಿಕೆಗೆ ( ಅದೆಷ್ಟು ಕಿರಿದಾದರೂ ) ಎಡೆಯೂ ಇಲ್ಲ, ಆ ನಡುವೆ ಬೇರೆ ಯಾರೊಬ್ಬನಾದರೂ ಆಳಿದಂತೆ ಪ್ರತೀತಿಯೂ ಇಲ್ಲ ಎಂಬುದರಿಂದ ಈ ಶಾಸನದಲ್ಲಿ ಬಿಜ್ಜಳನ ಉಪರಾಜರೆಂದಾಗಲಿ ಉತ್ತರಾಧಿಕಾರಿಗಳೆಂದಾಗಲಿ ಹೇಳದೆ ಸೋವಿದೇವನ ಮುಂಚೆ ಆಳಿದರೆಂದು ಹೇಳಿರುವ ಮಾತ್ರವಲ್ಲ, ಬಿಜ್ಜಳನ ಆಳೊತ್ತಿನಲ್ಲಿ ತಾನೆ ಆಳಿರಬೇಕೆಂದು ಸ್ಪಷ್ಟವಾಗುವ ಮೈಳುಗಿಯೂ ಕಂದರನೂ ಬಿಜ್ಜಳನು ಆಳುತ್ತಿರುವಂದೇ ಆಳಿರಬೇಕಾದರೆ, ಅವರು ಪ್ರಾಯಶಃ ಅವನ ಪ್ರತಿರಾಜರಾಗಿ ತಾನೆ ಅನುಕ್ರಮವಾಗಿ ಆಳಿರಬೇಕು. ಈ ವೃತ್ತದಲ್ಲಿ ಬಿಜ್ಜಳನ ಮಗನಾದ ಸೋವಿದೇವನನ್ನು ಬಿಜ್ಜಳನ ಮೊಮ್ಮಗನಾದ ಕಂದರನ ಅನುತಾತ ಅಂದರೆ ಚಿಕ್ಕಪ್ಪನೆಂದಿರುವುದರಿಂದ, ಬಿಜ್ಜಳನಿಗೆ ಸೋವಿದೇವನಿಗಿಂತ ಹಿರಿಯನಾದ ಬೇರೊಬ್ಬ ಮಗನಿರಬೇಕೆಂದು ಸ್ವಯಂಸಿದ್ಧವಾಗುತ್ತದೆ; ಆತನೇ ಬಿಜ್ಜಳನ ಹಿರೇಮಗನಾಗಿರಬೇಕು.

---

೧. EC VII. ಈ ಶಾಸನದ ರೋಮನ್ ಲಿಪಿಯ (Roman script) ಪ್ರತಿಯಲ್ಲಿ ಈ ಮಹಾಸ್ರಗ್ಧರೆಯ ೩ನೆಯ ಚರಣದಲ್ಲಿಯ ಹೆಸರು ಸರಿಯಾಗಿ 'ಕನ್ದರ' ಎಂದದೆ; ಕನ್ನಡ ಲಿಪಿಯ ಪ್ರತಿಯಲ್ಲಾದರೊ ಅದು 'ಕನ್ಪರ' ಎಂದು ಪ್ರತ್ಯಕ್ಷತಃ ತಪ್ಪಾಗಿ ಅಚ್ಚಾಗಿದೆ.

ಕಳಚುರ್ಯ ಸಂಕಮನ ಕಾಲದ (1177-81) ತೇದಿ ಇಲ್ಲದ ದಾವಣಗೆರೆ 44 ರಲ್ಲಿಯೂ[೧] ಬಿಜ್ಜಳನ ಪ್ರತಾಪವನ್ನು ವರ್ಣಿಸುತ್ತಿರುವ ಸಂದರ್ಭದಲ್ಲಿಯೇ ಆತನ ತಮ್ಮನಾದ ಮೈಳುಗಿಯೂ ಮೊಮ್ಮಗನೂ ಆಳಿದರೆಂದು (ಬಂ. ೧೩-೧೭) ಹೇಳಿರುವ ಅವೇ ಪದ್ಯಗಳು ಸಂಕಮನ ಆಳಿಕೆಯ ಶಾ. ಶ. ೧೧೦೨ ಶಾರ್ವರಿ ಸಂ| ವೈಶಾಖ ಶುದ್ಧ ೮ ಸೋಮವಾರ=ಕ್ರಿ. ಶ. 1179 ಎಪ್ರೀಲ್ 16 ರ ಹೊನ್ನಾಳಿ 50 ನೆಯ ಶಾಸನದಲ್ಲಿಯೂ[೨] (ಬಂ. ೧೩–೧೬) ಇವೆ. ಆದರೆ ಇದರಲ್ಲಿ ಬಿಜ್ಜಳನ ಮೊಮ್ಮಗನ ಹೆಸರು ಮಾತ್ರ ಸವೆದು ಹೋಗಿದೆ. ದಾವಣಗೆರೆ 44 ರಲ್ಲಿಯ (ಬಂ. ೧೬–೧೭)

ಕಂ|| ಆತನ ಮರ್ಮಂ ಭುವನ
ಖ್ಯಾತಯಶಂ ಕಲಿದೇವನರ್ಣವ ಮಹಿಮಂ।
ನೀತಿನಿಧಿಯೆನಿಸಿ ನೆಗಟ್ದಂ
ಭೂತಳದೊಳು ಸಾಹಸಾಂಕನಪಗತಶಂಕಂ ||

ಎಂಬೀ ಕಂದ ಪದ್ಯದಿಂದ ತೋರುವ ಮೇರೆಗೆ ಆತನ, ಅಂದರೆ ಬಿಜ್ಜಳನ, ಮರ್ಮ ಅಂದರೆ (= ಮಮ್ಮ = ಮೊಮ್ಮ =) ಮೊಮ್ಮಗನ ಹೆಸರು 'ಕಲಿದೇವ' ಎಂದಾದರೆ ಇದರ ೨ನೆಯ ಚರಣದ ೩ನೆಯ ಗಣದಲ್ಲಿ ಛಂದಸ್ಸಿಗೆ ತೀರ ತೊಡಕಾಗುವುದರಿಂದ, 'ಕಲಿದೇವ' ಎಂದಿರದೆ ಅನ್ಯಥಾ ಇದ್ದಿರಬೇಕಾದ ಅವನ ಹೆಸರನ್ನು ಅಲ್ಲಿ 'ಕಲಿದೇವ' ಎಂದು ತಪ್ಪಾಗಿ ಕೊರೆದಿರಬೇಕು, ಆತಏವ ಅವನ ಸರಿಯಾದ ಹೆಸರು ಶಿಕಾರಿಪುರ 197 ರಲ್ಲಿಯ ಮೇಲಣ ಮಹಾಸ್ರಗ್ಧರೆಯಲ್ಲಿ ಛಂದಸ್ಸಿಗೆ ಒಪ್ಪಾಗಿ ಕೊಟ್ಟಿರುವಂತೆ 'ಕನ್ದರ' ಎಂದು ತಾನೆ ಇರಬೇಕು. ಕನ್ದರ ಎಂಬ ಪದವನ್ನು ಈ ಕಂದ ಪದ್ಯದ 'ಕಲಿ' ಆಥವಾ 'ಕಲಿದೇವ' ಎಂಬುದರ ಎಡೆಯಲ್ಲಿ ಇರಿಸಿದರೆ ಛಂದಸ್ಸಿಗೆ ನೇರಾಗದೆಂಬುದು ಸರಿಯೇ ಆದರೂ, 'ಕನ್ದರ' ಎಂಬುದೇ ಕೃಷ್ಣ (=ಕನ್ನ—ಕನ್ನರ—ಕನ್ದರ) ಆಥವಾ ಕರ್ಣ (= ಕನ್ನ—ಕನ್ನರ—ಕನ್ದರ) ಎಂಬುದರ ಲೌಕಿಕ ರೂಪವಾಗಿರುವುದರಿಂದ, ಈ ಕಂದದ ೨ನೆಯ ಚರಣದಲ್ಲಿಯ 'ಕಲಿ' ಎಂಬಲ್ಲಿ 'ಕೃಷ್ಣ' ಆಥವಾ 'ಕರ್ಣ' ಎಂದು ಓದುತ್ತಲೆ ಅದು

ಖ್ಯಾತಯಶಂ ಕೃಷ್ಣದೇವನರ್ಣವ ಮಹಿಮಂ।
ಅಥವಾ
ಖ್ಯಾತಯಶಂ ಕರ್ಣದೇವನರ್ಣವ ಮಹಿಮಂ।

ಎಂದು ಛಂದಸ್ಸಿಗೆ ನೇರಾಗುವ ಈ ಪದ್ಯದಲ್ಲಿ ಆತನನ್ನು **ಕೃಷ್ಣದೇವ**ನೆಂದೊ **ಕರ್ಣದೇವ**ನೆಂದೊ ಹೇಳಿರಬೇಕೆಂದು ಸ್ಪಷ್ಟವಾಗುವುದರಿಂದ, ಅವನ ಹೆಸರು

೧. EC, XI. ೨. EC, VII.

ಕೃಷ್ಣ ( ದೇವ ) ಅಥವಾ ಕರ್ಣ ( ದೇವ ) ಎಂದಿರಬೇಕು, ಅದನ್ನೇ ಶಿಕಾರಿಪುರ 197 ರಲ್ಲಿ ಕನ್ದರ ( ಕಂದರ ) ಎಂದಿರಬೇಕು.

ರಾಘವಾಂಕನ ಸಿದ್ಧರಾಮೇಶ್ವರಪುರಾಣದಲ್ಲಿ (9. ೨) ' ಬಿಜ್ಜಳನ **ತಮ್ಮನು ಕರ್ಣದೇವ** 'ನೆಂಬವನು ತನಗೆ ಪಟ್ಟಕಟ್ಟಲೆಂದು ಸಿದ್ಧರಾಮನನ್ನು ಕರೆಯುಕಳುಹಿಸಿದನೆಂಬಲ್ಲಿ, ಮೇಲಣ ಶಾಸನಾಧಾರದಿಂದ ಕರ್ಣದೇವನು ಬಿಜ್ಜಳನ ತಮ್ಮನಲ್ಲ ಮಮ್ಮ ( ಮೊಮ್ಮಗ )ನೆಂದು ತಿಳಿಯುವುದರಿಂದ, ' ಮಮ್ಮ ' ಎಂಬುದರ ಬದಲಿಗೆ ಇಲ್ಲಿ 'ತಮ್ಮ' ಎಂದು ಎಡಹಿ ಬರೆದಿರುವಂತೆ 'ಕರ್ಣದೇವ' ಎಂಬುದೂ 'ಕೃಷ್ಣದೇವ' ಎಂಬುದರ ಬದಲಿಗೆ ತಪ್ಪಾಗಿರದೆ ಒಪ್ಪಾಗಿದೆಯಾದರೆ, ಬಿಜ್ಜಳನ ಮೊಮ್ಮಗನ ಹೆಸರು ಕೃಷ್ಣದೇವ ಎಂದಲ್ಲ ಕರ್ಣದೇವ ಎಂದು ನಿಶ್ಚಯಿಸಬಹುದು. ಈ ಕರ್ಣದೇವನು ಬಿಜ್ಜಳನ ಹಿರೇ ಮಗನ ಮಗನೆಂದು ಮೇಲೆ ಕಂಡದೆ. ಅವನು ತನಗೆ ಕರ್ಣದೇವನು ಹುಟ್ಟುತ್ತಲೆ ತನ್ನ ಎಳವೆಯಲ್ಲಿ ತನ್ನ ತಂದೆ ಬಿಜ್ಜಳನ ಜೀವಮಾನದಲ್ಲಿಯೇ ಕಾಲವಾಗಿರಬೇಕು. ಅವನ ಹೆಸರೇನೆಂದು ಮಾತ್ರ ತಿಳಿಯದು. ಹಾಗಾದರೆ ಕಳಚುರ್ಯ ಬಿಜ್ಜಳನ ಸರಿಯಾದ ಪೀಳಿಗೆ ಹೀಗಾಗುತ್ತದೆ—




ಕರ್ಣದೇವನು ಸಿದ್ಧರಾಮನಿಗೆ ಕರೆಕಳುಹಿಸಿದುದನ್ನು ರಾಘವಾಂಕನ ಮೇಲಣ ಕಾವ್ಯದಲ್ಲಿ ( 8. ೯೫ )

ಭೂಪ ಬಿಜ್ಜಳನಳಿದ ವೀರ ಜಗದೇವನಿಂ ಸಿದ್ಧ ಸಂಖ್ಯಾತದಿಂದ ||

ಎಂದಬಳಿಕ, ಅಂದರೆ ಬಿಜ್ಜಳನ ಮರಣಾನಂತರ ಹೇಳಿರುವುದರಿಂದ, ಅದು ಸರಿಯಾದರೆ, ಬಿಜ್ಜಳನು ಇದ್ದಂದೇ ಅವನ ವಿರೋಧಿಯಾಗಿದ್ದ ಕರ್ಣದೇವ ( ಕಂದರ)ನು ಬಿಜ್ಜಳನು ಕಾಲವಾದಮೇಲೂ ಕಲ್ಯಾಣದ ಸಿಂಹಾಸನವನ್ನು ಸಾಧಿಸುತ್ತಿದ್ದನೆಂದು ತಿಳಿವಂತೆಯೇ, ಬಿಜ್ಜಳನ ರಾಜ್ಯತ್ಯಾಗಕ್ಕೆ ಮೊದಲೇ ಅವನಲ್ಲಿ ವಿಮನಸ್ಕನಾಗಿ

ಅವನಿಂದ ತೊಲಗಿದ, ಅತಏವ ತನಗೆ ಮನಃಪೂರ್ವಕವಾಗಿ ನೆರವಾಗಲಾಪ ಬಸವೇಶ್ವರನನ್ನು ತನಗೆ ಪಟ್ಟಕಟ್ಟುವ ಬಗ್ಗೆ ಕರ್ಣದೇವನು ಯಾಚಿಸದೆ ಸಿದ್ಧರಾಮನನ್ನು ಬಿನ್ನವಿಸಿದುದರಿಂದ, ಆ ಮುಂಚೆಯೇ ಬಸವೇಶ್ವರನು ಕಾಲವಾಗಿರಬೇಕೆಂದೂ ಸಿದ್ಧರಾಮನಾದರೊ (9. ೨೦) ಕರ್ಣದೇವನಿಗೆ ರಾಜ್ಯ ದೊರಕದು, ಪಟ್ಟವಾಗದು ಎಂದು ಮುಂಗಂಡೇ ಏನೋ

ಹರ ಮುನ್ನ ಹರಸಿ ಕಟ್ಟಿದ ಲಿಖಿತ ಪಟ್ಟವುಂ
ಪರಿಹರಿಸಿ ಮತ್ತೊಂದು ಮಾಡುವೀ ಸಾಮರ್ಥ್ಯ
ಹರಿಯಜರಿಗಾಗದೆನೆ ನರರಿಗಳವಲ್ಲಯ್ಯ ಮಲ್ಲಯನೆ ಬಲ್ಲ

ನೆಂದು ವ್ಯಂಗ್ಯವಾಗಿ ಸೂಚಿಸಿರಬೇಕೆಂದೂ ತೋರುವುದರಿಂದ, ಅವನಿಗೆ ಕಲ್ಯಾಣದ ಪಟ್ಟವಾಗಲಿಲ್ಲವೆಂದೂ ತಿಳಿಯುತ್ತದೆ.

ಹೀಗೆ ಬಿಜ್ಜಳನು ಆಳುತ್ತಿರುವಂದೇ ಅವನ ಕುಟುಂಬದಲ್ಲಿಯೂ ರಾಜಧಾನಿಯಲ್ಲಿಯೂ ಕಲಹಗಳು ಉತ್ಪಾದಿಸಿ, ಒಂದು ಕಡೆ ತನಗೆ ವಿರೋಧವಾಗಿ ಎದ್ದ ತನ್ನ ತಮ್ಮನು ಕಾಲವಾದ ಅಥವಾ ಅವನನ್ನು ತಾನು ನಿಗ್ರಹಿಸಿದ ಮೇಲೊ ಇಲ್ಲವೆ ಅವನೊಂದಿಗೆ ಸೇರಿ ಅವನ ಜತೆಯಲ್ಲಿಯೊ ತನಗೆ ವಿರೋಧಿಯಾಗಿ ಅಲ್ಲಲ್ಲಿ ಆಳುತ್ತಿರುವ ತನ್ನ ಮೊಮ್ಮಗನು ತಾನು ಚಾಳುಕ್ಯ III ತ್ಯೈಲನಿಂದ ಸೆಳಕೊಂಡ ಸಿಂಹಾಸನವನ್ನು ತನ್ನಿಂದ ಸೆಳಕೊಂಡಾನೊ ಎಂದೂ ಮತ್ತೊಂದು ಕಡೆ ಬಸವೇಶ್ವರನಿಗೂ ತನಗೂ ಉಂಟಾದ ಮನಸ್ತಾಪದ ದೆಸೆಯಿಂದ ರಾಜಧಾನಿಯಲ್ಲಿಯೇ ಸಹಜವಾಗಿ ಬೇರೆಯೇ ಒಂದು ತಂಡವಾಗಿ ಬೆಳೆಯುತ್ತಿರುವ ಬಸವೇಶ್ವರನ ಪಕ್ಷದವರು ತನಗೆ ನೆರವಾದಾರೆಂಬ ಕೋರಿಕೆ ಹೇಗೂ ಇಲ್ಲವಷ್ಟೇ, ಪ್ರತ್ಯುತ ಅವರು ತನ್ನ ಶತ್ರುಗಳೊಂದಿಗೆ ಒಮ್ಮೆಯ್ಯಾಗಿ ತನಗೆ ಮಾರ್ಮಲೆತಾರೊ ಎಂದೂ ತನ್ನ ಇಳಿಪ್ರಾಯದಲ್ಲಿ ಈ ರೀತಿಯ ಉಭಯ ಸಂಕಟದಲ್ಲಿ ಸಿಲುಕಿದ ಬಿಜ್ಜಳನು ಅವಲ್ಲಿ ತನಗೆ ಗುರುತರವೆಂದು ತೋರಿದ ಕಂಟಕವನ್ನು, ಅಂದರೆ ತನ್ನ ಖಾಸಾ ಮೊಮ್ಮಗನ ಮೇಲೆ ಕೈಯ್ಮಾಡಲೊಲ್ಲದೆ ತನ್ನ ವಾವಿಯುವನೂ ಅಲ್ಲ ವರಿಸೆಯುವನೂ ಅಲ್ಲದ ಬಸವೇಶ್ವರನನ್ನು, ಕಿತ್ತೊಗೆಯಲೆಂದು ಹೆಚ್ಚುಕಡಿಮೆ ಅದೇ ಸಮಯಕ್ಕೆ ಸರಿಯಾಗಿ ಕ್ರಿ. ಶ. 1170 ರಲ್ಲಿ ಅಂಗ್ಲಾಳದ II ಹೆನ್ರಿ (Henry II of England) ಎಂಬ ಅರಸನು ತನ್ನ ಸಚಿವನೂ ತನ್ನ ರಾಜ್ಯದ ಧರ್ಮಾಧ್ಯಕ್ಷನೂ ಆದ ಥೊಮಸ್ ಎ ಬೆಕೆಟ್ (Thomas a Becket) ಎಂಬವನನ್ನು ಕೊಲ್ಲಿಸಿದಂತೆ, ಬಸವೇಶ್ವರನನ್ನು ಕೊಲ್ಲಬಗೆದು ಆ ಬಗ್ಗೆ ಆಳುಗಳನ್ನು ಅವನಿದ್ದಲ್ಲಿಗೆ ಅಟ್ಟುತ್ತಲೇ, ಆಗ್ಗೆ ತನ್ನ ಅವತಾರವು ಸಮಾಪಿಸಿತೆಂದೂ ಬಿಜ್ಜಳನ ಕೊಲೆಗಡಿಗರು ತನ್ನ ಬೆನ್ನಹಿಂದೆ ಇರುವರೆಂದೂ ಪ್ರಾಯಶಃ ಅರಿತೇ ತನ್ನ ಆರಾಧ್ಯ ದೇವನಾದ ಕೂಡಲ ಸಂಗಮೇಶ್ವರ

ನಲ್ಲಿಗಯ್ದಿ ಆತನ ಸನ್ನಿಧಿಯಲ್ಲಿದ್ದ ಬಸವೇಶ್ವರನು ಅಲ್ಲಿ ಅವರ ಕತ್ತಿಯ ಧಾರೆಗೆ ಈಡಾಗಿಯೊ ಸಮಾಧಿಯ ದಾರಿಯಿಂದ ಪಾರಾಗಿಯೊ ತನ್ನ ಸಂಗಮೇಶ್ವರನಲ್ಲಿ ಐಕ್ಯವಾದನು.

ಹೀಗೆ ಬಸವೇಶ್ವರನನ್ನು ತನ್ನ ದಾರಿಯಿಂದ ತೆಗೆದ ಮೇಲಾದರೂ ತನ್ನ ರಾಜ್ಯದಲ್ಲಿ ಸಾಕಷ್ಟು ನೆಮ್ಮದಿಯಾದೀತೆಂದಿದ್ದ ಬಿಜ್ಜಳನು ತನ್ನ ಮೊಮ್ಮಗನಾದ ಕರ್ಣದೇವನು ಎಬ್ಬಿಸುತ್ತಿರುವ ಕ್ಷೋಭವನ್ನು ಇನ್ನೂ ಅಂಕೆಗೆ ತರಲಾರದೆ, ವರಿಸೆಯ ಮೇರೆಗೆ ತನ್ನ ಬಳಿಕ ತನ್ನ ಹಿರೀ ಮಗನ ಮಗನಾದ ಆ ಕರ್ಣದೇವನಿಗೆ ಸಲ್ಲತಕ್ಕ ತನ್ನ ಪಟ್ಟವು ದ್ರೋಹಿಯಾದ ಆತನಿಗೆ ಹೋಗಬಾರದೆಂದೊ, ಮುದುಕನಾದ ತನ್ನಿಂದ ಹಿಮ್ಮೆಟ್ಟಿಸಲಾರದ ಆ ವಿಪ್ಲವವನ್ನು ತನ್ನ ಮಗನಾದ ಸೋವಿದೇವನು ಮಾಣಿಸುವನೆಂದೊ, ಬಸವೇಶ್ವರನು ಲಿಂಗೈಕ್ಯವಾದ ಕೆಲವೇ ತಿಂಗಳೊಳಗೆ ಶಿಕಾರಿಪುರ 92 ರಿಂದ ಮೇಲೆ ಕಂಡಿರುವ[೧] ಮೇರೆಗೆ ಸೋವಿದೇವನಿಗೆ 'ಆತ್ಮರಾಜ್ಯಭರ ನಿರೂಪಣಂ' ಮಾಡಿರಬೇಕು, ಅಂದರೆ ಇನ್ನು ಮುಂದೆ ತನ್ನ ರಾಜ್ಯಭಾರವು ಸೋವಿದೇವನಿಗೆಂದು ನಿರೂಪಿಸಿ ಆ ರಾಜ್ಯಾಧಿಕಾರವನ್ನು ಅವನಿಗೆ ಬಿಟ್ಟುಕೊಟ್ಟು ತಾನು ರಾಜ್ಯಭಾರದಿಂದ ನಿವೃತ್ತನಾಗಿರಬೇಕು. ಕ್ರಿ. ಶ. 1168ರ ಮಾರ್ಚಿ ತಿಂಗಳಲ್ಲಿ ಬಿಜ್ಜಳನು ದತ್ತಿ ಬಿಟ್ಟನೆಂದು ಮೇಲೆ ಕಂಡಿರುವುದರಿಂದ,[೨] ಬಸವೇಶ್ವರನು ಲಿಂಗೈಕ್ಯವಾದ ಮೇಲೆ ಹೆಚ್ಚುಕಡಿಮೆ ಒಂದು ವರ್ಷವಾದರೂ ಬದುಕಿದ್ದನೆಂದು ತಿಳಿವ ಬಿಜ್ಜಳನ ಆ ಬಳಿಕಣ ಶಾಸನಗಳು ದೊರೆಯದುದರಿಂದ, ಅವನು ಆ ಮೇಲೆ ಹೆಚ್ಚು ಕಾಲ ಬದುಕಿರಲಾರನು. ಅವನ ಅವಸಾನವು ಹೇಗಾಯಿತೆಂದು ಅನ್ಯಥಾ ತಿಳಿಯದಾದರೂ ಆ ಕುರಿತು ಹೇಳಿರುವ ಕನ್ನಡ ಸಾಹಿತ್ಯದಲ್ಲಿ ಮಿಕ್ಕೆಲ್ಲವಕ್ಕಿಂತಲೂ ಹಿಂದಣ, ಹಾಗೂ ಅವನ ಕಾಲದಿಂದ ಹೆಚ್ಚಾದರೆ ೩೦ - ೪೦ ವರ್ಷಗಳೊಳಗಣ, ರಾಘವಾಂಕನ ಸಿದ್ಧರಾಮೇಶ್ವರ ಪುರಾಣದಲ್ಲಿ ( 8. ೯೫ )

ಭೂಪ ಬಿಜ್ಜಳನಳಿದ ವೀರ ಜಗದೇವನಿಂ ಸಿದ್ಧ ಸಂಖ್ಯಾತದಿಂದ ||

ಎಂದಿರುವಲ್ಲಿ ಬಿಜ್ಜಳನನ್ನು ಕೊಂದನೆಂಬ ಜಗದೇವನೂ ಬಸವಪುರಾಣದಲ್ಲಿಯೂ ( ಸಂಧಿ 61 ) ಚನ್ನಬಸವಪುರಾಣದಲ್ಲಿಯೂ ( V. 9. ೬೨ - ೭೩ ) ಇರುಳಿನೋಲಗದಲ್ಲಿದ್ದ ಆತನನ್ನು ಮಡುಹಿದನೆಂದಿರುವ ಜಗದೇವನೂ ಒಬ್ಬನೇ ಎಂದು ಪ್ರತ್ಯಕ್ಷವಿರುವುದರಿಂದ, ಬಸವೇಶ್ವರನ ಭಕ್ತನಾದ ಜಗದೇವನು ಹೊತ್ತು ಸಾಧಿಸಿ ತನ್ನ ಗುರುದ್ರೋಹಿಯಾದ ಬಿಜ್ಜಳನನ್ನು ಕೊಂದು ಗುರುಹತ್ಯದ ಸೇಡನ್ನು ತೀರಿಸಿರಬೇಕೆಂದೂ ಆ ಘಟನೆ ಕ್ರಿ. ಶ. 1168 ರ ಪ್ರಾಯಶಃ ಉತ್ತರಾರ್ಧದಲ್ಲಿ ಸಂಭವಿಸಿರಬೇಕೆಂದೂ ನಿಶ್ಚಯಿಸಬಹುದು.

---

೧. EC VII. ೨ SIE, 1935, ನಂ. 58.

ಬಿಜ್ಜಳನು ಕೊಲ್ಲಲ್ಪಡುತ್ತಲೆ ಚನ್ನಬಸವೇಶನನ್ನು ಕೊಲ್ಲಲೆಂದು ಸಸೈನ್ಯನಾಗಿ ಹಿಂದಟ್ಟಿ ಹೋದ ಅಳಿಯ ಬಿಜ್ಜಳನನ್ನು ಚನ್ನಬಸವೇಶನು ಸೋಲಿಸಿ, ಬಿಜ್ಜಳನಂತೆ ಶಿವಶರಣರನ್ನು ಹಿಂಸಿಸಬೇಡವೆಂದು ಅವನಿಗೆ ಬುದ್ಧಿ ಹೇಳಿ ಕಳುಹಿಸಿದನೆಂದು ಚನ್ನಬಸವಪುರಾಣದಲ್ಲಿ ( V. 9 ೨೪ – ೨೯ ) ಹೇಳಿದೆ. ಈ ಹೇಳಿಕೆ ಇತಿಹಾಸಕ್ಕೆ ವ್ಯತಿರಿಕ್ತವಾಗಿಲ್ಲವಾದರೆ, ಇದರಲ್ಲಿಯ ಅಳಿಯ ಬಿಜ್ಜಳನೆಂದರೆ ಬಿಜ್ಜಳನ ಅಳಿಯನೆಂದು ಸಾಕಷ್ಟು ಸ್ಪಷ್ಟವಿರುವುದರಿಂದ, ಈತನು ಬಿಜ್ಜಳನ ಅಳಿಯನಾದ, ಅಂದರೆ ಬಿಜ್ಜಳನ ಮಗಳಾದ ಸಿರಿಯಾದೇವಿಯ ಗಂಡನಾದ, ( ಬಡಗಣ ) ಸಿಂದ ವಂಶದ II ಚಾವುಂಡನಾಗಿರಬೇಕು. ಮೇಲೆ ಕಂಡಿರುವಂತೆ ಈಗ ಬಲ್ಲಷ್ಟರ ಮಟ್ಟಿಗೆ ಕ್ರಿ. ಶ 1169 ದಶಂಬರದ ಹಿರೇಮುನ್ನೂರಿನ ಶಾಸನವು[೧] II ಚಾವುಂಡನ ಕೊನೆಯದೆಂಬುದರಿಂದ, ಈ ಘಟನೆಯೂ ಅತಏವ ಬಿಜ್ಜಳನ ವಧೆಯೂ ಕ್ರಿ. ಶ. 1168 ರಲ್ಲಿ ಸಂಭವಿಸಿಗಬೇಕು. ಜೈನ ಬಿಜ್ಜಳರಾಯಚರಿತೆಯಲ್ಲಿ[೨] ಇಮ್ಮಡಿ ಬಿಜ್ಜಳನು ಚನ್ನಬಸವೇಶನನ್ನು ತನ್ನ ಮಂತ್ರಿಯಾಗಿ ಇರಿಸಿಕೊಂಡನೆಂದು ಹೇಳಿದೆ. ಬಿಜ್ಜಳ ಎಂಬುದು ಅಂಕಿತನಾಮವೇ ವಿನಾ ಬಿರುದಲ್ಲವೆಂದು ಪ್ರತ್ಯಕ್ಷವಿರುವುದರಿಂದಲೂ ತಂದೆಯ ಹೆಸರನ್ನೇ ಮಗನಿಗೂ ಇಕ್ಕುವ ಪದ್ಧತಿ ಇಲ್ಲಿ ಇಲ್ಲದಿರುವುದರಿಂದಲೂ ಮಾತ್ರವಲ್ಲ, ಬಿಜ್ಜಳನ ಮಗನಾದ ಸೋವಿದೇವನಿಗೆ ಇಮ್ಮಡಿ ಬಿಜ್ಜಳ ಎಂದೂ ಹೆಸರಿದ್ದಂತೆ ಯಾವೊಂದು ಶಾಸನದಲ್ಲಿಯೂ ತೋರದುದರಿಂದಲೂ, ಇಮ್ಮಡಿ ಬಿಜ್ಜಳನೆಂದರೆ ಡಾ| ಫ್ಲೀಟರು ( Dr. Fleet ) ಭಾವಿಸಿದಂತೆ[೨] ಸೋವಿದೇವನೆಂದಿಗೂ ಅಲ್ಲ. ಕಳಚುರ್ಯ ಬಿಜ್ಜಳನ ದೌಹಿತ್ರನೂ ಸಿಂದ II ಚಾವುಂಡನ ಮಗನೂ ಆದ ಸಿಂದ ಬಿಜ್ಜಳನೂ ಬಿಜ್ಜಳನಷ್ಟೇ. ಸನಾಮರಾದ ಈ ಮಾತಾಮಹನೂ ದೌಹಿತ್ರನೂ ಅನ್ಯಾನ್ಯ ವಂಶದವರೇ ಆದರೂ ಮಾತೃಪಕ್ಷವು ಪಿತೃಪಕ್ಷಕ್ಕಿಂತ ನಿಕಟತರವೆಂಬುದರಿಂದಲೂ ಕಳಚುರ್ಯ ಬಿಜ್ಜಳನು ಮಡಿದ ಕ್ರಿ. ಶ. 1168 ರಿಂದ ೨ – ೩ ವರ್ಷದಲ್ಲಿಯೇ II ಚಾವುಂಡನು ಕಾಲವಾಗಿ ಅವನ ಮಗನಾದ ಸಿಂದ ಬಿಜ್ಜಳನು ತನ್ನ ತಂದೆಯ ಪಟ್ಟಕ್ಕೆ ಬಂದುದರಿಂದಲೂ ಲೋಕವಾಡಿಕೆಯಲ್ಲಿ ಸಿಂದ ಬಿಜ್ಜಳನನ್ನು ಇಮ್ಮಡಿ ಬಿಜ್ಜಳನೆಂಬುದು ಸಹಜವೇ; ಇತಿಹಾಸವನ್ನಲ್ಲ ಲೋಕೋಕ್ತಿಯನ್ನು ಅನುಸರಿಸಿ ರಚಿಸಲ್ಪಟ್ಟ ಸಾಹಿತ್ಯದಲ್ಲಿ ಕಳಚುರ್ಯ ಬಿಜ್ಜಳನ ದೌಹಿತ್ರನಾದ ಸಿಂದ ಬಿಜ್ಜಳನನ್ನು ಇಮ್ಮಡಿ ಬಿಜ್ಜಳನೆಂದರೆ ಒಪ್ಪೇ ವಿನಾ ತಪ್ಪಲ್ಲ. ಮೇಲೆ ಕಂಡಿರುವ ಬೆಣಚಮಟ್ಟಿ (B) ಶಾಸನದಲ್ಲಿ[೩] (ಬಂ. ೪) ಪ್ರಖ್ಯಾತ ಶಿವಭಕ್ತರಾದ ನಂಬಿ, ಬಾಣ, ಓಹಿಲರೊಂದಿಗೆ ಹೋಲಿಸಿರುವ ಸಿಂದ

---

೧. SIE, 1928, App. E. ಪು. 20, ನಂ. 4. ೨. FKD, ಪು. 481, f.n. 2.
೩. EI. XX, ಪು. 117—118.

ಬಿಜ್ಜಳನು ಪ್ರಾಯಶಃ ವೀರಶೈವನೇ ಆಗಿದ್ದನೆಂದು ತೋರುವುದರಿಂದ, ಈತನು ಬಸವೇಶ್ವರನ ಸೋದರಳಿಯನಾದ ಚನ್ನಬಸವೇಶನನ್ನು ತನ್ನಲ್ಲಿ ಇರಿಸಿಕೊಳ್ಳಲಿಕ್ಕೂ ಆತನು ಇವನಲ್ಲಿ ಉಳಕೊಳ್ಳಲಿಕ್ಕೂ ಶಾನೆ ಸಂಭವವೂ ಇದೆ. ಅತಏವ ಬಸವೇಶ್ವರನು ಲಿಂಗೈಕ್ಯವಾದ ಕಿರುಗಾಲದಲ್ಲಿ ಚನ್ನಬಸವೇಶ್ವರನು[೧] ಸಿಂದ ಬಿಜ್ಜಳನ ಆಸ್ಥಾನವನ್ನು ಸೇರಿ ಆತನನ್ನು ಓಲಗಿಸಿರಬೇಕು.

---

೧. ಚನ್ನಬಸವೇಶನ ವಚನಗಳಲ್ಲಿ ( ಶಿವಾನುಭವ ಗ್ರಂಥಮಾಲಾ ನಂ. ೩೨. ಪು. ೩೨, ನಂ. ೬ ) 'ಬಂದಿಖಾನೆ' ಎಂಬ ಪ್ರತ್ಯಕ್ಷ ಅನ್ಯದೇಶೀಯ ಶಬ್ದವಿದೆಯಷ್ಟೇ, ಇದು ಆಗಣ ( ಅಂದರೆ ಕ್ರಿ ಶ. 12 ನೆಯ ಶತಮಾನದ ) ಕನ್ನಡದಲ್ಲಿ ಇದ್ದಿರಬಹುದೇ?

# ಕನ್ನಡ ಸಾಹಿತ್ಯದ ಪ್ರಾಚೀನತೆ



## ( ಕ್ರಿ. ಶ. 9 ನೆಯ ಶತಕದಿಂದ ಹಿಂದೆ 3 ನೆಯ ಶತಕದ ವರೆಗೆ )

## I

ನೃಪತುಂಗನ ( ಕ್ರಿ. ಶ. 814 — 877 ) ಕವಿರಾಜಮಾರ್ಗಕ್ಕಿಂತ ಹಿಂದಣ ಯಾವೊಂದೂ ಸಮಗ್ರವಾದ ಕನ್ನಡ ಕಾವ್ಯವು ಇದುವರೆಗೆ ದೊರೆತಿಲ್ಲವಾದರೂ ಅದರಲ್ಲಿ ( I. ೨೭ ) ಆತನು

ಮಿಗೆ ಕನ್ನಡ ಗಬ್ಬಂಗಳೊ
ಳಗಣಿತ ಗುಣ ಗದ್ಯಪದ್ಯ ಸಮ್ಮಿಶ್ರಿತಮಂ ।
ನಿಗದಿಸುವರ್ ಗದ್ಯ ಕಥಾ
ಪ್ರಗೀತಿಯಂ ತಚ್ಚಿರಂತನಾಚಾರ್ಯರ್ಕಳ್ ॥

ಎಂದೂ ಕನ್ನಡ ದೇಶಿಯಲ್ಲಿ 'ಪುರಾಣ ಕವಿಗಳ ಸಂತತ ಗತಮಾರ್ಗ'ವೂ ( I. ೪೭) 'ಪುರಾಣ ಕಾವ್ಯಪ್ರಯೋಗ'ವೂ ( I. ೫೦ ) ಇದೆ ಎಂದೂ ಹೇಳಿರುವುದರಿಂದ ಮಾತ್ರವಲ್ಲ, ಅದರಲ್ಲಿ ಹಳೆಯದೊಂದು ಕನ್ನಡ ರಾಮಾಯಣದಿಂದ ಕೆಲವು ಪದ್ಯಗಳನ್ನು ( II. ೩೮; ೪೦; ೪೩; ೮೯; ೯೧; ೯೬ ಇ ) ಲಕ್ಷ್ಯವಾಗಿ ಕೊಟ್ಟಿರುವುದರಿಂದಲೂ ತನಗಿಂತ ಪೌರ್ವಿಕರಾದ ಕೆಲವು ಕನ್ನಡ ಗದ್ಯ ಕವಿಗಳನ್ನೂ (I. ೨೯)—

ವಿಮಳೋದಯ ನಾಗಾರ್ಜುನ
ಸಮೇತ ಜಯಬಂಧು ದುರ್ವಿನೀತಾದಿಗಳೀ ।
ಕ್ರಮದೊಳ್ ನೆಗಟ್ಚಿ ಗದ್ಯಾ
ಶ್ರಮಪದ ಗುರುತಾ ಪ್ರತೀತಿಯಂ ಕೆಯ್ಕೊಂಡರ್ ॥

ಕೆಲವು ಪದ್ಯ ಕವಿಗಳನ್ನೂ ( I. ೩೩ )—

ಪರಮ ಶ್ರೀವಿಜಯ ಕವೀ
ಶ್ವರ ಪಂಡಿತ ಚಂದ್ರ ಲೋಕಪಾಲಾದಿಗಳಾ ।
ನಿರತಿಶಯ ವಸ್ತು ವಿಸ್ತರ
ವಿರಚನೆ ಲಕ್ಷ್ಯಂ ತದಾದ್ಯ ಕಾವ್ಯಕ್ಕೆಂದುಂ ॥

ಹೆಸರಿಸಿರುವುದರಿಂದಲೂ ಆತನ ಕಾಲಕ್ಕೆ ಹಿಂದೆ ಹಲವು ಪ್ರಸಿದ್ಧ ಕನ್ನಡ ಕವಿಗಳು ಆಗಿ ಹೋಗಿದ್ದರೆಂದೂ ಅವರ ಗ್ರಂಥಗಳು ಪ್ರಾಯಶಃ ಆತನ ಕಾಲದಲ್ಲಿ ಇದ್ದಿರಬೇಕೆಂದೂ ಕಂಡಿತವಾಗುವುದರಿಂದ ಆತನಿದ್ದ ಕ್ರಿ. ಶ. 9 ನೆಯ ಶತಕಕ್ಕೆ

ಕೆಲವಾದರೂ ಶತಮಾನಗಳ ಹಿಂದಿನಿಂದಲೇ ಕನ್ನಡದಲ್ಲಿ ಗದ್ಯಪದ್ಯಾತ್ಮಕವಾದ ಸಾಹಿತ್ಯವು ಸಾಕಷ್ಟು ಸಮೃದ್ಧವಾಗಿತ್ತೆಂದು ವ್ಯಕ್ತವಾಗುತ್ತದೆ.

ಈ ನಿರ್ಣಯವು ಈ ಬೇರೆ ಕಾರಣಗಳಿಂದಲೂ ಕೆಯ್ಗೂಡುತ್ತದೆ—

೧. ಯಾವೊಂದು ಭಾಷೆಯಲ್ಲಿ ಸಾಕಷ್ಟು ಸಾಹಿತ್ಯವಿರದ ಮುಂಚೆ, ಮೇಲಾಗಿ ಪದ್ಯ ಸಾಹಿತ್ಯವು ಸಾಕಷ್ಟು ಬೆಳೆದಿರದ ಮುಂಚೆ, ಅಲಂಕಾರ ಗ್ರಂಥಗಳ ಆವಶ್ಯಕತೆ ಇಲ್ಲದುದರಿಂದ ಅವು ಆ ತನಕ ಹುಟ್ಟವು ಎಂಬುದನ್ನು ಒಪ್ಪಿದರೆ, ಕನ್ನಡದಲ್ಲಿ ಕವಿರಾಜಮಾರ್ಗದಂಥ ಪ್ರೌಢವಾದ ಅಲಂಕಾರ ಗ್ರಂಥವು ರಚಿತವಾಗಿರಬೇಕಾದರೆ ಆ ಮುಂಚಿನಿಂದಲೇ ಆ ತಕ್ಕಂತೆ ಪ್ರೌಢವಾದ ಕನ್ನಡ ಸಾಹಿತ್ಯವೂ ಇದ್ದಿರಬೇಕು.

೨. ಕವಿರಾಜಮಾರ್ಗದ ರಚಕನು ಕೆಲವೆಡೆಗಳಲ್ಲಿ 'ಪೂರ್ವ ಶಾಸ್ತ್ರಪದ ವಿಧಿಯಂ ತೆಱಿದಿರೆ ಪೇೞ್ವೆನಿನಿಸಂ ಕನ್ನಡದೊಳ್' (II. ೪೬), 'ಪುರಾಣ ಕವಿಗಳ ವಿದಿತಾಂತರಮಂ ಪೇೞ್ವೆನ್' (II. ೫೧) ಎಂದೂ ಕೆಲವೆಡೆಗಳಲ್ಲಿ 'ಅತಿಶಯಧವಳೋಕ್ತ ಕ್ರಮದಿ' (I. ೨೧; II. ೫೫), 'ನೃಪತುಂಗದೇವ ವಿದಿತ ಕ್ರಮದಿಂ' (II. ೪೫), 'ನೃಪತುಂಗದೇವ ಮತದಿಂ' (III. ೨೦೮), 'ಆಗದೆಂದ ನತಿಶಯ ಧವಳಂ' (II. ೨೯) ಎಂದೂ ಇರುವಲ್ಲಿ ಅವಲ್ಲಿ ತನ್ನ ಹಿಂದಣ ಆಲಂಕಾರಿಕರ ಮತವನ್ನೂ ಇವಲ್ಲಿ ಕೆಲವೊಮ್ಮೆ ಅದೇ ಮತವನ್ನೂ ಕೆಲವೊಮ್ಮೆ ಪ್ರಾಯಶಃ ತನ್ನ ಭಿನ್ನಾಭಿಪ್ರಾಯವನ್ನೂ ಸೂಚಿಸಿರುತ್ತಾನೆಂದು ತೋರುವುದರಿಂದ, ಕವಿರಾಜ ಮಾರ್ಗಕ್ಕಿಂತ ಹಿಂದೆ ಕನ್ನಡದಲ್ಲಿ ಇತರ ಅಲಂಕಾರ ಗ್ರಂಥಗಳೂ ಇದ್ದುವೆಂದು ಸ್ವಯಮೇವ ಸಿದ್ಧವಾಗುತ್ತದೆ. ಆದರೆ ಅದರಲ್ಲಿ ಹೇಳಿದ ಆ ಪೂರ್ವ ಶಾಸ್ತ್ರಗಳೂ ಪುರಾಣ ಕವಿಗಳೂ ಅದಕ್ಕೆ ಮಾತೃಕೆಯಾಗಿರಬಹುದಾದ ಸಂಸ್ಕೃತ ಅಲಂಕಾರ ಗ್ರಂಥಗಳೂ ಆ ಮುಂಚಿನ ಪ್ರಸಿದ್ಧರಾದ ಸಂಸ್ಕೃತ ಕವಿಗಳೂ ಆಗಿರಬಾರದೇಕೆ? ಎಂದು ಆಕ್ಷೇಪಿಸಿದರೆ, ಅದಕ್ಕೆ ಸಂಸ್ಕೃತದಲ್ಲಿ ಇಲ್ಲದ ಪ್ರಾಸವನ್ನು ಕುರಿತು ಕವಿರಾಜ ಮಾರ್ಗದಲ್ಲಿ

ದೋಷಮನೆ ಗುಣದವೋಲು
ದ್ಭಾಸಿಸಿ ಕನ್ನಡದೊಳೊಲ್ದು ಪೂರ್ವಾಚಾರ್ಯರ್।
ದೇಸಿಯನೆ ನಿೞಿಸಿ ಖಂಡ
ಪ್ರಾಸಮನತಿಶಯಮಿದೆಂದು ಯತಿಯಂ ಮಿಕ್ಕರ್॥ (I. ೭೫)

ಎಂದೂ

ಪ್ರಾಸಾನುಪ್ರಾಸಾಂತ
ಪ್ರಾಸಂಗಳ್ ಮೂಱುಮತಿಶಯಂಗಳ್ ಪ್ರಾಸಾ।
ಭಾಸಂಗಳುೞಿದ ಮೂಱುಂ
ಭಾಸುರ ನೃಪತುಂಗದೇವ ವಿದಿತಕ್ರಮದಿಂ॥ (II. ೪೫)

ಎಂದೂ ಇರುವಲ್ಲಿ ಮೊದಲನೆಯ ಪದ್ಯದಲ್ಲಿ ಕನ್ನಡದಲ್ಲಿ ಒಲಿದವರೆಂಬ ಪೂರ್ವಾಚಾರ್ಯರು ಕನ್ನಡ ಆಲಂಕಾರಿಕರೇ ವಿನಾ ಸಂಸ್ಕೃತ ಆಲಂಕಾರಿಕರಲ್ಲ, ಮತ್ತಿನದರಲ್ಲಿ ವ್ಯಕ್ತೀಕರಿಸಿದ ಅಭಿಪ್ರಾಯವು ತನ್ನ ಹಿಂದಣ ಕನ್ನಡ ಸಾಹಿತ್ಯವನ್ನು ಕುರಿತಲ್ಲದೆ ಸಂಸ್ಕೃತ ಸಾಹಿತ್ಯವನ್ನಲ್ಲ ಎಂದು ಪ್ರತ್ಯಕ್ಷವಿರುವ ನಿವೃತ್ತಿ ಇದೆ. ಹೀಗೆ ಕವಿರಾಜಮಾರ್ಗಕ್ಕಿಂತ ಹಿಂದೆ ಕನ್ನಡದಲ್ಲಿ ಕವಿಗಳಷ್ಟೇ ಅಲ್ಲ, ಅಲಂಕಾರ ಗ್ರಂಥಗಳೂ ಇದ್ದುವೆಂಬುದರಿಂದ ಆ ತಕ್ಕ ಸಾಹಿತ್ಯ ಸಮೃದ್ಧಿಯೂ ಇದ್ದಿರಬೇಕು.

೩. ಅಲಂಕಾರ ಗ್ರಂಥಗಳೇ ಅಲ್ಲ, ವ್ಯಾಕರಣ ಗ್ರಂಥದಲ್ಲಿ ಹೇಳತಕ್ಕಂತೆ ಕವಿರಾಜಮಾರ್ಗದಲ್ಲಿ ಅರಿಸಮಾಸ ದೋಷವನ್ನೂ ( I. ೫೮ )—

ತಱಸಂದಾ ಸಕ್ಕದಮುಮ
ನಱಯದೆ ಕನ್ನಡಮುಮಂ ಸಮಾಸೋಕ್ತಿಗಳೊಳ್ ।
ಕುಱತು ಬೆರಸಿದೊಡೆ ವಿರಸಂ
ಮಱುಗುವ ಪಾಲ್ಗಳೆಯು ಪನಿಗಳಂ ಬೆರಸಿದವೋಲ್ ॥

ಕಾರಕ ದೋಷವೇ ಮೊದಲಾದ ವ್ಯಾಕರಣ ವಿಷಯಕವಾದ ದೋಷಗಳನ್ನೂ ( I. ೧೧೩ ೩ )—

ಕಾರಕದೋಷಮುಂ ವಚನದೋಷಮುಮಾ ಗುರುದೋಷಮುಂ ಲಘೂ
ಚ್ಚಾರಿತ ಶಬ್ದದೋಷಮುಮದಂತೆ ಸಮುಚ್ಚಯ ಜಾತದೋಷಮುಂ ।
ಭೂರಿ ವಿಕಲ್ಪದೋಷಮುಮದಿನ್ನವಧಾರಣ ದೋಷಮುಂ ವಿಶಂ
ಕಾ ರಚಿತೋರುದೋಷಮುಮಸೀ ತೆಱದಿಂ ತಱಸಲ್ಕೆ ಪಂಡಿತರ್ ॥

ಹೇಳಿರುವುದರಿಂದ, ಕನ್ನಡದಲ್ಲಿ ಅದಕ್ಕಿಂತ ಹಿಂದೆ ವ್ಯಾಕರಣ ಗ್ರಂಥಗಳೂ ಇದ್ದುವೆಂದೂ ಅವಲ್ಲಿ ಅರಿಸಮಾಸದೋಷವನ್ನೂ ಕಾರಕಾದಿ ಇತರ ದೋಷಗಳನ್ನೂ ನಿಷೇಧಿಸಿದ್ದರೂ ತನ್ನ ಹಿಂದಣ ಕವಿತೆಗಳಲ್ಲಿ ಆ ದೋಷಗಳನ್ನು ಮಾಡಿದ್ದ ಉದಾಹರಣೆಗಳು ಇದ್ದುವೆಂಬ ಕಾರಣದಿಂದಲೇ ಅಂಥವನ್ನು ಕವಿರಾಜಮಾರ್ಗಕಾರನು ನಿರೂಪಿಸಿರಬೇಕೆಂದೂ ವ್ಯಕ್ತವಾಗುತ್ತದೆ. ಸಾಹಿತ್ಯವಿದ್ದಲ್ಲದೆ ವ್ಯಾಕರಣ ಗ್ರಂಥಗಳು ಹುಟ್ಟವೆಂಬ ಕಾರಣ, ಆ ಮುಂಚೆ ಕನ್ನಡದಲ್ಲಿ ನಿಶ್ಚಯವಾಗಿಯೂ ಸಾಹಿತ್ಯವಿದ್ದಿರಬೇಕು.

ಅಜಿತಪುರಾಣದಿಂದ ( XII. ೪೧ )—

ಅಭಿಮತ ಜೈನೇಂದ್ರವಚೋ
ವಿಭವಂ ಶಬ್ದಾನುಶಾಸನ ಪ್ರಭವ ವಚೋ ।
ವಿಭವಮೊಡನೆಸೆಯೆ ರಂಜಿಪ
ನುಭಯವ್ಯಾಕರಣ ಪಂಡಿತಂ ಕವಿರತ್ನಂ ॥

ರನ್ನನು ಉಭಯವ್ಯಾಕರಣಪಂಡಿತನೆಂದೂ, ಅನಂತನಾಥಪುರಾಣದಿಂದ ( XIV. ೭೭ )—

ರನ್ನಂ ವೈಯಾಕರಣಂ
ಜನ್ನಂ ಮೇಣ್ ಕವಿಗಳೊಳಗೆ ವೈಯಾಕರಣಂ ।

ರನ್ನನೂ ಜನ್ನನೂ ವೈಯಾಕರಣರೆಂದೂ ತಿಳಿಯುತ್ತದೆ. ಕರ್ಣಾಟಕ ಭಾಷಾ ಭೂಷಣದ ನಾಗವರ್ಮನು ಜೈನಪುರಾಣವನ್ನು ಬರೆದಿರಬೇಕೆಂದು ಅನಂತನಾಥ ಪುರಾಣದ ( I. ೩೫ )—

ಎನಗನುಕೂಲಮಕ್ಕೆ ಗುಣವರ್ಮನ ಜಾಣ್ನುಡಿ ಪಂಪನಿಂಪು ಪೊ
ನ್ನನ ಬಗೆ ನಾಗವರ್ಮನ ಬಹುಜ್ಞತೆ ರನ್ನನ ಕಾಂತಿ ನಾಗಚಂ।
ದ್ರನ ರಸಭಾವಮುಗ್ಗಳನ ವಕ್ರತೆ ನೇಮಿಯ ದೇಸೆ ಪುಷ್ಪಬಾ
ಣನ ಮೃದುಬಂಧಮೀ ಕವಿಗಳಲ್ತೆ ಜಿನೇಂದ್ರಪುರಾಣಕರ್ತೃಗಳ್ ॥

ಎಂಬ ಪದ್ಯದಿಂದ ಸಿದ್ಧವಾಗುತ್ತದೆಂದು ನಾನು ಈ ಮುಂಚೆ ಹೇಳಿರುತ್ತೇನೆ.[೧] ಶಬ್ದಮಣಿದರ್ಪಣದ ಕೇಶಿರಾಜನು ಕವಿಯೂ ಪ್ರಾಯಶಃ ನಾಟಕಕಾರನೂ ಎಂದು ಅದರ ಕೊನೆಯಲ್ಲಿ

ದೊರೆವಡೆದ ಚೋಳಪಾಲಕ
ಚರಿತಂ ಶ್ರೀ ಚಿತ್ರಮಾಲೆಯಂತೆ ಸುಭದ್ರಾ ।
ಹರಣಂ ಪ್ರಬೋಧಚಂದ್ರಂ
ಕಿರಾತಮಿವು ಕೇಶಿರಾಜ ಕವಿ ರಚಿತಂಗಳ್ ॥

ಎಂದಿರುವಲ್ಲಿಯ ಸುಭದ್ರಾಹರಣವೂ ಪ್ರಬೋಧಚಂದ್ರವೂ ಪ್ರಾಯಶಃ ನಾಟಕಗಳೂ ಮಿಕ್ಕವು ಕಾವ್ಯಗಳೂ ಆಗಿರಬೇಕೆಂಬ ಸಾಕಷ್ಟು ಬಲವಾದ ಊಹೆಯಿಂದ ವ್ಯಕ್ತವಾಗುತ್ತದೆ. ಹೀಗೆ ನೃಪತುಂಗನಿಂದ ಈಚೆಯ ಕನ್ನಡದಲ್ಲಿ ಹೇಗೋ ಹಾಗೆಯೇ ಆತನ ಹಿಂದೆಯೂ ಕವಿಗಳೇ ವೈಯಾಕರಣಾಗಿದ್ದರೆಂಬುದು ಸಯುಕ್ತಿಕವೆನಿಸುವುದರಿಂದ, ಅವರಿಂದ ರಚಿಸಲ್ಪಟ್ಟ ಸಾಹಿತ್ಯವೂ ಆಗ್ಗೆ ಇದ್ದಿರಬೇಕೆಂದು ಇನ್ನೂ ದೃಢವಾಗುತ್ತದೆ.

೪. ಸಂಸ್ಕೃತ ಛಂದೋಗ್ರಂಥಗಳಲ್ಲಿ ದೊರೆಯುವೆಂದರೆ ಮೇಲೆ ಸಂಸ್ಕೃತ ಸಾಹಿತ್ಯದಲ್ಲಿಯೂ ದೊರೆಯುವನ್ನಬೇಕಾದ ಕೆಲವು ವೃತ್ತಗಳು ಕವಿರಾಜಮಾರ್ಗದಲ್ಲಿವೆ; ಉದಾ—

ನೆರೆದು ಬಂದಪರವರ್ ಸಯಲಾಬಲಯೆಲ್ಲಮಿ
ೞ್ತರದೆ ಕೊಂದಪನಿವಂದಿರನೀಗಳೆ ನಿಕ್ಕುವಂ ।
ಪರಿದು ಬೀೞ್ವವೊಲಿವಂದಿರ ಪಾಡಱವಂದವಮಂ
ತಿರವೆಳೊಡ್ಡಱಯದಂತಿರೆ ನಮ್ಮಪರೆಲ್ಲರಂ ॥ ( I. ೧೩೦ )

---

೧. ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ (ಯುವ ಸಂ।) XX, ಪು. ೧೪೭. ೨. ಕವಿರಾಜಮಾರ್ಗ (ಮದ್ರಾಸು ವಿಶ್ವವಿದ್ಯಾಲಯದ ಪ್ರತಿ), ಪು. 27, 29, 107, 108 (ಅಡಿಬರಹಗಳು)

ಶೂರನೀತನೆ ಪಂಡಿತನೀತನೇ
ಕ್ಷೀರಗೌರ ಯಶೋಧಿಕನೀತನೇ ।
ಧಾರಿಣೀತಳದೊಳ್ ಧ್ರುವಮೆಂಬುದಾ
ಧಾರಮಿಂತವಧಾರಣದೊಳ್ ಗುಣಂ ॥ (I. ೧೪೦)

ಭಾವಿಸಲ್ ಬಗೆದವಂ ಮಿಗೆ ಜಾಣನಶೇಷ ಭಾ
ಷಾವಿಶೇಷ ವಿಷಯಾತಿಶಯಾಮಳ ಕೌಶಳಂ ।
ದೇವತಾ ಗುರುಗುಣೋದಯ ವೃದ್ಧಜನೋಪಸಂ
ಸೇವನಾಪರನಪಾಕೃತ ವೈಕೃತ ಚಾಪಳಂ ॥ (III. ೨೨೧)
ಕುಲಜಾತಿ ದೇಶವಿಶದಂ ವಿನಯೋಪಚಾರಂ
ನಿಲಯೈಕವೃತ್ತಿ.................................. ।
ವಿಲಸದ್ಗುಣಾಗುಣ ವಿವರ್ತಿ ಗುರೂಪದೇಶಾ
ಮಲಿನಾವಬೋಧ ವಿದಿತಾಖಿಳ ಚೋದ್ಯವಿ[ಂ]ದೇಂ ॥ (III. ೨೨೭)

ಪ್ರತ್ಯಕ್ಷತಃ ಸಂಸ್ಕೃತ ಛಂದೋಜಾತಿಯವಾದ ಈ ವೃತ್ತಗಳು ಆ ಹಿಂದಣ ಕನ್ನಡ ಸಾಹಿತ್ಯದಲ್ಲಿ ವಿರಳವೇ ಆದರೂ ಇದ್ದ ಕಾರಣವೇ ಅವನ್ನು ಕಂಡ ಕವಿರಾಜ ಮಾರ್ಗಕಾರನು ಅವನ್ನು ತನ್ನ ಕೃತಿಯಲ್ಲಿ ಬಳಸಿರಬೇಕೆಂಬುದಷ್ಟು ನಿಶ್ಚಯವಷ್ಟೇ. ಇವೂ ಇವುಗಳಂತೆಯೇ ಸಂಸ್ಕೃತ ವೃತ್ತಗಳೇ ಆದರೂ ಸಂಸ್ಕೃತ ಸಾಹಿತ್ಯದಲ್ಲಿ ಕಾಣಬಾರದೆ ಕನ್ನಡದಲ್ಲಿ ತುಂಬ ಪ್ರಯೋಗದಲ್ಲಿರುವ ಉತ್ಪಲಮಾಲೆಯೂ (I. ೧೧೯)—

ಜಾತಿವಿಭಾಗಮುಂ ಬಗೆದು ಪೇಟ್ದ ಬಹುತ್ವಮನೇಕವಾಕ್ಯಸಂ
ಜಾತಿಗುಣಂ ತದೇಕ ವಚನಂಗಳೊಳಂ ದೊರೆವೆತ್ತು ಕೂಡುಗುಂ ।
ಮಾತಿನೊಳೇನೊ ಸಂಖ್ಯೆಗಳೊಳೇಕ ಬಹುತ್ವ ವಿಪರ್ಯಯಕ್ಕಸಂ
ಖ್ಯಾತಗುಣಂ ವಿಕಲ್ಪಮುದು ಕನ್ನಡದೊಳ್ ಗುಣಮುಂ ತಗುಳ್ಗುಗುಂ ॥

ಚಂಪಕಮಾಲೆಯೂ (I. ೧೨೩)—

ಗುಣಯುತನಪ್ಪನಂ ಸುಭಟನಪ್ಪನನಾಯುಧಯುಕ್ತನಪ್ಪನಂ
ಪ್ರಣುತ ಸಮಸ್ತ ವೈರಿಗಣನಪ್ಪನನುಜ್ಜ್ವಲಕೀರ್ತಿಯಪ್ಪನಂ ।
ಗಣಿಪಮನೇನುಮುಂ ಬಗೆಯದಾಗದುಮಂತೆ ಪರೋಪಕಾರ ಕಾ
ರಣಪರನಪ್ಪನಂ ಮನದೆ ಮೆಚ್ಚದರಾರಭಿಮಾನಿಯಪ್ಪನಂ ॥

ಮತ್ತೇಭವಿಕ್ರೀಡಿತವೂ (I. ೧೫೦)—

ಸಕಳಾಳಾಪ ಕಳಾಕಳಾಪ ಕಥಿತವ್ಯಾವೃತ್ತಿಯೊಳ್ ಕೂಡಿ ಚಿ
ತ್ರಕರಂಬೋಲ್ ಪರಭಾಗಭಾವ ವಿಲಸದ್ವರ್ಣ ಕ್ರಮಾವೃತ್ತಿಯಂ ।
ಪ್ರಕಟಂ ಮಾಡಿರೆ ಪೇಟ್ದ ಚಿತ್ರಕೃತಿಯಂ ವ್ಯಾವರ್ಣಿಸುತ್ತುಂ ಕವಿ
ಪ್ರಕರಂ ಶ್ರೀ ವಿಜಯಪ್ರಭೂತಮನಿದಂ ಕೈಕೊಳ್ವುದೀ ಮಾಱ್ಕೆಯಿಂ ॥

ಕವಿರಾಜಮಾರ್ಗದಲ್ಲಿ ಇವೆ; ಕವಿರಾಜಮಾರ್ಗಕ್ಕಿಂತ ಈಚೆಯ ೧೦೦ ವರ್ಷಗಳೊಳಗಣ ಪಂಪಭಾರತದಲ್ಲಿ ಸಂಸ್ಕೃತದಲ್ಲಿ ರೂಢಿಯಾಗಿರುವ ಸ್ರಗ್ಧರೆ ೭, ಶಾರ್ದೂಲವಿಕ್ರೀಡಿತ ೧೭ ಇರುವಲ್ಲಿ ಸಂಸ್ಕೃತ ಸಾಹಿತ್ಯದಲ್ಲಿ ದೊರೆಯದ ಮಹಾಸ್ರಗ್ಧರೆ ೩೭, ಮತ್ತೇಭವಿಕ್ರೀಡಿತ ೬೦೪, ಉತ್ಪಲಮಾಲೆ ೧೪೦, ಚಂಪಕಮಾಲೆ ೪೦೯, ಹಾಗೂ ಪೊನ್ನನ ಶಾಂತಿಪುರಾಣದಲ್ಲಿ ಸ್ರಗ್ಧರೆ ೭, ಶಾರ್ದೂಲವಿಕ್ರೀಡಿತ ೧೦ ಇರುವಲ್ಲಿ ಮಹಾಸ್ರಗ್ಧರೆ ೨೧, ಮತ್ತೇಭವಿಕ್ರೀಡಿತ ೧೪೭, ಉತ್ಪಲಮಾಲೆ ೧೦೭, ಚಂಪಕಮಾಲೆ ೧೨೮ ಇವೆ. ಅತಏವ ಸಂಸ್ಕೃತ ವೃತ್ತಗಳನ್ನು ಕನ್ನಡದಲ್ಲಿ ಎರವಲು ಕೊಳ್ಳುವಲ್ಲಿ ಸಂಸ್ಕೃತದಲ್ಲಿ ತುಂಬ ಬಳಕೆಯಲ್ಲಿ ಉಳ್ಳವನ್ನೇ ಮೊತ್ತಮೊದಲು ಎರಕೊಂಡು ಬಳಸಿದ ಸಾಕಷ್ಟು ಕಾಲಾನಂತರ ತಾನೆ ಸಂಸ್ಕೃತ ವೃತ್ತಗಳೇ ಆದರೂ ಸಂಸ್ಕೃತದಲ್ಲಿ ವಾಡಿಕೆ ಇಲ್ಲದವನ್ನು ಕನ್ನಡದಲ್ಲಿ ಪ್ರಯೋಗಿಸಿರಬೇಕು ಎಂದು ಸ್ವಯಂವ್ಯಕ್ತವಿರುವ ಕಾರಣ, ಸಂಸ್ಕೃತದಲ್ಲಿ ವಾಡಿಕೆಯಾಗಿರುವ ವೃತ್ತಗಳನ್ನೇ ಕನ್ನಡ ಸಾಹಿತ್ಯದಲ್ಲಿ ಬಳಸಿದ ಯುಗವು ಕವಿರಾಜಮಾರ್ಗದ ಕಾಲಕ್ಕೆ ತಕ್ಕಷ್ಟು ಹಿಂದೆಯೇ ಮುಗಿದು, ಸಂಸ್ಕೃತ ಸಾಹಿತ್ಯದಲ್ಲಿ ಬಳಸದ ಸಂಸ್ಕೃತ ವೃತ್ತಗಳನ್ನು ಕನ್ನಡದಲ್ಲಿ ಬಳಸುತ್ತಿರುವ ಆ ಮಾರನೆಯ ಯುಗವು ಕನ್ನಡದಲ್ಲಿ ಆಗ್ಗೆ ನಿಯತವಾಗಿ ರೂಢಿಸಿರಬೇಕು ಎಂದು ಸಿದ್ಧವಾಗುವುದರಿಂದ, ಕವಿರಾಜಮಾರ್ಗಕ್ಕಿಂತ ಕೆಲವು ಶತಮಾನಕ್ಕೆ ಹಿಂದಿನಿಂದಲೇ ಕನ್ನಡದಲ್ಲಿ ಸಾಹಿತ್ಯವಿದ್ದಿರಬೇಕು.

೫. ಕವಿರಾಜಮಾರ್ಗದಲ್ಲಿ ( I. ೨೬ )

ಸದಮಳ ಸಮ ಸಂಸ್ಕೃತ ಕಾ
ವ್ಯದ ಹೃದಯಂ ಹರ್ಷಚರಿತ ಕಾದಂಬರಿಗಳ್ ।
ಮೊದಲಾಗಿ ನೆಗಟ್ದು ವಿದಱೊಳ್
ಸದಳಂಕಾರಂಗಳಖಿಳ ಕವಿವಿದಿತಂಗಳ್ ॥

ಎಂದ ಬಳಿಕಲೇ ( I. ೨೭ )

ಮಿಗೆ ಕನ್ನಡ ಗಬ್ಬಂಗಳೊ
ಳಗಣಿತ ಗುಣ ಗದ್ಯಪದ್ಯ ಸಮ್ಮಿಶ್ರಿತಮಂ ।
ನಿಗದಿಸುವರ್ ಗದ್ಯಕಥಾ
ಪ್ರಗೀತಿಯಿಂ ತಚ್ಚಿರಂತನಾಚಾರ್ಯರ್ಕಳ್ ॥

ಎಂದಿರುವಲ್ಲಿ ಹೇಳಿರುವ ಗದ್ಯಪದ್ಯ ಸಮ್ಮಿಶ್ರಿತವಾದ ಕನ್ನಡ ಕಾವ್ಯಗಳಾದರೊ ಅವನ್ನು ಗದ್ಯಕಥೆಗಳೆಂದಿರುವುದರಿಂದಲೆ ಅವು ಆ ಬಳಿಕಣ ಪಂಪಭಾರತವೇ ಮೊದಲಾದ ಪದ್ಯಬಾಹುಳ್ಯ ಉಳ್ಳ ಕನ್ನಡ ಚಂಪೂಕಾವ್ಯಗಳಂಥವಲ್ಲ, ಅವಕ್ಕೆ ಮಾದರಿಯಾಗಿ ಹೇಳಿರುವ ಬಾಣನ ಸಂಸ್ಕೃತ ಹರ್ಷಚರಿತದಂತೆ ಕಾದಂಬರಿಯಂತೆ ಹಾಗೂ ಈ ಮುಂದೆ ಕಾಣಲಿಕ್ಕಿರುವ ಕನ್ನಡ ( ೧೯ ಕಥೆಗಳುಳ್ಳ ) ವೊಡ್ಡಾರಾಧಣ

ದಂತೆ, ಅಲ್ಲಲ್ಲಿ ಕೆಲಕೆಲವಷ್ಟೇ ಪದ್ಯಗಳನ್ನು ಚಿಮುಕಿಸಿರುವ ಗದ್ಯಭೂಯಿಷ್ಠವಾದ, (ಸಂಸ್ಕೃತ ಕಾದಂಬರಿಯಂತೆ) ಉದ್ದುದ್ದವಾದ ಒಂದೊಂದೇ ಕಥೆಯುಳ್ಳವೊ ಇಲ್ಲವೆ (ವೊಡ್ಡಾರಾಧಣದಂತೆ) ಹಲವು ಸಣ್ಣ ಕತೆಗಳುಳ್ಳವೊ, ಗದ್ಯಕಾವ್ಯಗಳಾಗಿರಬೇಕು.

ಆ ಮೇಲಣ (I. ೩೧)

ಪ್ರಣುತ ಗುಣಸೂರಿ ನಾರಾ
ಯಣ ಭಾರವಿ ಕಾಳಿದಾಸ ಮಾಘಾದಿಗಳೀ ।
ಗಣದದೊಳೆ ಮಹಾಕಾವ್ಯ
ಪ್ರಣಯಮನಾಗಿಸಿದರಮಳ ಕವಿವೃಷಭರ್ಕಳ್ ॥

ಎಂದ ಬಳಿಕಣ (I. ೩೨)

ನುಡಿಗೆಲ್ಲಂ ಸಲ್ಲದ ಕ
ನ್ನಡದೊಳ್ ಚತ್ತಾಣಮುಂ ಬೆದಂಡೆಯುಮೆಂದೀ ।
ಗಡಿನ ನೆಗಟ್ತೆಯ ಕಬ್ಬದೊ
ಳೊಡಂಬಡಂ ಮಾಡಿದರ್ ಪುರಾತನ ಕವಿಗಳ್ ॥

ಎಂಬ ಪದ್ಯದಿಂದ ಚತ್ತಾಣವೂ ಬೆದಂಡೆಯೂ ಎಂಬ ಇಬ್ಬಗೆಯ ಕನ್ನಡ ಕಾವ್ಯಗಳನ್ನು 'ಪುರಾತನ' ಎಂಬುದರಿಂದ ನೃಪತುಂಗನ ಹಿಂದಿನದೇ ತಲೆಮಾರಿನವರಲ್ಲ, ಅದಕ್ಕಿಂತಲೂ ಸಾಕಷ್ಟು ಮುಂಚಿನ ಕನ್ನಡ ಕವಿಗಳು ರಚಿಸಿದರೆಂದೂ ಅಂಥವು 'ಈಗಡಿನ ನೆಗಟ್ತೆಯವು' ಅಂದರೆ ನೃಪತುಂಗನ ಕಾಲದಲ್ಲಿಯೂ ಪ್ರಸಿದ್ಧವಾಗಿದ್ದುವೆಂದೂ ತಿಳಿಯುವುದರಿಂದ, ಈಗಣ ಮಟ್ಟಿಗೆ ಆ ಹೆಸರುಗಳು ಪ್ರಾಯಶಃ ಕವಿರಾಜಮಾರ್ಗದಲ್ಲಿ ಮಾತ್ರ ಉಳಿದಿವೆಯಾದರೂ ಆ ಮುಂಚೆ ಆ ವಿಧಗಳ ಸಾಕಷ್ಟು ಕನ್ನಡ ಕಾವ್ಯಗಳು ಇದ್ದಿರಬೇಕು. ಬೆದಂಡೆಯಲ್ಲಾಗಲಿ (I. ೩೪)—

ಕಂದಮುಮಮಳಿನ ವೃತ್ತಮು
ಮೊಂದೊಂದೆಡೆಗೊಂದು ಜಾತಿ ಜಾಣೆಸೆಯೆ ಬೆಡಂ ।
ಗೊಂದಿವಱಿನೊಳಮರೆ ಪೇೞಲ್
ಸುಂದರರೂಪಿಂ ಬೆದಂಡೆ ಗಬ್ಬಮದಕ್ಕುಂ ॥

ಚತ್ತಾಣದಲ್ಲಾಗಲಿ (I. ೩೫)—

ಕಂದಂಗಳ್ ಪಲವಾಗಿರೆ
ಸುಂದರ ವೃತ್ತಂಗಳಕ್ಕರಂ ಚೌಪದಿ ಮು ।
ತ್ತಂ ದಲ್ ಗೀತಿಗೆ ತಿವಿದಿಗ
ಳಂದಂ ಬೆತ್ತೆಸೆಯೆ ಪೇೞ್ದುದದು ಚತ್ತಾಣಂ ॥

ವಿವಿಧ ಪದ್ಯಜಾತಿಯನ್ನೇ ವಿನಾ ಗದ್ಯವನ್ನು ಹೇಳಿಲ್ಲದುದರಿಂದ, ಅವು ಅವಕ್ಕೆ ಮಾದರಿಯಾಗಿ ಹೇಳಿರುವ (I. ೩೧) ಕಾಳಿದಾಸಾದಿಗಳ ಸಂಸ್ಕೃತ ಕಾವ್ಯಗಳಂತೆ

ಆದ್ಯಂತ ಪದ್ಯಬದ್ಧವಾಗಿರಬೇಕಲ್ಲದೆ ಯಥೇಷ್ಟವಾದ ಕಂದಗಳೂ ಸುಂದರವಾದ ವೃತ್ತಗಳೂ ಇದ್ದರೂ ಅದರೊಂದಿಗೆ ಬೇಕಾದಷ್ಟು ಗದ್ಯವೂ ಇರುವ ಪಂಪ-ಪೊನ್ನಾದಿ ಗಳಕಾವ್ಯಗಳಂತೆ ಗದ್ಯಪದ್ಯಾತ್ಮಕವಾದ ಚಂಪೂ ಕಾವ್ಯಗಳಲ್ಲ.

ಹೀಗೆ ನೃಪತುಂಗನ ಹಿಂದಣಿಂದಲೆ ಅಲಂಕಾರ ಗ್ರಂಥಗಳೂ ವ್ಯಾಕರಣ ಗ್ರಂಥಗಳೂ ಬೆದಂಡೆ-ಚತ್ತಾಣಗಳೆಂಬ ಕಾವ್ಯ ವಿಧಾನಗಳೂ ಗದ್ಯ-ಪದ್ಯ ಸಮ್ಮಿಶ್ರಿತ ವಾದ ಗದ್ಯ ಕಥೆಗಳೂ ಆತನು ಅಲ್ಲಲ್ಲಿ ಉದಾಹರಿಸಿರುವ ರಾಮಾಯಣದಂಥಾ ಕಾವ್ಯ ಗ್ರಂಥಗಳೂ ಇದ್ದುವೆಂದು ವ್ಯಕ್ತವಾಗುವುದರಿಂದ, ಆತನಿಂದ ಕಡಿಮೇ ಅಂದರೆ ೨೦೦ ವರ್ಷಗಳಾದರೂ ಮುಂಚಿನಿಂದ ಕನ್ನಡದಲ್ಲಿ ಉತ್ಕೃಷ್ಟವಾದ ಬಹುಮುಖ ವಾದ ಸಾಹಿತ್ಯವಿದ್ದಿರಬೇಕು.

## II

ಬಾದಾಮಿಯ ಚಳುಕ್ಯರಲ್ಲಿ ಇಬ್ಬರಿಗಿದ್ದ ಪುಲಿಕೇಶಿ ಎಂಬ ಹೆಸರು ಪುಲಿಕೇಶಿ ಎಂದು ಮಾತ್ರವಲ್ಲ, ಪೊಲೆಕೇಶಿ – ಪೊಲಿಕೇಶಿ – ಪೊಲಕೇಶಿ – ಪುಲಕೇಶಿ – ಪುಳಕೇಶಿ ಎಂಬ ರೂಪಗಳಿಂದಲೂ ಅವರ ಶಾಸನಗಳಲ್ಲಿ ದೊರೆಯುತ್ತದೆ. ಆದರೆ ಅವರಿಂದಲೇ ತಮ್ಮ ಪೀಳಿಗೆಯನ್ನು ಮುಂದೊಯ್ದಿರುವ ಪಡುವಣ ಚಾಳುಕ್ಯರ ಶಾಸನಗಳಲ್ಲಿ೧ ಮೊತ್ತಮೊದಲಲ್ಲಿ ವಂಶಕಥನವಿರುವ ಕೆಲವಲ್ಲಾದರೂ ಆ ಹೆಸರು ಪುಲಕೇಶಿ-ಪುಳಕೇಶಿ ಎಂದು ತಾನೆ ಇದೆಯಲ್ಲದೆ, ಪೊಲೆಕೇಶಿ-ಪೊಲಕೇಶಿ-ಪುಲಿಕೇಶಿ ಎಂದಿಲ್ಲ. ಪಡುವಣ ಚಾಳುಕ್ಯ ಇಱಿವ ಬೆಡಂಗ ಸತ್ಯಾಶ್ರಯನ ಆಸ್ಥಾನದಲ್ಲಿ ರಚಿತವಾದ ರನ್ನನ ಗದಾಯುದ್ಧದಲ್ಲಿಯೂ (II. ೭ ಗದ್ಯ) 'ಪುಲಕೇಶಿ'ದೇವ ಎಂದಿದೆ. ಬಾದಾಮಿಯ ಚಳುಕ್ಯರನ್ನು ಉಲ್ಲೇಖಿಸಿರುವ ಪಡುವಣ ಚಾಳುಕ್ಯರ ಶಾಸನಗಳಲ್ಲಿ ವಂಶನಿರೂಪ ಣವು ಕನ್ನಡದಲ್ಲಿಲ್ಲ, ಸಂಸ್ಕೃತದಲ್ಲಿದೆ. ಬಾದಾಮಿಯವರ ಶಾಸನಗಳು ಹೆಚ್ಚಾಗಿ ಸಂಸ್ಕೃತದಲ್ಲಿಯೇ ಇವೆ; ಕೆಲವಲ್ಲಿ ಇರುವ ಕನ್ನಡ ಅಂಶವಾದರೂ ಅವಲ್ಲಿ ಹೇಳಿದ ದತ್ತಿಯ ಮೇರೆಗಳೇ ಮೊದಲಾದವನ್ನು ಕುರಿತ ಉತ್ತರ ಭಾಗದಲ್ಲಿದೆಯಲ್ಲದೆ, ವಂಶ ಪ್ರಸ್ತಾವ ಉಳ್ಳ ಪೂರ್ವ ಭಾಗದಲ್ಲಿಲ್ಲ. ಇವೆರಡೂ ಒಗೆಯವರ ಶಾಸನಗಳಲ್ಲಿ I ಪುಲಿಕೇಶಿಯನ್ನೇ ಪುಲಿಕೇಶಿ ವಲ್ಲಭನೆಂದೂ II ಪುಲಿಕೇಶಿಯನ್ನು ಹೆಚ್ಚಾಗಿ ಸತ್ಯಾಶ್ರಯ ಪೃಥ್ವೀ (ಪೃಥಿವೀ) ವಲ್ಲಭನೆಂದೂ ಹೇಳಿದೆ. ರನ್ನನ ಗದಾಯುದ್ಧ ದಲ್ಲಿಯೂ (I. ೭ ಗದ್ಯ) I ಪುಲಿಕೇಶಿಯನ್ನು ಪುಲಕೇಶಿದೇವನೆಂದೂ II ಪುಲಿ ಕೇಶಿಯನ್ನು ಸತ್ಯಾಶ್ರಯದೇವನೆಂದೂ ಹೇಳಿದೆ. II ಪುಲಿಕೇಶಿಯದೇ ಶಾ. ಶ. ೫೩೫ ಭಾದ್ರಪದ ಬಹುಳ ಅಮಾವಾಸ್ಯೆ ಸೂರ್ಯಗ್ರಹಣದಂದಿನ, ಅಂದರೆ ಶಾ. ಶ.

---

೧. Epigraphia Carnatica (EC) XI, ದಾವಣಗೆರೆ 1. ಇತ್ಯಾದಿ.

೫೩೫ ನೆಯ ಕ್ರಿ. ಶ. 613 ರಲ್ಲಿ ಅಮಾಂತ ಮಾಸಗಣನದ ರೀತ್ಯಾ ಭಾದ್ರಪದ ಬಹುಳ ೩೦ ಯಂದು ಸೂರ್ಯಗ್ರಹಣವಿದ್ದಿಲ್ಲದುದರಿಂದ ಪೂರ್ಣಿಮಾಂತ ಗಣನದ ಪ್ರಕಾರ ಭಾದ್ರಪದ ಬ| ಅಮಾವಾಸ್ಯೆಯಾಗುವ ಅಮಾಂತ ಶ್ರಾವಣ ಬ| ಅಮಾವಾಸ್ಯೆಯಂದು ಭರತಖಂಡದಲ್ಲಿ ಗೋಚರವಾದ ಪೂರ್ಣ ಸೂರ್ಯಗ್ರಹಣವಿದ್ದದಿನ ಕ್ರಿ. ಶ. 613 ಜುಲಾಯಿ 23 ನೆಯ ತಾರೀಕಿನ ಹೈದರಾಬಾದು ತಾಮ್ರಪಟ್ಟದಲ್ಲಿಯೂ[೧] ಕ್ರಿ. ಶ 634 ರ ಐಹೊಳೆಯ ಶಿಲಾಲೇಖದಲ್ಲಿಯೂ[೨] I ಪುಲಿಕೇಶಿಯನ್ನು ಮೊದಲನೆಯದರಲ್ಲಿ ( ಬಂ. ೫ – ೬ ) ಸತ್ಯಾಶ್ರಯ ಶ್ರೀ ಪೊಲಿಕೇಶಿವಲ್ಲಭನೆಂದೂ ಮತ್ತಿನದರಲ್ಲಿ (ಪದ್ಯ ೭) ಪೊಲೆಕೇಶಿ (ಶ್ರೀ) ವಲ್ಲಭನೆಂದೂ II ಪುಲಿಕೇಶಿಯನ್ನು ಮೊದಲನೆಯದರಲ್ಲಿ ( ಬಂ. ೮ – ೯ ) ಸತ್ಯಾಶ್ರಯ ಪೃಥ್ವೀವಲ್ಲಭನೆಂದೂ ಮತ್ತಿನದರಲ್ಲಿ (ಪದ್ಯ ೧ ; ೩೫) ಪುಲಿಕೇಶಿ ಎಂದೂ ಸತ್ಯಾಶ್ರಯನೆಂದೂ ಹೇಳಿದೆ. ಆದಕಾರಣ ನಾಗವರ್ಮನ ಕಾವ್ಯಾವಲೋಕನದಲ್ಲಿ ( ಪದ್ಯ 488 ) ಲಕ್ಷ್ಯವಾಗಿ ಕೊಟ್ಟಿರುವ

ವಿಕ್ರಮವಹ್ನಿ ಮುನ್ನಳುರ್ದುಕೊಂಡುದು ತನ್ಮನಿಯಂ ಗಡಶ್ವನೋ
ಧಕ್ರತು ಧೂಮವಾದುದು ಗಡಂ ಬಜಿಯಂ ಶಿಖಿ ಧೂಮಯೋನಿಯಿಂ ।
ಬೀ ಕ್ರಮಮೆಂತು ಪೇಱುಮೆನೆ ವಿಕ್ರಮ ಯಜ್ಞವಿಧಾನಮಂ ಧರಾ
ಚಕ್ರಮೆ ಮೆಚ್ಚಿ ಬಣ್ಣಿಸೆ ಜಸಂಬಡೆದಂ ಪೊಲಕೇಶಿವಲ್ಲಭಂ ।

ಎಂಬೀ ಉತ್ಪಲಮಾಲೆ ಶಾಸನಪದ್ಯವೂ ಅಲ್ಲ, ಪಡುವಣ ಚಾಳುಕ್ಯರ ಕಾಲದ ಇಲ್ಲವೆ ಅದರಿಂದ ಈಚೆಯ ಗ್ರಂಥಸ್ಥ ಪದ್ಯವೂ ಅಲ್ಲ ಎಂದು ನಿಶ್ಚಯವಾಗುವುದರಿಂದ, ಪಂಪಭಾರತದಲ್ಲಿ ಪಂಪನ ಪೋಷಕನಾದ II ಅರಿಕೇಸರಿಯ ವಂಶವರ್ಣನೆಯಲ್ಲಿಯ ( I. ೧೫ – ೩೦ ) ಪದ್ಯಗಳಂತೆಯೇ ಇರುವ ಈ ಪದ್ಯವು ಐಹೊಳೆಯ ಶಾಸನವೇ ( ಪದ್ಯ ೮ ) ಮೊದಲಾದ ಅನೇಕ ಚಾಳುಕ್ಯ ಶಾಸನಗಳಿಂದ ಹಯಮೇಧಯಾಜಿ ಎಂದೂ ಗದಾಯುದ್ಧದಿಂದ ( I. ೭ ) ಅಶ್ವಮೇಧಯಜ್ಞ ದೀಕ್ಷಿತನೆಂದೂ ಕ್ರಿ. ಶ. 602 ನೆಯ ಮಹಾಕೂಟದ ಸ್ತಂಭಲೇಖದಿಂದ[೩] ಅಗ್ನಿಷ್ಟೋಮ, ಅಗ್ನಿಚಯನ, ವಾಜಪೇಯ, ಬಹುಸುವರ್ಣ, ಪೌಂಡರೀಕ ಹಾಗೂ ಅಶ್ವಮೇಧ ಯಾಗಗಳನ್ನು ಗೆಯ್ದಾತನೆಂದೂ ತಿಳಿವ I ಪುಲಿಕೇಶಿಯ ಆಳಿಕೆಯಲ್ಲಿಯೇ ಅಂದರೆ ಕ್ರಿ. ಶ. 6 ನೆಯ ಶತಮಾನದ ಉತ್ತರಾರ್ಧದಲ್ಲಿ, ಅಲ್ಲವಾದರೆ ಅಲ್ಲಿಂದ ಬಳಿಕ ಆ ಬಾದಾಮಿಯವರ ಕೊನೆಯ ಅರಸನಾದ II ಕೀರ್ತಿವರ್ಮನೊಂದಿಗೆ ( ಕ್ರಿ. ಶ. 743 - 753 ? ) ಆ ಚಳುಕ್ಯ ವಂಶವು ವಿಧ್ವಸ್ತವಾದ ಕ್ರಿ. ಶ. 753 ರೊಳ

೧. Indian Antiquary ( IA) VI, ಪು. 73 – 74, ೨. IA. VIII, ಪು. 237
೩. IA. XIX, ಪು. 7; Fleet's Kanarese Dynasties ( FKD ), ಪು. 344.

ಗಾದರೂ ರಚಿತವಾದ ಯಾವೊಂದು ಕನ್ನಡ ಕಾವ್ಯದಲ್ಲಿಯ ಪದ್ಯವಾಗಿರಬೇಕು. ಇಷ್ಟು ಮೇಲಾದ ಪದ್ಯವು ಕ್ರಿ. ಶ. 8ನೆಯ ಶತಮಾನದೊಳಗಣ ಕನ್ನಡ ಕಾವ್ಯದಲ್ಲಿರಬೇಕಾದರೆ, ಅದಕ್ಕೆ ಕೆಲವು ಶತಕಗಳ ಮುಂಚಿನಿಂದಲೇ ಉತ್ತಮವಾದ ಕನ್ನಡ ಸಾಹಿತ್ಯವೂ ಇದ್ದಿರಬೇಕು.

ಈ ಪದ್ಯವು ಉತ್ಪಲಮಾಲೆಯಷ್ಟೇ. ಇದು ಕನ್ನಡ ಸಾಹಿತ್ಯದಲ್ಲಿ ತುಂಬ ಬಳಕೆಯಲ್ಲಿದೆಯಾದರೂ, ಮೇಲೆ ಕಂಡಿರುವಂತೆ ಸಂಸ್ಕೃತ ಸಾಹಿತ್ಯದಲ್ಲಿ ವಾಡಿಕೆಯೇ ಇಲ್ಲ. ಇದರಂತೆಯೇ ಸಂಸ್ಕೃತ ವೃತ್ತಗಳೇ ಆದರೂ ಸಂಸ್ಕೃತ ಸಾಹಿತ್ಯದಲ್ಲಿ ಕಾಣಬಾರದೆ ಕನ್ನಡದಲ್ಲಿ ಬಹಳ ಹಿಂದಣಿಂದಲೆ ಸಲುವಳಿಯಾಗಿರುವ ಮತ್ತೇಭವಿಕ್ರೀಡಿತವೂ—

ವರದಾ ತುಂಗತರಂಗ ರಂಗ ವಿಲಸದ್ಧಂಸಾವಲೀ ಮೇಖಲಾಂ
ವನವಾಸೀಮುವಮೃದ್ಗತಃ ಸುರಪುರಪ್ರಸ್ಪರ್ಧಿನೀಂ ಸಂಪದಾ ।
ಮಹತಾ ಯಸ್ಯ ಬಲಾರ್ಣವೇನ ಪರಿತಃ ಸಂಛಾದಿತೋರ್ವೀತಲಂ
ಸ್ಥಲದುರ್ಗಂ ಜಲದುರ್ಗತಾಮಿವ ಗತಂ ತತ್ತತ್ ಕ್ಷಣೇ ಪಶ್ಯತಾಮ್ ॥ ೧೮ ॥

ಸಂಸ್ಕೃತ ಛಂದಃಶಾಸ್ತ್ರದಲ್ಲಿ ಸ್ಕಂಧಕವೆಂದಿರುವ ಕಂದಪದ್ಯವೂ[೧]—

ಯೇನಾಯೋಜಿ ನವೇಶ್ಮ
ಸ್ಥಿರಮರ್ಥವಿಧೌ ವಿವೇಕಿನಾ ಜಿನವೇಶ್ಮ ।
ಸ ವಿಜಯತಾಂ ರವಿಕೀರ್ತಿಃ
ಕವಿತಾಶ್ರಿತ ಕಾಲಿದಾಸ ಭಾರವಿ ಕೀರ್ತಿಃ ॥ ೩೭ ॥

ಆದ್ಯಂತವಾಗಿ ಸಂಸ್ಕೃತದಲ್ಲಿರುವ II ಪುಲಕೇಶಿಯ ಕ್ರಿ. ಶ. 634 ರ ಐಹೊಳೆಯ ಶಾಸನದಲ್ಲಿರುವುದರಿಂದ, ಆ ಶಾಸನದ ರಚಕನಾದ ರವಿಕೀರ್ತಿ ಸ್ವಯಂ ಕನ್ನಡ

---

೧. ಛಂದೋಂಬುಧಿಯ ನಾಗವರ್ಮನು ಕಂದವನ್ನು ಆರ್ಯೆಯೊಂದಿಗೆ ಸಂಸ್ಕೃತ ಛಂದೋಜಾತಿಯಲ್ಲಿ ತಾನೆ ಹೇಳಿರುವನಲ್ಲದೆ ಕರ್ಣಾಟಕ ವಿಷಯ ಜಾತಿಯಲ್ಲಿ ಅಲ್ಲ. ಅದು ಸಂಸ್ಕೃತ ಛಂದಸ್ಸು ಅಲ್ಲದಿದ್ದರೆ, ಐಹೊಳೆಯ ಶಾಸನದಲ್ಲಿ ಸಂಸ್ಕೃತ ಪದ್ಯವೆಂದಿಗೂ ಕಂದದಲ್ಲಿ ರಚಿಸಲ್ಪಡುತ್ತಿದ್ದಿಲ್ಲ, ಅಗ್ಗಳನ ಚಂದ್ರಪ್ರಭ ಪುರಾಣದಲ್ಲಿ (XII. ೧೫೬) 'ತ್ರಿಭುವನ ಚೂಡಾಮಣಯಃ । ಕಾಳೋರಗ ವಿಷಮ ಗರಳ ವಿಷಹರ ಮಣಯಃ ॥ ನತಜನ ಚಿಂತಾಮಣಯೋ । ಮಮ ಹೃದಿ ನಿವಸಂತು ಜೈನ ಪದನಖ ಮಣಯಃ ॥' ಎಂಬ ಸಂಸ್ಕೃತ ಕಂದವೂ ಸರ್ವಥಾ ಇರುತ್ತಿದ್ದಿಲ್ಲ. ಈ ಸಂದರ್ಭದಲ್ಲಿ ಶ್ರೀ ಮೈಥಿಲೀಶರಣ ಗುಪ್ತರ ಹಿಂದೀ ಭಾಷೆಯ 'ಸಾಕೇತ' ಎಂಬ ಇತ್ತೀಚಿಯ ಮಹಾಕಾವ್ಯದ ನವಮ ಸರ್ಗದಲ್ಲಿ ಸುಮಾರು ೧೪ ಅಚ್ಚ ಕಂದಪದ್ಯಗಳಿವೆ ಎಂಬುದನ್ನು ಹೇಳಬಹುದು; ಉದಾ.—

ಸ್ವಾಮಿಸಹಿತ ಸೀತಾನೇ
ನಂದನ ಮಾನಾ ಸಘನ ಗಹನಕಾನನ ಭೀ ।
ವನ ಉರ್ಮಿಲಾ ಬಧೂನೇ ।
ಕಿಯಾ ಉನ್ಹೀಂಕೇ ಹಿತಾರ್ಥ ನಿಜ ಉಪವನ ಭೀ ॥

ಕವಿಯೂ ಆಗಿದ್ದು ಕನ್ನಡ ಕಾವ್ಯರಚನೆಯಲ್ಲಿ ತನಗೆ ತುಂಬ ಬಳಕೆಯುಳ್ಳ ಈ ಛಂದೋಜಾತಿಗಳು ಸಂಸ್ಕೃತದಲ್ಲಿ ಪ್ರಯೋಗಿಸಲ್ಪಡವಾದರೂ ಕನ್ನಡದಲ್ಲಿ ತನಗಿರುವ ಅಭ್ಯಾಸ ಬಲದಿಂದ ತಾನೆ ಇವನ್ನು ಆ ಸಂಸ್ಕೃತ ಶಾಸನಕಾವ್ಯದಲ್ಲಿ ರಚಿಸಿಟ್ಟಿರಬೇಕು. ಹಾಗಾದರೆ ಈ ರವಿಕೀರ್ತಿಗಿಂತ ತಕ್ಕಷ್ಟು ಹಿಂದಿನಿಂದಲೇ ಕನ್ನಡದಲ್ಲಿ ಸಂಸ್ಕೃತ ಛಂದೋಬದ್ಧವಾದ ಕಾವ್ಯಸಾಹಿತ್ಯವಿದ್ದಿರಬೇಕು. ಪ್ರಾಯಶಃ ಈ ರವಿಕೀರ್ತಿಯೇ ಕಾವ್ಯಾವಲೋಕನದ ಈ ಮೇಲಣ ಉತ್ಪಲಮಾಲೆಯುಳ್ಳ ಕಾವ್ಯದ ರಚಕನಾಗಿರಬಹುದೇ?

## III

ಬೃಹದಾರಾಧನ ಎಂಬುದರ ಪ್ರಾಕೃತರೂಪವಾದ ವೊಡ್ಡಾರಾಧಣ ಎಂಬ ಹೆಸರುಳ್ಳ ಕನ್ನಡ ಜೈನ ಗದ್ಯ ಗ್ರಂಥದ ೧೯ ಕಥೆಗಳಲ್ಲಿಯ ೩ ಕಥೆಗಳು ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆಯಲ್ಲಿ (ಪ್ರಜಾಪತಿ ಸಂ| XVI, ಪು. ೧೭೩-೨೩೧) ಪ್ರಕಟವಾಗಿವೆ. ಈ ಕಥೆಗಳಿಗೆ ಕವಿರಾಜಮಾರ್ಗದಲ್ಲಿ (I. ೨೭)

> ಮಿಗೆ ಕನ್ನಡ ಗಬ್ಬಂಗಳೊ
> ಳಗಣಿತ ಗುಣ ಗದ್ಯಪದ್ಯ ಸಮ್ಮಿಶ್ರಿತಮುಂ ।
> ನಿಗದಿಸುವರ್ ಗದ್ಯಕಥಾ
> ಪ್ರಗೀತಿಯುಂ ತಚ್ಚಿರಂತನಾಚಾರ್ಯರ್ಕಳ್ ॥

ಎಂದಿರುವ ಗದ್ಯಕಥೆಗಳ ಲಕ್ಷಣಗಳು ನೇರಾಗಿ ಒಪ್ಪುವುದರಿಂದ, ನೃಪತುಂಗನು ಕಂಡಿರುವ ಗದ್ಯಕಥೆಗಳು ಇಂಥವೇ ಆಗಿರಬೇಕೆಂದು ನಿಶ್ಚಯಿಸಬಹುದು.

ಬೃಹದಾರಾಧನ ಎನ್ನದೆ ವೊಡ್ಡಾರಾಧಣ ಎಂದಿರುವ ಮಾತ್ರದಿಂದಲೇ ಮೂಲತಃ ಸಂಸ್ಕೃತವಲ್ಲವೆಂದು ಪ್ರತ್ಯಕ್ಷವಿರುವ ಈ ಗ್ರಂಥದ ಸದ್ಯಕ್ಕೆ ಪ್ರಕಟವಾದ ಈ ಮೂರು ಕಥೆಗಳಲ್ಲಿ 'ಸಾಸಿರ ದೀನಾರಮುಂ ಸೋಲ್ತು' (ಪು. ೧೯೦), 'ಸಾಸಿರ ದೀನಾರದ ಪೊಟ್ಟಳಿಗೆ' (ಪು. ೧೯೧, ೧೯೩, ೧೯೪), ಹಾಗೂ 'ಒಂದು ದಮ್ಮಕ್ಕಾ ದೊಡಂ ಸೀರೆಯಂ ಕುಡಿಯಿಮೆಂದು' (ಪು. ೨೦೮), 'ಎಂಟು ದಮ್ಮದ ಪುಳ್ಳಿಯಂ ತಂದು' (ಪು. ೨೦೮) ಎಂಬಲ್ಲಿ ರೋಮಾಯರ (Romans) ದೀನಾರ (denarius) ಮತ್ತು ಗ್ರೀಕರ (Greeks) ದ್ರಮ್ಮ (drachma) ಎಂಬ ನಾಣ್ಯಗಳ ಹೆಸರಿವೆ. ಈ ವಿದೇಶೀಯ ಹೆಸರಿನ ದೇಶೀಯ ನಾಣ್ಯಗಳು ಉತ್ತರಾಪಥದಲ್ಲಿ ವ್ಯಾವಹಾರಿಕವಾಗಿ ಚಲಾವಣೆಯಲ್ಲಿದ್ದ ಕಾರಣ ಈ ಗ್ರಂಥವು ಮೂಲತಃ ಕನ್ನಡವೂ ಅಲ್ಲ, ಕರ್ಣಾಟಕದಲ್ಲಿ ರಚಿತವಾದುದೂ ಅಲ್ಲ, ಉತ್ತರಾಪಥದ ಯಾವೊಂದು ಪ್ರಾಕೃತ ಭಾಷೆಯ ಮೂಲಗ್ರಂಥದಿಂದ ಕನ್ನಡಿಸಲ್ಪಟ್ಟಿರಬೇಕೆಂದು ನಿಷ್ಪನ್ನವಾಗುತ್ತದೆ. ಸಂಸ್ಕೃತ ಪದ್ಯಗ್ರಂಥದಲ್ಲಾಗಲಿ ಗದ್ಯಗ್ರಂಥದಲ್ಲಾಗಲಿ ಪ್ರಾಕೃತ ಗಾಹೆಗಳನ್ನು

ರಚಿಸಿಡುವ ಅಥವಾ ಉದ್ಧರಿಸುವ ಪದ್ಧತಿ ಇಲ್ಲದಿರುವುದರಿಂದ, ಪ್ರತ್ಯೇಕ ಕಥೆಯ ತಲೆಗಡೆಯಲ್ಲಿ ಅದರ ಸಾರಾಂಶವನ್ನು ಸೂಚಿಸುವ ಪ್ರಾಕೃತ ಗಾಹೆಯೂ ಕಥಾಶರೀರ ದಲ್ಲಿಯೂ ಸಂದರ್ಭೋಚಿತವಾದ ಪ್ರಾಕೃತ ಗಾಹೆಗಳೂ (ಪು. ೧೮೫; ೧೮೮; ೨೧೩; ೨೧೫; ೨೨೪; ೨೨೯; ೩೩೦) ಉಳ್ಳ ಈ ಗ್ರಂಥವು ಮೂಲತಃ ಪ್ರಾಕೃತವೇ ವಿನಾ ಸಂಸ್ಕೃತವಲ್ಲವೆಂದು ಇನ್ನೂ ದೃಢವಾಗುತ್ತದೆ.

ಈ ಮೂರು ಕಥೆಗಳಲ್ಲಿ ಅಲ್ಲಲ್ಲಿ ಕೆಲವು ಸಂಸ್ಕೃತ ಪದ್ಯಗಳೂ ಇವೆ. (ಪು. ೧೮೫, ೧೮೭–೮೮, ೨೧೬; ೨೨೭–೨೮). ಅವು ಮೂಲ ಪ್ರಾಕೃತ ಗ್ರಂಥದಲ್ಲಿ ಎಂದಿಗೂ ಇದ್ದಿರಲಾರವು. ಏಕೆಂದರೆ ಹತ್ತು ಮಂದಿ ಓದಬೇಕು, ಆ ಮೂಲಕ ಅವರಲ್ಲಿ ಧರ್ಮಪ್ರಸಾರವಾಗಬೇಕು ಎಂಬ ಧ್ಯೇಯದಿಂದ ಅವರ ತಿಳುವಳಿಕೆಗೆ ತಕ್ಕಂತೆ ಸುಲಭವಾದ ಗದ್ಯ ಕಥಾರೂಪದಲ್ಲಿ, ಅವರು ಬಲ್ಲ ಪ್ರಾಕೃತದಲ್ಲಿ ತಾನೇ ರಚಿಸಲ್ಪಟ್ಟ, ಅತಏವ ಪ್ರೌಢ ಸಾಹಿತ್ಯವಲ್ಲದ, ಇಂಥಾ ಜೈನ ಕಥೆಗಳಲ್ಲಿ ವಿದ್ವಾಂಸ ರಷ್ಟೇ ಬಲ್ಲ ಸಂಸ್ಕೃತ ಭಾಷೆಯ ಪದ್ಯಗಳು ಇರಲೂ ಕಾರಣವಿಲ್ಲ, ಇರುವ ದೃಷ್ಟಾಂತ ಗಳೂ ಇಲ್ಲ ಎಂಬುದರಿಂದ ಆ ಸಂಸ್ಕೃತ ಪದ್ಯಗಳನ್ನು ಪ್ರಾಕೃತ ವೊಡ್ಡಾರಾಧಣದ ಮೂಲರಚಕನಲ್ಲ, ಪ್ರಾಯಶಃ ಅದನ್ನು ಕನ್ನಡಿಸಿದಾತನೇ ತನ್ನ ಕನ್ನಡ ವೊಡ್ಡಾ ರಾಧಣದಲ್ಲಿ ಸೇರಿಸಿಟ್ಟಿರಬೇಕು. ಇಂಥಾ ಸಂಸ್ಕೃತ ಪದ್ಯಗಳಲ್ಲಿ ಒಂದೆರಡು ಭರ್ತೃಹರಿಯ ನೀತಿಶತಕದಲ್ಲಿ ದೊರೆಯುತ್ತವೆಂದು ಈ ಕಥೆಗಳ ಮುನ್ನುಡಿಯಲ್ಲಿ (ಪು. ೧೮೦) ಹೇಳಿದೆ. ಆದರೆ ಪ್ರಕಟವಾದ ಕಥೆಗಳಲ್ಲಿ ಆ ಪದ್ಯಗಳಿಲ್ಲ. ಇವಲ್ಲಿಯ ಕೊನೆಯ ಕಥೆಯಲ್ಲಿರುವ (ಪು. ೨೨೯)

> ಯಾವಾತ್ ಸ್ವಸ್ಥಮಿದಂ ಶರೀರಮರುಜಂ ಯಾವಜ್ಜರಾ ದೂರತೋ
> ಯಾವಚ್ಚೇಂದ್ರಿಯ ಶಕ್ತಿರಪ್ರತಿಹತಾ ಯಾವತ್ ಕ್ಷಯೋ ನಾಯುಷಃ ।
> ಆತ್ಮಶ್ರೇಯಸಿ ತಾವದೇವ ವಿದುಷಾ ಕಾರ್ಯಃ ಪ್ರಯತ್ನೋ ಮಹಾನ್
> ಸಂದೀಪ್ತೇ ಭವನೇ ತು ಕೂಪಖನನಂ ಪ್ರತ್ಯುದ್ಯಮಃ ಕೀದೃಶಃ ॥

ಎಂಬ ಪದ್ಯವಾದರೊ ಭರ್ತೃಹರಿಯ ವೈರಾಗ್ಯಶತಕದಲ್ಲಿ (೭೫) ಇದೆ. ಅದಕ್ಕೆ ಮುಂಚಿನ ಭದ್ರಬಾಹುಭಟ್ಟಾರರ ಕಥೆಯಲ್ಲಿಯ

> ೧ನಿರ್ವೀರ್ಯಾ ಪೃಥಿವೀ ಗತೌಷಧಿರಸಾ ನೀಚಾ ಮಹತ್ವಂ ಗತಾ
> ರಾಜಾ ನಾಸ್ತಿ ಪರಾನ್ನಧರ್ಮನಿರತಾ ವಿಪ್ರಾ ವಿಕರ್ಮಸ್ಥಿತಾಃ ।
> ಭಾರ್ಯಾ ಭರ್ತರಿ ನಾಸ್ತಿ ಬದ್ಧಹೃದಯಾ ಪುತ್ರಾಃ ಪಿತೃದ್ವೇಷಿಣಃ
> ಇತ್ಯೇವಂ ಸಮುಪಸ್ಥಿತೇ ಕಲಿಯುಗೇ ದಾನ್ಯಾದನಂ ಪ್ರಸ್ಥಿತಾ ॥

ಎಂಬುದು (ಪು. ೨೧೬) ಕೊಂಚ ಪಾಠಭೇದದಿಂದ ಇತರತ್ರ ದೊರೆಯುತ್ತದೆ೨—

---

೧. ಇದರ ಒಕ್ಕಣೆಯಲ್ಲಿ ಹಲವು ತಪ್ಪುಗಳಿವೆ. ೨. ಸಂಸ್ಕೃತ ಸುಭಾಷಿತ ರತ್ನಭಾಂಡಾಗಾರ (ನಿರ್ಣಯಸಾಗರ ಛಾಪಖಾನೆ, 1891), ಪು. ೧೪೭, ಪ. ೨೩.

ನಿರ್ವೀರ್ಯಾ ಪೃಥಿವೀ ನಿರೋಷಧಿರಸಾ ನೀಚಾ ಮಹತ್ತ್ವಂ ಗತಾ
ಭೂಪಾಲಾ ನಿಜಕರ್ಮಧರ್ಮರಹಿತಾ ವಿಪ್ರಾಃ ಕುಮಾರ್ಗೇ ರತಾಃ ।
ಭಾರ್ಯಾ ಭರ್ತೃವಿರೋಧಿನೀ ಪರರತಾ ಪುತ್ರಾಃ ಪಿತುರ್ದ್ವೇಷಿಣೋ
ಹಾ ಕಷ್ಟಂ ಖಲು ವರ್ತತೇ ಕಲಿಯುಗೇ ಧನ್ಯಾ ನರಾ ಯೇ ಮೃತಾಃ ॥

ಹಾಗೆಯೇ ( ಪು. ೨೨೮ )

ಡಿಂಡೀರ ಪಿಂಡ ಸಂಕಾಶಮಾಯುಃ ಸಂಸಾರವರ್ತಿನಾಮ್ ।
ಆಖಂಡಲ ಧನುಷ್ಕಾಂಡ ಸನ್ನಿಭಂ ರೂಪಯೌವನಮ್ ॥

ಎಂಬಿವೇ ಮೊದಲಾದುವು ಸುಭಾಷಿತ ಗ್ರಂಥಗಳಿಂದಲೊ ಇತರ ಸಂಸ್ಕೃತ ಕಾವ್ಯಗಳಿಂದಲೊ ಎತ್ತಿಕೊಂಡುವೆಂದು ಸಾಕಷ್ಟು ಪ್ರತ್ಯಕ್ಷವಿರುವುದರಿಂದ, ಈ ಸಂಸ್ಕೃತ ಪದ್ಯಗಳಲ್ಲಿ ಯಾವೊಂದೂ ವೊಡ್ಡಾರಾಧಣದ ಕನ್ನಡ ರಚಕನ ಸ್ವಯಂಕೃತಿಯಲ್ಲ.

ಇವಲ್ಲದೆ ಈ ಕನ್ನಡ ಕಥೆಗಳಲ್ಲಿ ಕೆಲವು ಕನ್ನಡ ಪದ್ಯಗಳೂ ಇವೆ— ಮಹಾಸ್ರಗ್ಧರೆ ೧ ( ಪು. ೧೮೮ ), ಕಂದಪದ್ಯಗಳು ೪ ( ಪು. ೨೨೪–೨೨೫; ೨೯ ); ಮತ್ತು ಪ್ರಕಟವಾಗಿಲ್ಲದ ಗುರುದತ್ತ ಭಟಾರರ ಕಥೆಯಿಂದ ಮುನ್ನುಡಿಯಲ್ಲಿ ( ಪು. ೧೮೦ ) ಉದ್ಧರಿಸಿರುವ ಉತ್ಪಲಮಾಲೆಗಳು ೨.

ಪ್ರಾಕೃತ ಜೈನ ಕಥೆಗಳಲ್ಲಿ ವೃತ್ತಗಳಿಲ್ಲ, ಈ ದೀರ್ಘ ವೃತ್ತಗಳು ಹೇಗೂ ಇಲ್ಲ; ಲೋಗರ ಬಗ್ಗೆ ಬರೆದ ಪ್ರಾಕೃತ ಕಥೆಗಳಲ್ಲಿ ಇದ್ದರೆ ಗಾಹೆಗಳೇ ವಿನಾ ಮಿಕ್ಕ ವೃತ್ತಗಳು ಇರಲು ಕಾರಣವೂ ಇಲ್ಲ ಅಥವಾ ಪ್ರಾಕೃತದಲ್ಲೇಕೆ, ಮೇಲೆ ಹೇಳಿರುವಂತೆ ಉತ್ಪಲಮಾಲೆ–ಮಹಾಸ್ರಗ್ಧರೆಗಳು ಸಂಸ್ಕೃತ ಸಾಹಿತ್ಯದಲ್ಲಿಯೇ ಇಲ್ಲವೆಂಬ ಕಾರಣ ಇವು ಮೂಲಕಥೆಗಳಲ್ಲಿ ಎಂದಿಗೂ ಇದ್ದಿರಲಾರವು. ಈ ಕಂದಗಳಾದರೂ ಪ್ರಾಕೃತ ಮೂಲಗಾಹೆಗಳ ಕನ್ನಡ ಅನುವಾದವಲ್ಲ; ಏಕೆಂದರೆ ಹಾಗಿದ್ದರೆ ಆ ಪ್ರಾಕೃತ ಗಾಹೆಗಳಲ್ಲಿ ಕೆಲವನ್ನು ಕನ್ನಡಿಸದೆ ಬಿಟ್ಟು ಕೆಲವನ್ನು ಮಾತ್ರ ಕನ್ನಡಿಸುತ್ತಿದ್ದಿಲ್ಲ.

ಬಹುತರವಾಗಿ ಕನ್ನಡ ವೊಡ್ಡಾರಾಧಣವನ್ನು ಹೋಲುವ ತದ್ರೂಪ ಗದ್ಯ ಕಾವ್ಯವಾಗಿರುವ ಚಾವುಂಡರಾಯಪುರಾಣದಲ್ಲಿಯೂ[೧] ಇದೇ ಮೇರೆಗೆ ಪ್ರಾಕೃತ ಗಾಹೆಗಳೂ ( ಪು. ೪೦; ೪೨; ೫೬ ಇ ), ಸಂಸ್ಕೃತ ಸಮವೃತ್ತಗಳೂ ( ಪು. ೮; ೪೭; ೪೮; ೬೭ – ೬೮; ೭೩ ಇ ), ಅರ್ಧಸಮ ವೃತ್ತಗಳೂ ( ಪು. ೪೫–೪೭ ), ಕನ್ನಡ ವೃತ್ತಗಳೂ ( ಪು. ೩ – ೬; ೧೨ ಇ ), ಕಂದಗಳೂ ( ಪು. ೧ – ೬; ೧೦; ೧೬ ಇ ) ಇವೆ ಎಂಬುದನ್ನೂ ಇವಲ್ಲಿಯ ಪ್ರಾಕೃತ ಹಾಗೂ ಸಂಸ್ಕೃತ ಪದ್ಯಗಳು ಬಹುಪಕ್ಷವಾಗಿ ಚಾವುಂಡರಾಯನ ಸ್ವಯಂಕೃತಿಯಲ್ಲ ಎಂಬುದನ್ನೂ ಮನವರಿಸಿದರೆ, ಮೇಲೆ ಕಂಡಿರುವಂತೆ ಕವಿರಾಜಮಾರ್ಗದಲ್ಲಿ (I. ೨೭) ಹೇಳಿರುವ ಮೇರೆಗೆ ಅಲ್ಲಲ್ಲಿ ಕೆಲಕೆಲ

೧. ಕರ್ಣಾಟಕ ಸಾಹಿತ್ಯ ಪರಿಷತ್ತಿನ ಪ್ರತಿ ( 1928 )

ವಾದರೂ ಪದ್ಯಗಳಿಲ್ಲದ ತೀರ ಗದ್ಯಕಾವ್ಯವು ಗದ್ಯಕಥೆಯಾಗದೆಂಬ ಕಾರಣವೇನೋ ಆ ವಿಧಾನದ ಕಾವ್ಯಲಕ್ಷಣಕ್ಕೆ ಒಪ್ಪುವಂತೆ ಚಾವುಂಡರಾಯಪುರಾಣದಲ್ಲಿ ಹೇಗೋ ಹಾಗೆಯೇ ವೊಡ್ಡಾರಾಧಣದಲ್ಲಿಯೂ ಈ ಕೆಲವಾದರೂ ಪದ್ಯಗಳನ್ನು ಸೇರಿಸಿಟ್ಟಿರ ಬೇಕು. ಹಾಗಾದರೆ ಚಾವುಂಡರಾಯಪುರಾಣದಂತೆಯೆ ( ಕ್ರಿ. ಶ. 978 ) ವೊಡ್ಡಾ ರಾಧಣವೂ ಕರ್ಣಾಟಕ ಕಾವ್ಯಾವಲೋಕನದಲ್ಲಿ ( ಕ್ರಿ. ಶ. 1160 – 70 )—

ಗದ್ಯದೊಳೆ ಸಮೆದುಮಂತವು
ಹೃದ್ಯ ವಚಃಪ್ರೌಢಿಗಳ್ ಕಥಾಖ್ಯಾಯಿಕೆಯೊಳ್ ॥ ೯೪೯ ॥

ಎಂದಿರುವ ಪದ್ಯಸಂಪರ್ಕವಿಲ್ಲದೆ ಗದ್ಯಮಾತ್ರದಲ್ಲಿ ರಚಿಸಲ್ಪಟ್ಟ ಕಥಾಖ್ಯಾಯಿಕೆ ಎಂಬ ಕೃತಿಗಳು ಕನ್ನಡದಲ್ಲಿ ತಲೆದೋರುವ ಸಾಕಷ್ಟು ಮುಂಚೆಯೇ ರಚಿತ ವಾಗಿರಬೇಕು.

ಭರ್ತೃಹರಿಯ ಶತಕಗಳಲ್ಲಿ ಕಾಣುವ ಕೆಲವು ಪದ್ಯಗಳು ಕನ್ನಡ ವೊಡ್ಡಾ ರಾಧಣದಲ್ಲಿಯೂ ಇವೆಯಾದರೂ ಈ ಕನ್ನಡ ಗ್ರಂಥದ ರಚನಕಾಲವನ್ನು ಗೊತ್ತುಹಚ್ಚುವಲ್ಲಿ ಅದು ಏತರ ಕೆಲಸಕ್ಕೂ ಬಾರದು. ಏಕೆಂದರೆ ಶತಕತ್ರಯಿಯ ಭರ್ತೃಹರಿಯ ಕಾಲವು ಇನ್ನೂ ಕಂಡಿತವಾಗಿ ನಿರ್ಣೀತವೂ ಆಗಿಲ್ಲ, ಆ ಶತಕಗಳ ಲ್ಲಿಯ ಅವೆಲ್ಲಾ ಪದ್ಯಗಳನ್ನು ಆತನೇ ರಚಿಸಿದನೊ, ಅಥವಾ ತನ್ನ ಹಿಂದಣಿಂದಲೇ ಪ್ರಚಾರದಲ್ಲಿದ್ದ ಹಲವೊ ಕೆಲವೊ ಹಳೆಯ ಪದ್ಯಗಳನ್ನು ಆತನು ತನ್ನ ಶತಕಗಳಲ್ಲಿ ಸೇರಿಸಿಟ್ಟನೊ ಎಂದು ನಿಷ್ಕೃಷ್ಟವೂ ಆಗಿಲ್ಲ. ಉದಾಹರಣೆಗೆ ಹೇಳುವುದಾದರೆ, ಅವನ ನೀತಿಶತಕದಲ್ಲಿಯ

ಭವಂತಿ ನಮ್ರಾಸ್ತರವಃ ಫಲೋದ್ಗಮೈ
ರ್ನವಾಂಬುಭಿರ್ದೂರ ವಿಲಂಬಿನೋ ಘನಾಃ ।
ಅನುದ್ಧತಾಃ ಸತ್ಪುರುಷಾಃ ಸಮೃದ್ಧಿಭಿಃ
ಸ್ವಭಾವ ಏವೈಷ ಪರೋಪಕಾರಿಣಾಮ್ ॥ ೬೧ ॥

ಎಂಬ ಪದ್ಯವು ಕಾಳಿದಾಸನ ಶಾಕುಂತಲ ನಾಟಕದಲ್ಲಿ ( V. ೧೨ ) ಇದೆ ಎಂಬುದ ರಿಂದ ಕಾಳಿದಾಸನು ಅದನ್ನು ಭರ್ತೃಹರಿಯಿಂದ ಎರಕೊಂಡನೆನ್ನಲೇ ?

ವೊಡ್ಡಾರಾಧಣದಲ್ಲಿ ‘ ಸಾಸಿರ ದೀನಾರಮಂ ಸೋಲ್ತು ’ ( ಪು. ೧೯೦ ), ‘ ಸಾಸಿರ ದೀನಾರದ ಪೊಟ್ಟಳಿಗೆ ’ ( ಪು. ೧೯೧; ೧೯೩; ೧೯೪ ), ‘ ದೀನಾರದ ಸಹಸ್ರದ ಪೊಟ್ಟಳಿಗೆ ’ ( ಪು. ೧೯೪ ) ಎಂಬಲ್ಲಿಯ ದೀನಾರ ಎಂಬ ಹೆಸರು ಮೂಲತಃ ರೋಮಿಾಯ ( Roman ) ಬೆಳ್ಳಿಯದೊಂದು ನಾಣ್ಯದ ಹೆಸರೇ ( denarius ) ಆದರೂ, ಇಲ್ಲಿ ಸಾವಿರ ಕಟ್ಟಳೆಯಿಂದ ಹೇಳಿರುವ ದೀನಾರವು ಉತ್ತರಾಪಥದಲ್ಲಿ ಚಲಾವಣೆಯಲ್ಲಿದ್ದ ಅದೇ ಹೆಸರಿನ ಏತದ್ದೇಶೀಯ ನಾಣ್ಯವೇ ವಿನಾ ಆ ವಿದೇಶೀಯ ನಾಣ್ಯವಲ್ಲ ಎಂದು ಸ್ವಯಂವ್ಯಕ್ತವಿರುವುದರಿಂದ ಅದನ್ನು ಉಲ್ಲೇಖಿಸಿರುವ ಪ್ರಾಕೃತ

ವೊಡ್ಡಾರಾಧಣವು ಆ ವಿದೇಶೀಯ ಹೆಸರು ಇಲ್ಲಿಯ ನಾಣ್ಯಗಳಲ್ಲಿ ವಾಡಿಕೆಯಾಗಿದ್ದ ಕ್ರಿ. ಶ. 2 ನೆಯ ಶತಕದಲ್ಲಿಯೊ ಆದರ ಈಚೆಯಲ್ಲಿಯೊ ರಚಿತವಾಗಿರಬೇಕು. ಇದರಲ್ಲಿಯ ಭದ್ರಬಾಹುಭಟ್ಟಾರರ ಕಥೆಯಲ್ಲಿ ಆತನು ಉಜ್ಜೇನಿ (ಉಜ್ಜಯಿನಿ)ಯ ಸಂಪ್ರತಿ ಚಂದ್ರಗುಪ್ತ ಮಹಾರಾಜನೊಂದಿಗೆ ದಕ್ಷಿಣಾಪಥಕ್ಕೆ ಬಂದು 'ಕಟ್ಬಪ್ಪುನಾಡ ನೆಯ್ದಿದ'ನೆಂಬಲ್ಲಿ (ಪು. ೨೧೬) ಕಟ್ಬಪ್ಪು ಎಂಬ ಈಗಣ ಶ್ರವಣಬೆಳ್ಗೊಳವನ್ನು (ಶ್ರವಣ)ಬೆಳ್ಗೊಳವೆನ್ನದೆ ಧವಲಸರಸ್ಸೆನ್ನದೆ, ಅಂದರೆ ಈ ಕನ್ನಡ ಹಾಗೂ ಸಂಸ್ಕೃತ ಹೆಸರುಗಳನ್ನು ಪ್ರಾಕೃತಿಸಿ ಅವಲ್ಲಿ ಯಾವೊಂದರಿಂದಲಾದರೂ ಹೇಳದೆ, ಅದನ್ನು ಕನ್ನಡ ವೊಡ್ಡಾರಾಧಣದಲ್ಲಿ ಕಟ್ಬಪ್ಪು ಎಂದೇ ಇರುವ ಕಾರಣ ಆ ಮೂಲ ಕನ್ನಡ ಹೆಸರಿಂದಲೇ ಆ ಕ್ಷೇತ್ರವನ್ನು ಮೂಲಪ್ರಾಕೃತದಲ್ಲಿಯೂ ಹೇಳಿರಬೇಕೆಂದು ಕಂಡಿತವಾಗುವುದರಿಂದ, ಪ್ರಾಕೃತ ವೊಡ್ಡಾರಾಧಣವು ಆ ಕಟ್ಬಪ್ಪನ್ನು ಬೆಳ್ಗೊಳ ಎಂದಿರುವ ಶ್ರವಣಬೆಳ್ಗೊಳದ ಶಾಸನಗಳಲ್ಲಿ ಈಗ ದೊರೆತಷ್ಟರ ಮಟ್ಟಿಗೆ ಮೊದಲನೆಯದಾದ ಶ್ರವಣಬೆಳ್ಗೊಳ ನಂ. 31ರ ಕ್ರಿ. ಶ. ಸು. 650ಕ್ಕಿಂತ ಸಾಕಷ್ಟು ಹಿಂದೆ ರಚಿತವಾಗಿರಬೇಕು.

ಕನ್ನಡ ವೊಡ್ಡಾರಾಧಣದಲ್ಲಿ ಇತರತ್ರ ಕಾಣಬಾರದ, ಅಥವಾ ಬಂದರೂ ಬಹಳ ಹಳೆಯ ಕನ್ನಡ ಗ್ರಂಥಗಳಲ್ಲಿ ಇಲ್ಲವೆ ಶಾಸನಗಳಲ್ಲಿ ಮಾತ್ರ ದೊರೆವ, ಅತಏವ ಅತಿ ವಿರಳವಾಗಿರುವ, ಈ ಕೆಲವು ವಿಶೇಷ ಪ್ರಯೋಗಗಳಿವೆ—

೧. ಶಬ್ದಮಣಿದರ್ಪಣಕಾರನು (ಮಂಗಳೂರು ಪ್ರತಿ – 1920) 'ಕಳ್' ಎಂಬ ಧಾತುವಿಂಗೆಲ್ಲಿಯುಂ ದ್ವಿತ್ವಮಿಲ್ಲ – ಕಳದೆ ಬಂದಂ' (ಸೂ. ೭೧; ಪು. 105) ಎಂದಿರುವನಾದರೂ ಕ್ರಿ. ಶ. 10 ನೆಯ ಶತಮಾನದಲ್ಲಿಯ ಪಂಪನ ಆದಿಪುರಾಣದಲ್ಲಿಯೂ (VI. ೭)— 'ಕೊಲ್ಲದ ಪರನಾರಿಗಾಟಿಸಿದ ಕಳ್ಳದ', ಪೊನ್ನನ ಶಾಂತಿಪುರಾಣದಲ್ಲಿಯೂ (I. ೮೮)—

ಕೊಲೆಯೊಳ್ ಪೊರೆಯಿಲ್ಲದ ಪರ
ಲಲನೆಗೆ ಬಗೆಗುಡಡ ಕಳ್ಳದುೞ್ ಪುಸಿಯದ . ।

ಅದಕ್ಕೆ ದ್ವಿತ್ವವಿರುವುದರಿಂದ, ಬಹಳ ಹಳೆಯದೆಂದು ಸ್ಪಷ್ಟವಿರುವ ಈ ಪ್ರಯೋಗವು ವೊಡ್ಡಾರಾಧಣದಲ್ಲಿದೆ (ಪು. ೧೯) — 'ಕೊಲ್ಲದ ಪುಸಿಯದ ಕಳ್ಳದ.'

೨. ಪಂಪಭಾರತದಲ್ಲಿ 'ಕಲ್' ಧಾತುವಿಂದ ಉಂಟಾದ ಕಲ್ಪಿ ಎಂಬ ಭಾವನಾಮವಿದೆ – 'ಕಲ್ಲದ ಕಲ್ಪಿ' (IV. ೯೫), 'ಕಲ್ಪಿಗೆಡೆಯಾವುದೊ' (VII. ೨೧). ವೊಡ್ಡಾರಾಧಣದಲ್ಲಿ ಕಲಿಸು, ಬೋಧಿಸು, ಹೇಳಿಕೊಡು ಅಥವಾ ಆಜ್ಞಾಪಿಸು ಎಂಬ ಅರ್ಥದಲ್ಲಿ ಕಲ್ಪಿಯಿಂದ ಮಾಡಿಕೊಂಡ 'ಕಲ್ಪಿಸು' ಎಂಬ ಧಾತುವಿದೆ— 'ಓದಿಸಿ ಕಲ್ಪಿಸಿಯೋಲೆಯಂ ಬರೆಯಿಸಿ' (ಪು. ೧೮೧), 'ಎನ್ನಂ

ಜ್ಯೋತಿಷಮಂ ಕಲ್ಪಿಪ್ಪುದು' (ಪು. ೧೮೪), 'ತನ್ನ ಮನೆಯಂ ರಿಸಿಯರಂ ಪುಗಲೀಯದಂತು ಬಾಗಿಲ ಕಾಪಿನವರಂ ಕಲ್ಪಿಸಿದೊಳ್' (ಪು ೨೦೦). ಈ ಧಾತು ಅನ್ಯತ್ರ ದೊರೆವಂತೆ ತೋರದು.

೩. 'ಬಡಿಸು' ಎಂಬುದರ 'ಬಡ್ಡಿಸು' ಎಂಬ ರೂಪವು ಕವಿರಾಜಮಾರ್ಗದಲ್ಲಿದೆ (II. ೧೪೭)—

ನೆಟ್ಟನೆ ತಾಂ ಸವಿಯೊಳೊಂದಿರೆ ಭೋಜನಮಾ
ನಟ್ಟು ಬಡ್ಡಿಸು ನಾಮುಱಿಯದೆನಸುಂ ಸವಿಯಂ।

ಇದೇ ಹಳೆಯ ರೂಪವು ವೊಡ್ಡಾರಾಧಣದಲ್ಲಿದೆ— 'ಈತಂಗೆ ನೀಂ ಬಸಿಱಿಂ ತೀವಿ ಬಡ್ಡಿಸದಿರ್, ಎಣ್ಣೆಯಂ ತಿಣ್ಣಮೆಱೆಯದಿರ್, ಮಿಾಯಲ್ ಬೇಡಿದೊಡಮೆಱೆಯದಿರೆಂದು ಕಲ್ಪಿಸಿದೊಡಾಕೆಯುಮಾ ಪಾಂಗಿನೊಳ್ ದಿವಸಕ್ಕಂ ಬಡ್ಡಿಸೆ' (ಪು. ೨೦೭-೨೦೮), 'ಪಲವುಂ ತೆಱದ ಬಾಡುಗಳುಂ ತುಯ್ಯಲುಂ ಪೂರಿಗೆಯಿಡ್ಡಲಿಗೆ ಸೋದಿಗೆ ಲಾವಣಿಗೆ ಘೃತಪೂರಂ ಲಡ್ಡುಗೆ ಮುಂಡಗೆ ಮೊದಲಾಗೊಡೆಯ ಪದಿನೆಂಟುಂ ತೆಱದ ಭಕ್ಷ್ಯರೂಪಂಗಳುಮಂ ನಾನಾ ಪ್ರಕಾರದ ಪಾನಂಗಳುಮಂ ಭಟ್ಟಾರರ್ಗೆ ಬಡ್ಡಿಸಿದಂತೆ ಬ್ರಹ್ಮಯ್ಯಂಗೆ ಮಹಾದೇವಿ ಬಡ್ಡಿಸಿದೊಡೆ' (ಪು. ೨೧೯).

೪. ಬದುಕು – ಬಾಳು ಎಂಬ ಅರ್ಥದಲ್ಲಿ ಕವಿರಾಜಮಾರ್ಗದಲ್ಲಿಯೂ (II. ೩೭)

ಪತ್ತಿ ಪ್ರಮಾದಫಲಕವ
ನತ್ಯುಗ್ರಗ್ರಾಹನಿವಹ ಸಂಕ್ಷೋಭಿತದೊಳ್।
ವತ್ತೀ ರತ್ನಾಕರದೊಳ್
ಪುತ್ರಿಕೆಯನೆ ಬೞ್ದಳಿಂತು ಬಾೞ್ದಿದೆ ಚೋದ್ಯಂ॥

ಪಂಪಭಾರತದಲ್ಲಿಯೂ (VIII. ೪೨ ಗದ್ಯ) — 'ಕೀರ್ತಿಗೆಯೆಂಬುಗ್ರದೇವತೆ.... ಪಾಂಡವರನೆಲ್ಲಿ ವೊಕ್ಕೊಡಂ ಕೊಲ್ಲೆಂದೊಡಂತೆ ಗೆಯ್ವೆನೆಂದು............ ಕೊಳನ ತಡಿಯೊಳ್ ಬೞ್ದಿರ್ದ ನಾಲ್ವರುಮಂ ಕಂಡು ಬಾಪ್ಪು ಬೞ್ದೆನೆಂದು ತಿನಲ್ ಸಾರ್ವಾಗಳ್' — 'ಬೞ್' ಎಂಬ ಧಾತುವಿದೆಯಾದರೆ, ವೊಡ್ಡಾರಾಧಣದಲ್ಲಿ ತದೇವಾರ್ಥದಲ್ಲಿ 'ಬರ್' ಎಂದೂ — 'ಈ ಅಡವಿಯೊಳಿನ್ನೆಗಮಿವರ್............ ಪನ್ನೆರಡು ವರುಷಂಬರೆಗಮೆಂತು ಬರ್ದರೆಂದು ತಮ್ಮೊಳ್ನುಡಿದು' (ಪು. ೨೧೮), 'ಬೞ್ದು' ಎಂದೂ — 'ಶಿವಸುಖಮನೆಯ್ದುಸುವ ಸಚ್ಚಾರಿತ್ರದಿಂ ಬೞ್ದೆನೆಂದು' (ಪು. ೨೦೨) ಅದರ ಅನ್ಯರೂಪಗಳಿವೆ.

೫. ಹಾಗೆಯೇ ಪಂಪಭಾರತದಲ್ಲಿ (VIII. ೧೩)— 'ಕೆಂದಿದ ಮಿಾನಂ ತಳ್ತು (ಳ್ತು) ಡದಿರ್ದ ಮಧುವಂ ಪೋಲ್ತುಂ'— ಎಂಬಲ್ಲಿ ಶಯನಾರ್ಥದ 'ಕೆಂದಪ'

ಎಂಬ ಧಾತುವಿದೆಯಾದರೆ, ಇದರಲ್ಲಿ ಅದೇ ಅರ್ಥದ 'ಕೇ' ಧಾತುವಿದೆ—'ಭಟಾರರ ನಿಸಿದಿಗೆಯಂ ಬಂದಿಸಿ ಒಂದು ದಿವಸಮಲ್ಲಿಯೆ ಕೆಂದು ಮಱುದಿವಸಂ ಪೋಪಾಗಳ್' (ಪು. ೨೧೮).

೬. ಶಬ್ದಮಣಿದರ್ಪಣದಲ್ಲಿ (ಸೂ. ೨೧೦; ಪು. 298) ಚೇತನಭಾವದಲ್ಲಿ 'ಇತ್ವದ ಪ-ಕಾರ'ವನ್ನು, ಅಂದರೆ 'ಪಿ' ಎಂಬ ಪ್ರತ್ಯಯವನ್ನು ಹೇಳಿದೆಯಾದರೂ ಅದು ಈಗ ಬಲ್ಲಷ್ಟರಮಟ್ಟಿಗೆ 'ಕಲ್ಪಿ' ಮತ್ತು 'ನೋಂಪಿ' ಎಂಬ ಎರಡೇ ಏನೋ ಭಾವನಾಮುಗಳಲ್ಲಿ ದೊರೆವಂತೆ ತೋರುತ್ತದೆ. ಇವಲ್ಲಿಯೂ ಕಲ್ಪಿ ಎಂಬ ಶಬ್ದವು ಪಂಪಭಾರತ (IV. ೯೫; VII. ೨೧) ದಿಂದ ಈಚೆಯ ಕನ್ನಡದಲ್ಲಿ ದೊರೆವಂತೆ ತೋರದು, ಏವಂಚ ನಾನರಿಯೆ. ಅತಏವ 'ಕೇಳ್' ಧಾತುವಿಗೆ ಆ ಪ್ರತ್ಯಯವನ್ನು ಹಚ್ಚಿಸಿದ 'ಕೇಳ್ಪಿ' ಎಂಬ ಭಾವನಾಮವು ಬಹಳ ಹಳೆಯದಾಗಿರಬೇಕು. ಇದು ವೊಡ್ಡಾರಾಧಣದಲ್ಲಿದೆ (ಪು. ೧೮೧) — 'ತಾಯ್ತುಂದೆವಿರ ಕೇಳ್ಪಿಯಂ ಗೆಯ್ಯದೆ.'

೭. ವೊಡ್ಡಾರಾಧಣದಲ್ಲಿ ನೇರಾಗಿ ಅರ್ಥವಾಗದ ಹಾಗೂ ಇತರತ್ರ ದೊರೆಯದ 'ಲುಂದು' ಎಂಬ ಧಾತುವಿದೆ—'ಇರುಳ್ ಕಳ್ಳರ್ ಬಂದಾಕೆಯ ಲುಂದಿದ ಮನೆಯೊಳ್ ಕನ್ನವಿಕ್ಕಿದೊಡೆ' (ಪು. ೧೯೪), 'ಕಾರ್ತಿಕಮಾಸದ ಪುಣ್ಣಮಿಯಂದು ಸುಖದಿಂದೆ ಲುಂದಿಲ್ದನನ್ನೆಗಂ' (ಪು. ೨೦೨);

೮. ಪತನಾರ್ಥದ 'ಕೆಡು' ಎಂಬ ಧಾತುವಿದೆ — 'ಕೈಯಂ ನೋಡಿ ಬೆರಲುಂಗುರಮಂ ಕಾಣದೆಲ್ಲಿ ಕೆಟ್ಟತ್ತೆಂದು ಪ್ರಮಾಣಮಱಿಯದೆ ಮಲ್ಮಲಂ ಮಱುಗಿ' (ಪು. ೧೮೩);

೯. ತೊಡಗು (=ಪ್ರಾರಂಭಿಸು) ಎಂಬ ಅರ್ಥದ 'ತೊಡು' ಎಂಬ ಧಾತುವಿದೆ—'ಮೊಟಿಕಾಲಿಂ ತೊಟ್ಟು ಕಟಿವರೆಗಂ ತಿಂದತ್ತು' (ಪು. ೨೦೩), 'ಪುಟ್ಟಿದಂದಿಂ ತೊಟ್ಟಿಂತಪ್ಪುಣಿಸಂ ಕನಸಿನೊಳಪ್ಪೊಡಂ ಕಂಡಱಿಯದ' (ಪು. ೨೦೯), 'ಪನ್ನೆರಡು ತಲೆಯ ಪಾವಂ ಕಂಡುದಱಿಂದಿಲ್ಲಿಂ ತೊಟ್ಟೀ ನಾಡೊಳ್ ಪನ್ನೆರಡು ವರ್ಷಂಬರಂ ರೌದ್ರ ಪಸವಮುಕ್ಕುಂ' (ಪು. ೨೧೪);

೧೦. ಕಡಿ–ಕಚ್ಚು ಎಂಬ ದಂಶನಾರ್ಥದ 'ಕೊಳ್' ಎಂಬ ಧಾತುವಿದೆ—'ಆ ಇರುಳೊಳೆ ಪಾವು ಕೊಳೆ ಸತ್ತು' (ಪು. ೧೮೯; ೧೯೦).

ಇವು ಹಳಗನ್ನಡ ಸಾಹಿತ್ಯದಲ್ಲಿ ಇತರತ್ರ ದೊರೆವಂತೆ ತೋರುವುದಿಲ್ಲ.

೧೧. ವೊಡ್ಡಾರಾಧಣದಲ್ಲಿ 'ಇರ್' ಮತ್ತು 'ಪೊರ್ದ್ದ' ಎಂಬ ಧಾತುಗಳ ವಿವಿಧ ಕಾಲರೂಪಗಳು ಇವೆ–'ವಂದಿಸದಿರ್ದ್ದಿನಂ' (ಪು. ೧೮೫), 'ನೋಡುತ್ತ ಇರ್ದ್ದಿಂತೆಂದು ಮನದೊಳ್ ಬಗೆದಪ್ಪನ್' (ಪು. ೨೦೯), 'ಒಂದು ಮರದ

ಪೋಲಿಲೊೞಿರ್ದುಱ (ಪು. ೨೧೭), 'ವೇಣಾತಟಮನೆಯ್ದಿ ಪೊೞಿವೊಲಿಲೊೞಿರ್ದುಱ' (ಪು. ೨೨೮) 'ಚಂಪ್ರನೊಡೆದುದಂ ಕಂಡುದಱಿಂ ಸದ್ಧರ್ಮದ ಮೊದಲ ಪೊರ್ದಿದ ಮಾರ್ಗದಿಂ ಬೆೞಿಯೊಳ್ ಪುಲ್ಗಳ್ ಪಲವಕ್ಕುಂ' (ಪು. ೨೧೪–೨೧೫), ಮಾತ್ರ ವಲ್ಲ, 'ಇರ್' ಎಂಬುದಕ್ಕೆ 'ಇಲ್' ಎಂಬ ರೂಪವೂ 'ಪೊರ್ದು' ಎಂಬುದಕ್ಕೆ 'ಪೊಲ್ದು' ಎಂಬ ರೂಪವೂ ಇದೆ— 'ಕನ್ನದ ಬಾಗಿಲೊಳಾ ಬಾಳನಡ್ಡವಿಟ್ಟು ಪಿಡಿದಿಲ್ದು ಪುಗುವ ಕಳ್ಳನ ಮೂಗನರಿದಡೆ' (ಪು. ೧೯೪), 'ಕಾರ್ತಿಕಮಾಸದ ಪುಣ್ಣಮಿಯಂದು ಸುಖದಿಂದೆ ಉಂದಿಲ್ದನನ್ನೆಗಂ' (ಪು. ೨೦೨), 'ಅರಸಂ ತಾಂ ಪಕ್ಕದಿಲ್ದು' (೨೧೩), 'ನಾ ಮೆಚ್ಚದೆ ಕುಡದಿಲ್ದಿನನ್ನೆಗಂ' (ಪು. ೨೨೮), 'ಪೊಲ್ದಿದೊಂ' (ಪು. ೨೦೪; ೨೩೧).

ನೃಪತುಂಗನಲ್ಲಿಯೂ ಕಾಣದ ಈ 'ಇಲ್' ಮತ್ತು 'ಪೊಲ್ದು' ಎಂಬ ರೂಪಗಳಲ್ಲಿ ಮೊದಲಿನದು ಕ್ರಿ. ಶ. ಸು. 700 ರವೆಂಬ ಶ್ರವಣಬೆಳ್ಗೊಳದ (EC II) 26 ನೆಯ ಶಾಸನದಲ್ಲಿಯೂ (ಬಂ. ೧)– 'ಉಳ್ಳರಿಪೀಠದಿಲ್ದೊರ್,' 98 ನೆಯದರಲ್ಲಿಯೂ (ಬಂ. ೪)—

ಉಪಮಿಲ್ಲಾ ಸುರಲೋಕ ಸೌಖ್ಯದೆಡೆಯಾನ್ತಾಮೆಯ್ದಿ ಇಲ್ದಾಳ್ ಮನವ್ ॥

108 ನೆಯ ಶಾಸನದಲ್ಲಿಯೂ (ಬಂ. ೪)—

ಅನುಪಮ ದಿವ್ಯಪ್ಪದು ಸುರಲೋಕದ ಮಾರ್ಗ್ಗದೊೞಿಲ್ದರಿಸ್ಪಿನಿವ್ ॥

ಕ್ರಿ. ಶ. ಸು. 700 ರದೆಂಬ ಕಿಗ್ಗದ ಶಿಲಾಲೇಖದಲ್ಲಿಯೂ (EC VI ಕೊಪ್ಪ ನಂ. 40)– 'ಬೆಸಗೆಯ್ವಲ್ಲಿ....ಕ್ಕಲುಂ ಇಲ್ದಿ' (ಬಂ. ೩–೪), ದೊರೆಯುತ್ತವೆ. ಆದರೆ 'ಪೊಲ್ದು'ವಾದರೊ ಕನ್ನಡ ಸಾಹಿತ್ಯದಲ್ಲಿ ಅನ್ಯತ್ರ ಇರುವಂತೆ ತೋರುವುದಿಲ್ಲ.

೧೨. 'ಉಳ್ ಸತ್ತಾಯಾಂ' ಎಂಬ ಸತ್ತಾರ್ಥದ ಧಾತುವಿನ (ಶಬ್ದಮಣಿ ದರ್ಪಣ ಸೂತ್ರ ೨೪೩; ಪು. 349) ಅರ್ಥವುಳ್ಳ 'ಒಡೆ' ಎಂಬ ಧಾತುವಿಂದ ಹುಟ್ಟಿದ, 'ಉಳ್ಳ' – 'ವಂತ' ಎಂಬ ಅರ್ಥದ 'ಒಡೆಯ' ಎಂಬ ಪ್ರತ್ಯಯವನ್ನು ಮಾತ್ರ ಶಬ್ದಮಣಿದರ್ಪಣದಲ್ಲಿ (ಸೂ. ೨೦೫, ಪದ್ಯ ೨೧೭, ಪು. 288; ಮತ್ತು ಪದ್ಯ 86, ಪು. 86)—

ಇದಱೊಳಿದುಂಟೆಂಬರ್ಥದೊ
ಳುದಯಿಸುವುದುಳ್ಳೊಡೆಯ ವಂತ ಶಬ್ದಂ— । ೨೧೭ ।
ಅಲ್ಲಿಯಿದುಂಟೆಂಬರ್ಥದೊ
ಳಿಲ್ಲಿಯುಮುಳ್ಳೊಡೆಯ ವಂತ ಶಬ್ದಮುಮಕ್ಕುಂ । 86 ।

ಎಂದು ಹೇಳಿದೆಯಲ್ಲದೆ, ಆ ಧಾತುವನ್ನಾಗಲಿ ಅದರ ಅನಾನ್ಯ ರೂಪಗಳನ್ನಾಗಲಿ ಹೇಳಿಲ್ಲ. ವೊಡ್ಡಾರಾಧಣದಲ್ಲಾದರೊ ಆದರ ವಿವಿಧ ರೂಪಗಳು ದೊರೆಯುತ್ತವೆ—

'ಬುದ್ಧಿಯೊಡೆಯ' (ಪು. 182) = ಬುದ್ಧಿಯುಳ್ಳ; 'ಪಸಿವು ನೀರಟ್ಕೆ ಮೊದಲಾಗೊಡೆಯ (= ಮೊದಲಾಗಿರುವ) ಇಪ್ಪತ್ತೆರಡು ಪರೀಷಹ' (ಪು. ೧೮೮); 'ಸಮ್ಯಕ್ತ್ವಮನೊಡೆಯನಾಗಿ' (ಪು. ೧೮೪) = ಸಮ್ಯಕ್ತ್ವ (ವನ್ನು) ಉಳ್ಳವನಾಗಿ; 'ಸಾಗರೋಪಮಾಯುಷ್ಯಮನೊಡೆಯೊಂ' (ಪು. ೧೯೯) = ಆಯುಷ್ಯ ಉಳ್ಳವನು; 'ಮೊದಲಾಗೊಡೆಯಮನೋದಿ' (ಪು ೧೯೮) = ಮೊದಲಾಗಿರುವವನ್ನು ಓದಿ; 'ವಿಲಾಸವಿಭ್ರಮಂಗಳನೊಡೆಯಳ್' (ಪು. ೧೮೧) = ವಿಲಾಸವಿಭ್ರಮಂಗಳುಳ್ಳವಳು; 'ನೀನುಂ ವಿಲಾಸವಿಭ್ರಮಂಗಳನೊಡೆಯುಯ್' (ಪು. ೧೯೩) = ನೀನೂ ವಿಲಾಸ ವಿಭ್ರಮಂಗಳುಳ್ಳವಳು(ವನು); 'ಕೋಟಿ ಕಸವರಮನೊಡೆಯೊಂ' (ಪು. ೧೯೦; ೧೯೧; ೧೯೯) = ಕೋಟಿ ಹೊನ್ನುಳ್ಳವನು; 'ಈತನೆಮ್ಮಿಂ ಬೞಿಕ್ಕೆ ಚತುರ್ದಶ ಪೂರ್ವಧಾರಿಯಪ್ಪ ಮಹಾತ್ಮನೊಡೆಯೊಂ ಭದ್ರಬಾಹು ಭಟ್ಟಾರರೆಂಬೊರಪ್ಪೊರೆಂದು' (ಪು. ೨೦೫).

ಇಂಥಾ ರೂಪಗಳಾಗಲಿ ಈ ಧಾತುವೇ ಆಗಲಿ ನೃಪತುಂಗನಲ್ಲಿ ದೊರೆವಂತೆ ತೋರುವುದಿಲ್ಲ.

೧೩. ವೊಡ್ಡಾರಾಧಣದಲ್ಲಿ ಕರ್ಮಣಿಪ್ರಯೋಗದಲ್ಲಿ ಮೂಲಧಾತುವಿಗೆ ಅರ್ಧ್ಯೈಕಾರವದೆ— 'ಪುಷ್ಪವೃಷ್ಟಿಯಿಂ ಮುಚ್ಚಿಪಟ್ಟವನಾಗಿ' (ಪು. ೨೦೩)=ಮುಚ್ಚಲ್ಪಟ್ಟವನಾಗಿ; 'ಅರಹಂತ ಪರಮದೇವರಾಗಮದೊಳ್ ಪೇೞಿಪಟ್ಟ' (ಪು. ೨೩೫)= ಹೇಳಲ್ಪಟ್ಟ; 'ಕೊಲೆಪಡುವಾತಂ' (ಪು. ೧೯೭) = ಕೊಲ್ಲಲ್ಪಡುವಾತನು.

ಕರ್ಣಾಟಕ ಭಾಷಾಭೂಷಣದಲ್ಲಿ ಕರ್ಮಣಿಪ್ರಯೋಗವನ್ನು ಕುರಿತು ಹೇಳಿಲ್ಲ; ಶಬ್ದಮಣಿದರ್ಪಣದಲ್ಲಿ ಪ್ರಕ್ಷಿಪ್ತವಾದ ಆ ಅನುಕ್ತಸೂತ್ರವೆಂಬ 250-ಆ ಸೂತ್ರದಲ್ಲಾದರೂ (ಪು. 358-359)[೧] 'ಅಲ್ ಪ್ರಯುಕ್ತ ಪಡು ಧಾತು'ವನ್ನು ಹೇಳಿದೆಯಲ್ಲದೆ ಅರ್ಧ್ಯೈಕಾರ ಪ್ರಯುಕ್ತವಾದುದನ್ನು ಹೇಳಿಲ್ಲ. ಆದಕಾರಣ ಅವರ ಕಾಲದಲ್ಲಿ ಆ ಪ್ರಯೋಗವು ತೀರ ನಷ್ಟವಾಗಿತ್ತೆಂದು ಮಾತ್ರವಲ್ಲ, ಅವರು ಆ ಪ್ರಯೋಗ ಉಳ್ಳ ಗ್ರಂಥಗಳನ್ನು ಕೂಡ ಕಂಡಿಲ್ಲವೇನೋ ಎನ್ನಬಹುದು. ಆದರೆ ಕರ್ಣಾಟಕ ಶಬ್ದಾನುಶಾಸನದ (ಪು. 433) ೫೩೨ ನೆಯ 'ತಸ್ಮಿನ್ನೈದಲೌ' ಎಂಬ ಸೂತ್ರದಲ್ಲಿ ಅರ್ಧ್ಯೈಕಾರ ಉಳ್ಳ 'ಪಡು' ಧಾತುವನ್ನು ಹೇಳಿದೆ, ಮತ್ತು ಅದರಲ್ಲಿ ಅನ್ಯ ಸೂತ್ರಕ್ಕೆ (ಸೂ. ೪೪೩) ಲಕ್ಷಣವಾಗಿ ಎತ್ತಣಿಂದಲೊ ಉದ್ಧರಿಸಿರುವ (ಪು. 382)

ಇರಲಾಗದು ಮಾತೃಸ್ತ
ನ್ಯರಾಗಮೆಂದೊಲ್ದು ತತ್ಕರಾಂಗುಷ್ಠದೊಳಾ।
ಸುರರಾಜನಿನಾಗಳ್ ತಂ
ದಿರೆಪಟ್ಟುದು ಬಾಲಪೋಷಕರ ಪೀಯೂಷಂ॥

---

೧. ಈ ಸೂತ್ರವು ಪ್ರಕ್ಷಿಪ್ತವೆಂದು ಅಲ್ಲಿ (ಪು. 358, f n. 1)

ಎಂಬ ಕಂದದ 'ಕಂದಿರೆಪಟ್ಟುದು' ಎಂಬಲ್ಲಿ ಆ ಪ್ರಯೋಗವೂ ಇದೆ. ಇದರಿಂದ ಈ ಪ್ರಯೋಗವು ಶಬ್ದಮಣಿದರ್ಪಣದ ಮತ್ತು ಶಬ್ದಾನುಶಾಸನದ ನಡುಗಾಲದಲ್ಲಿ ತಲೆದೋರಿತೆಂದಲ್ಲ, ಭಾಷಾಭೂಷಣಕಾರನೂ ಶಬ್ದಮಣಿದರ್ಪಣಕಾರನೂ ಕಂಡಿಲ್ಲದ ಯಾವೊಂದು ಹಳೆಯ ಗ್ರಂಥದಲ್ಲಿ ಶಬ್ದಾನುಶಾಸನಕಾರನು ಈ ಪ್ರಯೋಗವನ್ನು ಕಂಡಿರಬೇಕು, ಅಥವಾ ಈತನು ಆ ೫೩೨ ನೆಯ ಸೂತ್ರವನ್ನೂ ಈ ಕಂದವನ್ನೂ ಯಾವೊಂದು ಪ್ರಾಚೀನ ಗ್ರಂಥದಿಂದ, ಪ್ರಾಯಶಃ ವ್ಯಾಕರಣದಿಂದ, ಎತ್ತಿಕೊಂಡಿರಬೇಕು ಎಂದು ವ್ಯಕ್ತವಾಗುತ್ತದೆ.

೧೪. ಭಾಷಾಭೂಷಣದ 'ಆದಿವರ್ಣೈಕಾರೇಭ್ಯೋ ಯಃ' ಮತ್ತು 'ಅಕಾರಾಂತಾಚ್ಚಾವಧಾರಣಾರ್ಥೇ ಏ' ಎಂಬ ೨೨-೨೩ ನೆಯ ಸೂತ್ರಗಳಿಂದ ಆ-ಇ-ಎ-ಕಾರಗಳಿಂದ ಪರವಾಗಿ ಯ-ಕಾರವಾಗುವುದೆಂದೂ ಅ-ಕಾರಾಂತ ಶಬ್ದಗಳಿಂದ ಪರವಾಗಿ ಅವಧಾರಣೆಗೆ ಆದೇಶವಾದ ಎ-ಕಾರವು ಬಂದರೆ ಯ-ಕಾರವಾಗುವುದೆಂದೂ ತಿಳಿಯುತ್ತದೆ; ಉದಾ— ಆಯೆಡೆಯೊಳ್, ಸಂಗತಿಯಿಂ, ಶ್ರೀಯೊಡೆಯಂ, ಸಲಿಯಿರ್ಪರ್, ಆತನಯೆ, ಅವಳಯೆ. ಕರ್ಣಾಟಕ ಕಾವ್ಯಾವಲೋಕನದ ೯ ನೆಯ ಸೂತ್ರದಲ್ಲಿಯೂ—

ಸವನಿಕುಮಾಕಾರಂ ಮೇ
ಣೆ ವರ್ಣಮೇಕಾರಮೆಂಬಿವಕ್ಕೆ ಯಕಾರಂ ।
ವ್ಯವಧಾಯಕಂ ವ್ರವರ್ಣ
ಕ್ಕೆ ವಕಾರಂ ಸ್ವರಮುವಿದಿರೊಳಾಗೆ ಯಥೇಷ್ಟಂ ॥

ಹೀಗೆಯೇ ಹೇಳಿ ಆ ಬಗ್ಗೆ ಈ ಉದಾಹರಣೆಗಳನ್ನು ಕೊಟ್ಟದೆ— ಆಯಿರ್ದ್ವರ್, ದುರ್ಬಲಸ್ಯ ಬಲಂ ರಾಜಾಯೆಂಬ, ದಧಿಯಿಲ್ಲದುಣಿಸು, ಆತನಯೆ. ಶಬ್ದಮಣಿದರ್ಪಣದ ೫೩ ನೆಯ ಸೂತ್ರದಲ್ಲಿ ( ಪು. 73 )—

ಆತ್ವದಿನಿವರ್ಣದಿಂ ಮು
ತ್ತೋತ್ವದಿನೈತ್ವದಿನೆ ವರ್ಣದಿಂ ಮುಂದಕ್ಕುಂ ।
ಯತ್ವಮುದವಧಾರಣೆ ಪರ
ಮತ್ವಂ ಪಿಂತಾಗೆ ಷಷ್ಠಿನಿಯಮುದೆ ಯತ್ವಂ ॥

ಆ-ಇ-ಈ-ಓ-ಐ-ಎ-ಏ ಎಂಬವಕ್ಕೆ ಸ್ವರವು ಪರವಾದರೂ ಅ-ಕಾರಕ್ಕೆ ಅವಧಾರಣೆಯ ಎ-ಕಾರವು ಪರವಾದರೂ ನಡುವೆ ಯತ್ವ ಅಹುದೆಂದು ಹೇಳಿ ಆ ಬಗ್ಗೆ ಈ ಉದಾಹರಣೆಗಳನ್ನು ( ಪು. 74-75 ) ಕೊಟ್ಟದೆ— ಕಾಯಲುಂ, ಸಾಯಲೆ ವೇಡಿ, ಕವಿಯಾರ್, ಪಿಡಿಯೆಂಡು, ಈಯಲ್, ಸ್ತ್ರೀಯೆಂಬ, ನೋಯಿಸಿದಂ, ಜೋಯೆಂದು ಪಾಡಿದರ್, ಬ್ರಹ್ಮರ್ ಭೋಯೆನಲುಂ, ಪಸೆಯಿರ್ದಂ, ಮೇಯಿಸಿದಂ, ಅವಳಯೆ, ಅದಱಯೆ. ಆ ಮುಂದಣ ೫೪ ನೆಯ ಸೂತ್ರದಲ್ಲಿ ( ಪು. 76 )—

ಸದಮುಳ ಸಂಸ್ಕೃತ ಕರ್ಣಾ
ಟದದಂತ ಪ್ರಕೃತಿಗಳ್ಗಿಸು ಪ್ರತ್ಯಯಮಿಂ ।
ತಿದಿರಾಗೆ ಯತ್ವಮನುಕೃತಿ
ಪದಕಂ ಮುಂದನುಕೃತಿಸ್ವರಂ ನಿಲೆ ಯತ್ವಂ ॥

ಸಂಸ್ಕೃತ ಕನ್ನಡಗಳ ಅ-ಕಾರಾಂತ ಪದಗಳಿಗೆ ಇಸು-ಪ್ರತ್ಯಯವು ಪರವಾದರೆ ನಡುವೆಯೂ ಅ-ಕಾರಾಂತವಾದ ಅನುಕೃತಿ ಪದಗಳ ಮುಂದೆಯೂ ಯತ್ವವಾಗುತ್ತ ದೆಂದು ಹೇಳಿದೆ; ಉದಾ— ಶುದ್ಧಯಿಸಿದಂ, ಒರಯಿಸಿದಂ ಪಟಪಟಿಯೆಂದು. ಇವಲ್ಲಿಯೂ ಹಾಗೆಯೇ ಶಬ್ದಾನುಶಾಸನದ 'ಯಕ್ ಸ್ವರೇ ಸ್ವರಸ್ಯ' ಅಂದರೆ ಸ್ವರಕ್ಕೆ ಪರವಾದ ಸ್ವರವು ಯ-ಕಾರವಾಗುತ್ತದೆಂಬ ೩೫ ನೆಯ ಸೂತ್ರದಲ್ಲಿಯೂ— ಉದಾ. ಜ್ಯಾ + ಒಳ್ = ಜ್ಯಾಯೊಳ್, ಆಯಿರವುಳ್, ಸತಿಯಿವಳ್, ಸ್ತ್ರೀಯಿಾಕೆ, ಸೀತೆಯಿಂದಂ, ತೇಯೆಂದಂ— ಅನುಕೃತಿ ಪದಗಳಲ್ಲದ ಕನ್ನಡ ಅ-ಕಾರಾಂತಗಳಿಗೆ ಪರವಾಗುವ ಇಸು-ಪ್ರತ್ಯಯದಲ್ಲದ ಇ-ಕಾರಕ್ಕೆ ಯಗಾಗಮವನ್ನು ಹೇಳಿಲ್ಲದಿರು ವುದರಿಂದಲೂ ಭಾಷಾಭೂಷಣದ ೧೯ನೆಯ ಸೂತ್ರದಲ್ಲಿ 'ಸ್ವರೇ ಸ್ವರಸ್ಯ ಲೋಪಃ' ಅಂದರೆ ಸ್ವರವು ಪರವಾಗುವಲ್ಲಿ ಪೂರ್ವ ಸ್ವರಕ್ಕೆ ಲೋಪವೆಂದೂ— ಉದಾ. ಎನ್ನರಸಂ, ತನ್ನಾಳಿಂ, ಮುನ್ನಿಱಿವಂ, ಕೂರ್ತೀರ್ವಂ, ಬಿಟ್ಟುಱಿವಂ, ತಳ್ತಿಸೆವಂ, ಪದೆದೈದುಗೊಳ್ವಂ, ಬಿಟ್ಟೊಳ್ವಂ- ಶಬ್ದಮಣಿದರ್ಪಣದ ೫೨ ನೆಯ ಸೂತ್ರದಲ್ಲಿ ( ಪು. 71 )—

ಸ್ವರಮಿದಿರೊಳಿರೆ ವಿಭಕ್ತಿ
ಸ್ವರಕಂ ಪ್ರಕೃತಿ ಸ್ವರಕ್ಕಮುಕ್ಕುಂ ಲೋಪಂ ।

ಎಂದೂ, ಉದಾ— ಕ್ರಮದೆ + ಆಯ್ತು = ಕ್ರಮುದಾಯ್ತು; ಈಶ್ವರನೊಲವು, ದೇವೆಂಬರ್, ಲೇಸಿಂಗೊಡೆಯಂ, ಅರಸ+ಆಳ್ = ಅರಸಾಳ್, ಜೀಯ + ಎಂಬಂ = ಜೀಯೆಂಬಂ, ಸೇಸಿಕ್ಕಿದಂ, ಸುತ್ತೋಲಿ—ಶಬ್ದಾನುಶಾಸನದ ೩೬ ನೆಯ ಸೂತ್ರದಲ್ಲಿ 'ಲುಬನಾಮ ಹಾನೌ' ಅಂದರೆ ಸ್ವರಕ್ಕೆ ಸ್ವರವು ಪರವಾದಲ್ಲಿ, ಅರ್ಥವು ಕೆಡದಾದರೆ, ಪೂರ್ವ ಸ್ವರವು ಲೋಪಿಸುತ್ತದೆ ಎಂದೂ— ಉದಾ. ಎನ್ನರಸಂ, ತನ್ನಾಳ್, ಗುಣ ದಿರವು, ಸುಖದೊಡೆಯಂ, ಕೂಡುಣ್ಡಂ— ಹೇಳಿರುವುದರಿಂದಲೂ ಈ ವೈಯಾಕರ ಣರು ಬಲ್ಲಷ್ಟರ ಮಟ್ಟಿಗಾದರೂ ಕನ್ನಡದಲ್ಲಿ ಅ-ಕಾರಕ್ಕೆ ಪರವಾದ ಇ-ಕಾರವು ಯ-ಕಾರವಾಗಿಲ್ಲದೆ ಇ-ಕಾರವೇ ಆಗಿತ್ತೆಂದು ವ್ಯಕ್ತವಾಗುತ್ತದೆ. ಅತಏವ ವೊಡ್ಡಾ ರಾಧಣದಲ್ಲಿ ಅನುಭವಿಸುತ್ತ + ಇರೆ = 'ಅನುಭವಿಸುತ್ತಿರೆ' ( ಪು. ೧೮೧ ), ಮಿಥ್ಯಾ ವಿನಯದಿಂದ+ಇಳಿಸಿ = 'ಮಿಥ್ಯಾವಿನಯದಿಂದಿಳಿಸಿ' ( ಪು. ೧೮೩ ), 'ಕರ್ದಿಂಗಳ+ ಇರುಳೊಳ್ = 'ಕರ್ದಿಂಗಳಿರುಳೊಳ್' ( ಪು. ೨೧೯ ), 'ಪಟ್ಟವರ್ಧನದಿಂದ+

ಇಟ್ಟಿದು—'ಪಟ್ಟವರ್ಧನದಿಂದಿಟ್ಟಿದು' (ಪು. ೨೩೦) ಎಂಬುದರೊಂದಿಗೆ 'ಅನುಭವಿಸುತ್ತಯಿರೆ' (ಪು. ೨೦೫), 'ಮೊದಲಾಗೊಡೆಯಯಿಪ್ಪತ್ತೆರಡು ಪರೀಷಹಂಗಳಂ' (ಪು. ೧೭೯; ೧೮೮), 'ಮತ್ತಿತ್ತಯಿರುಳಿನೋಲಗದೊಳ್' (ಪು. ೨೧೧) ಎಂದು ಛಂದಸ್ಸಿನ ಅಡಚಣೆ ಇಲ್ಲದ ಗದ್ಯಗ್ರಂಥದಲ್ಲಿ ಇರುವೀ ಉದಾಹರಣೆಗಳು ಆ–ಇ–ಕಾರ ಮೊದಲಾದವಕ್ಕೆ ಪರವಾದ ಇ-ಕಾರದಷ್ಟೇ ಸಾಮಾನ್ಯವಾಗಿ ಅ-ಕಾರಕ್ಕೆ ಪರವಾದ ಇ-ಕಾರವೂ ಯತ್ವವನ್ನು ಹೊಂದುತ್ತಿದ್ದ ಬಹಳ ಹಿಂದಣ ಕಾಲದ ಪ್ರಯೋಗವು ಕ್ರಮೇಣ ಖಿಲವಾಗಿ ಬರುತ್ತಿದ್ದಂದಿನ ಅವಶಿಷ್ಟಗಳಾಗಿರಬೇಕು.

ವೊಡ್ಡಾರಾಧಣದಲ್ಲಿ ದೀರ್ಘಾದೇಶ ಉಳ್ಳ ನಾಮಪದಗಳಾಗಲಿ — ಉದಾ. 'ಸಿದ್ಧಿಯಾನ್' (ಶ್ರಬೆ. ನಂ. 22) 'ರಾಜೀಮತೀ ಗನ್ತಿಯಾರ್' (ಶ್ರಬೆ. 97), ಕ್ರಿಯಾಪದಗಳಾಗಲಿ— ಉದಾ. 'ಮುಡಿಪ್ಪಿದಾರ್' (ಶ್ರಬೆ. 8; 9; 24; 25), 'ಎಯ್ದಿದಾನ್' (ಶ್ರಬೆ. 95), 'ಇಟ್ಟಾಳ್' (ಶ್ರಬೆ. 98), ಕಾಣವೆಂಬುದರಿಂದ, ಅದು ಕ್ರಿ. ಶ. 700 ಕ್ಕಿಂತ ಹಿಂದಿನವೆಂಬ ಶ್ರವಣಬೆಳ್ಗೊಳದ ಆ ಕೆಲವು ಶಾಸನಗಳಿಗಿಂತ (EC II) ಈಚೆಯದೆಂದಾಗದು. ಏಕೆಂದರೆ ಅಂಥಾ ಶಾಸನಗಳಲ್ಲಿಯೇ ಕೆಲವಲ್ಲಿ 'ಮುಡಿಪ್ಪಿದಾರ್' (ನಂ. 8; 9; 24; 25; 33; 34), 'ಎಯ್ದಿದಾನ್' (ನಂ. 95), 'ಇಟ್ಟಾಳ್' (ನಂ. 98) ಎಂದೂ ಕೆಲವಲ್ಲಿ 'ಮುಡಿಪ್ಪಿದರ್' (ನಂ. 17; 20), 'ಎಯ್ದಿದೊನ್' (ನಂ. 22), 'ಇಟ್ಟರ್' (ನಂ. 108) ಎಂದೂ ಇದೆ; ನಂ. 22 ನೆಯ ಶಾಸನದ ಒಂದೇ ಪದ್ಯದಲ್ಲಿ 'ಸಿದ್ಧಿಯಾನ್' ಎಂಬ ನಾಮಪದದಲ್ಲಿರುವ ದೀರ್ಘಾದೇಶವು 'ನಡದೊಂ', 'ನೆಱಿದೊಂ', 'ಎಯ್ದಿದೊಂ' ಎಂಬ ಕ್ರಿಯಾಪದಗಳಲ್ಲಿಲ್ಲ; ನಂ. 113 ನೆಯ ಶಾಸನಪದ್ಯದ ೪ ನೆಯ ಚರಣದಲ್ಲಿ 'ಏಱಿದಾನ್' ಎಂದೂ ೨ ನೆಯ ಚರಣದಲ್ಲಿ 'ಒಪ್ಪಿದೊನ್' ಎಂದೂ ಇದೆ. ಆದಕಾರಣ ಆ ಪ್ರಯೋಗವು ಆ ಶಾಸನಗಳ ಶತಮಾನದಲ್ಲಿ ತಕ್ಕಷ್ಟಾದರೂ ನಷ್ಟವಾಗುತ್ತ ಬಂದಿರಬೇಕು. ಕಲ್ಲಿನಲ್ಲಿ ಕೆತ್ತಿದ ಆ ಶಾಸನಗಳ ಬರೆಹವು ಅಂದಿನಿಂದ ಇಂದಿಗೂ ಇದ್ದಂತೆಯೇ ಇದೆಯಾದರೆ, ಆಯಾ ವಿವಿಧ ಶತಕಗಳ ಹಲವು ಸಂಪ್ರತಿಕಾರರ ಕೈಯ್ದಾಟಿ ಬಂದ ವೊಡ್ಡಾರಾಧನದ ಬರೆಹದಲ್ಲಿ ಎಷ್ಟೆಲ್ಲ ವ್ಯಾಪಾರಾಗಿದೆಯೋ ಹೇಳಲಾಗದ ಕಾರಣ ಇದೊಂದು ಪ್ರಯೋಗದ ಅಭಾವದಿಂದ ಮಾತ್ರ ಅದರ ರಚನಕಾಲವು ಶ್ರವಣಬೆಳ್ಗೊಳದ ಈ ಹಳೆಯ ಶಾಸನಗಳ ಕ್ರಿ. ಶ. 7 ನೆಯ ಶತಮಾನಕ್ಕಿಂತ ಈಚೆಯದೆಂದಾಗದು.

ನನಗಾದರೊ ಕನ್ನಡ ವೊಡ್ಡಾರಾಧಣವು ಕ್ರಿ. ಶ. 6 ನೆಯ ಶತಮಾನಕ್ಕಿಂತ ಈಚೆಯದಲ್ಲವೆಂದು ತೋರುತ್ತದೆ.

## IV

ಶ್ರವಣಬೆಳ್ಗೊಳದ ಕ್ರಿ. ಶ. 1129 ನೆಯ ನಂ. 67 ( ಬಂತಿ ೪೦–೪೩ )ನೆಯ ಶಾಸನದಲ್ಲಿ ( EC II )—

ಚೂಳಾಮಣಿಃ ಕವೀನಾಂ ಚೂಳಾಮಣಿ ನಾಮ ಸೇವ್ಯಕಾವ್ಯಕವಿಃ ।
ಶ್ರೀವರ್ದ್ಧದೇವ ಏವ ಹಿ ಕೃತಪುಣ್ಯಃ ಕೀರ್ತ್ತಿಮಾಹರ್ತ್ತುಂ ॥
ಚೂರ್ಣ್ಣಿ ॥ ಯ ಏವಮುಪಶ್ಲೋಕಿತೋ ದಣ್ಡಿನಾ ॥
ಜಹ್ನೋಃ ಕನ್ಯಾಂ ಜಟಾಗ್ರೇಣ ಬಭಾರ ಪರಮೇಶ್ವರಃ ।
ಶ್ರೀವರ್ದ್ಧದೇವ ಸಂಧತ್ಸೇ ಜಿಹ್ವಾಗ್ರೇಣ ಸರಸ್ವತೀಂ ॥

ಚೂಳಾ( ಡಾ )ಮಣಿ ಎಂಬ ಕಾವ್ಯದ ರಚಕನಾದ ಶ್ರೀವರ್ಧದೇವನೆಂಬ ಜೈನಾಚಾರ್ಯನು ದಶಕುಮಾರ ಚರಿತ್ರ – ಕಾವ್ಯಾದರ್ಶಾದಿಗಳನ್ನು ರಚಿಸಿದ ಪ್ರಸಿದ್ಧ ಸಂಸ್ಕೃತ ಕವಿಯೂ ಆಲಂಕಾರಿಕನೂ ಆದ ದಂಡಿಯಿಂದ ಹೊಗಳಲ್ಪಟ್ಟನೆಂದಿದೆ.

ಭಟ್ಟಾಕಳಂಕನ ( ಕ್ರಿ. ಶ. 1604 ) ಕರ್ಣಾಟಕ ಶಬ್ದಾನುಶಾಸನದಲ್ಲಿ ( ಪು. 10 )—

ನ ಚೈಷಾ (ಕರ್ಣಾಟಕ) ಭಾಷಾ ಶಾಸ್ತ್ರಾನುಪಯೋಗಿನೀ
ತತ್ತ್ವಾರ್ಥಮಹಾಶಾಸ್ತ್ರ ವ್ಯಾಖ್ಯಾನಸ್ಯ ಷಣ್ಣವತಿ ಸಹಸ್ರ
ಪ್ರಮಿತ ಗ್ರಂಥಸಂದರ್ಭ ರೂಪಸ್ಯ ಚೂಡಾಮಣ್ಯಭಿ
ಧಾನಸ್ಯ ಮಹಾಶಾಸ್ತ್ರಸ್ಯ............ ಉಪಲಭ್ಯಮಾನತ್ವಾತ್ ।

ತತ್ತ್ವಾರ್ಥಮಹಾಶಾಸ್ತ್ರದ ವ್ಯಾಖ್ಯಾನವಾದ ೯೬೦೦೦ ಗ್ರಂಥಸಂಖ್ಯೆಯುಳ್ಳ ಚೂಡಾಮಣಿ ಎಂಬ ಮಹಾಶಾಸ್ತ್ರವು ದೊರೆವ ಕರ್ಣಾಟಕ ಭಾಷೆ ನಿರುಪಯೋಗಿಯಲ್ಲ ಎಂದಿರುವಲ್ಲಿ, ಚೂಡಾಮಣಿ ಎಂಬುದು ತತ್ತ್ವಾರ್ಥಮಹಾಶಾಸ್ತ್ರದ ವ್ಯಾಖ್ಯಾನವಾದೊಂದು ಕನ್ನಡ ಭಾಷೆಯ ಬೃಹದ್ಗ್ರಂಥವೆಂದು ತಿಳಿಯುತ್ತದೆ.

ಇಂದ್ರನಂದಿಯ ಶ್ರುತಾವತಾರದಲ್ಲಿ ( ಕರ್ಣಾಟಕ ಕವಿಚರಿತೆ I, ಪು. 8 ) ಹೀಗಿದೆ—

ಅಥ ತುಂಬಲೂರ ನಾಮಾಚಾರ್ಯೋಽಭೂತ್ತುಂಬಲೂರ ಸದ್ಗ್ರಾಮೇ ।
ಷಷ್ಠೇನ ವಿನಾ ಖಂಡೇನ ಸೋ( ಽ )ಸಿದ್ಧಾನ್ತಯೋರುಭಯೋಃ ॥
ಚತುರಧಿಕಾಶೀತಿ ಸಹಸ್ರ ಗ್ರಂಥ ರಚನಯಾ ಯುಕ್ತಾಂ । ( ? )
ಕರ್ಣಾಟ ಭಾಷಯಾ ಕೃತ ಮಹತೀಂ ಚೂಡಾಮಣಿಂ ವ್ಯಾಖ್ಯಾಮ್ ॥
ಸಪ್ತ ಸಹಸ್ರ ಗ್ರಂಥಾಂ ಷಷ್ಠಸ್ಯ ಚ ಪಂಜಿಕಾಂ ಪುನರಕಾರ್ಷೀತ್ ॥

ಇದರ ನಾಲ್ಕನೆಯ ಬಂತಿಯ ನೇರಾದ ಪಾಠವು ಇಲ್ಲಿರುವಂತೆ ‘ ಚೂಡಾಮಣಿಂ ವ್ಯಾಖ್ಯಾಮ್ ’ ಎಂದೊ ಅಥವಾ ‘ ಚೂಡಾಮಣಿವ್ಯಾಖ್ಯಾಮ್ ’ ಎಂದೊ ಇತ್ಯರ್ಥಿಸಬೇಕು.

ಅದು ' ಚೂಡಾಮಣಿಂ ವ್ಯಾಖ್ಯಾಮ್ ' = ಚೂಡಾಮಣಿ ಎಂಬ ವ್ಯಾಖ್ಯೆಯನ್ನು ಎಂದರೆ ತುಂಬಲೂರಾಚಾರ್ಯನು ಚೂಡಾಮಣಿ ಎಂಬ ೮೪೦೦೦ ಗ್ರಂಥಸಂಖ್ಯೆಯ ವ್ಯಾಖ್ಯೆಯನ್ನು ಕನ್ನಡದಲ್ಲಿ ಬರೆದನೆಂದೂ, ಅದು ' ಚೂಡಾಮಣಿ ವ್ಯಾಖ್ಯಾಮ್ ' = ಚೂಡಾಮಣಿಯ ವ್ಯಾಖ್ಯೆಯನ್ನು ಎಂದು ತತ್ಪುರುಷವಾದರೆ ಆತನು ಚೂಡಾಮಣಿಯ ವ್ಯಾಖ್ಯೆಯನ್ನು, ಅಂದರೆ ಚೂಡಾಮಣಿ ಎಂಬ ಗ್ರಂಥಕ್ಕೆ (೮೪೦೦೦ ಗ್ರಂಥಸಂಖ್ಯೆಯ) ವ್ಯಾಖ್ಯೆಯನ್ನು, ಕನ್ನಡದಲ್ಲಿ ಬರೆದನೆಂದೂ ಅರ್ಥವಾಗುತ್ತದೆ. ಶಬ್ದಾನುಶಾಸನದಿಂದ ಸ್ವಯಂ ಚೂಡಾಮಣಿಯೇ ತತ್ತ್ವಾರ್ಥ ಮಹಾಶಾಸ್ತ್ರದ ವ್ಯಾಖ್ಯಾನವೆಂದು ತಿಳಿಯುವುದರಿಂದ, ಆತನು ಚೂಡಾಮಣಿ ಎಂಬ ವ್ಯಾಖ್ಯೆಯನ್ನು ಬರೆದನೆಂದರೆ ತುಂಬಲೂರಾಚಾರ್ಯನೇ ಚೂಡಾಮಣಿಯ ಕರ್ತೃವೆನಿಸುವುದರಿಂದ, ಶ್ರೀವರ್ಧದೇವನೂ ತುಂಬಲೂರಾಚಾರ್ಯನೂ ಒಬ್ಬನೇ ಎಂದೂ ಆತನು ಚೂಡಾಮಣಿಗೆ ವ್ಯಾಖ್ಯೆಯನ್ನು ಬರೆದನೆಂದರೆ ಅದರ ಕರ್ತೃವಾದ ಶ್ರೀ ವರ್ಧದೇವನು ಬೇರೆ ವ್ಯಾಖ್ಯಾನಕಾರನಾದ ತುಂಬಲೂರಾಚಾರ್ಯನು ಬೇರೆ ಎಂದೂ ನಿಷ್ಪನ್ನವಾಗುತ್ತದೆ.

ಶ್ರುತಾವತಾರದಲ್ಲಿ ಪಂಜಿಕೆಯ ೭೦೦೦ ಗ್ರಂಥಸಂಖ್ಯೆಯನ್ನು ಬಿಟ್ಟೇ ೮೪೦೦೦ ಗ್ರಂಥವೆಂದಿರುವ ತುಂಬಲೂರಾಚಾರ್ಯನ ವ್ಯಾಖ್ಯೆಯೇ ನಡುಗಾಲದಲ್ಲಿ ಬೇರೆ ಯಾರಿಂದಲೋ ಹಿಗ್ಗಿಸಲ್ಪಟ್ಟು ಭಟ್ಟಾಕಳಂಕನಿದ್ದ 17 ನೆಯ ಶತಮಾನದಲ್ಲಿ ೯೬೦೦೦ಕ್ಕೆ ಏರಿರಬಹುದೇ? ಎಂದರೆ ಈತನಿಂದ ೨ ಶತಕಗಳಿಗೆ ಈಚೆಯ ೧೯ನೆಯ ಶತಮಾನದಲ್ಲಿದ್ದ ದೇವಚಂದ್ರನ (ಕ್ರಿ. ಶ. 1838) ರಾಜಾವಳೀಕಥೆಯಲ್ಲಿಯೂ (ಕರ್ಣಾಟಕ ಕವಿಚರಿತೆ I, ಪು. 7-8; III. ಪು. 147-148)—

" ಮತ್ತಂ ತುಂಬುಲೂರಲ್ಲಿ ಪುಟ್ಟಿದ ತುಂಬುಲೂರು ನಾಮಾ
ಚಾರ್ಯರ್ ಪ್ರಾಕೃತ ಸಂಸ್ಕೃತ ಕರ್ಣಾಟಾದಿ ಭಾಷೆಗಳಿಂ
ಸಿದ್ಧಾಂತ ಪ್ರಬಂಧ ಕರ್ತೃಗಳ್ ಚೂಡಾಮಣಿ ವ್ಯಾಖ್ಯಾನ
ಚತುರಶೀತಿ ಸಹಸ್ರ ಗ್ರಂಥ ರಚನೆಯಂ ಮಾಡಿದರ್ "

ಹಾಗೂ

" ತುಂಬುಲೂರು ನಾಮಾಚಾರ್ಯರ್ ಎಂಬತ್ತುನಾಲ್ಕು ಸಾಸಿರ ಗ್ರಂಥ ಕರ್ತೃ
ಗಳಾಗಿ ಕರ್ಣಾಟಕ ಭಾಷೆಯಿಂ ಚೂಡಾಮಣಿ ವ್ಯಾಖ್ಯಾನಮಂ ಮಾಡಿದರ್ "

ತುಂಬುಲೂರಾಚಾರ್ಯನ ವ್ಯಾಖ್ಯಾನದ ಗ್ರಂಥಸಂಖ್ಯೆ ೮೪೦೦೦ವೇ ಎಂದಿರುವುದರಿಂದ, ೯೬೦೦೦ ಗ್ರಂಥಸಂಖ್ಯೆಯ ಚೂಡಾಮಣಿ ಬೇರೆ, ೭೦೦೦ ಗ್ರಂಥಸಂಖ್ಯೆಯ ಪಂಜಿಕೆಯಲ್ಲದೆ ೮೪೦೦೦ ಗ್ರಂಥಸಂಖ್ಯೆಯುಳ್ಳ ಚೂಡಾಮಣಿಯ ವ್ಯಾಖ್ಯಾನ ಬೇರೆ ಎಂದು ಬೇಕಾದಷ್ಟು ಸ್ಪಷ್ಟವಾಗುವುದರಿಂದ, ಶ್ರುತಾವತಾರದಲ್ಲಿಯ

' ಚೂಡಾಮಣಿಂ ವ್ಯಾಖ್ಯಾಮ್ ' ಎಂಬ ಪಾಠವು ಸರಿಯಲ್ಲ, ಅದು ' ಚೂಡಾಮಣಿ ವ್ಯಾಖ್ಯಾಮ್ ' ಎಂದಾಗಬೇಕು. ಹಾಗಾದರೆ ತುಂಬಲೂರಾಚಾರ್ಯನು ಚೂಡಾಮಣಿಯ ವ್ಯಾಖ್ಯಾನಕಾರನೇ ವಿನಾ ಅದರ ಕರ್ತೃ ತಾನೆ ಅಲ್ಲವೆಂದು ಸಿದ್ಧವಾಗುವುದರಿಂದ, ಭಟ್ಟಾಕಳಂಕನು ಹೇಳಿರುವಂತೆ ಕನ್ನಡ ಭಾಷೆಯಲ್ಲಿರುವ ಚೂಡಾಮಣಿಯ ರಚಕನಾದ ಶ್ರೀ ವರ್ಧದೇವನು ಇಂದ್ರನಂದಿಯೂ ದೇವಚಂದ್ರನೂ ಹೇಳಿರುವ ಮೇರೆಗೆ ಅದಕ್ಕೆ ಕನ್ನಡದಲ್ಲಿ ವ್ಯಾಖ್ಯಾನವನ್ನೂ ಪಂಜಿಕೆಯನ್ನೂ ಬರೆದ ತುಂಬಲೂರಾಚಾರ್ಯನಿಂದ ಭಿನ್ನ ವ್ಯಕ್ತಿ ಎಂದು ವ್ಯಕ್ತವಾಗುತ್ತದೆ.

ಚೂಡಾಮಣಿಯ ಗ್ರಂಥಸಂಖ್ಯೆ ೯೬೦೦೦, ಅದರ ವ್ಯಾಖ್ಯಾನ ಹಾಗೂ ಪಂಜಿಕೆಯ ಕೂಡ ಒಟ್ಟಾರೆ ಗ್ರಂಥಸಂಖ್ಯೆ ೮೪೦೦೦ + ೭೦೦೦ = ೯೧೦೦೦ ಎಂಬಲ್ಲಿ ಗ್ರಂಥ ಎಂಬುದಕ್ಕೆ ೩೨ ವರ್ಣಗಳುಳ್ಳ ಶ್ಲೋಕವೆಂದು[೧] ಮೂಲಾರ್ಥವಾದರೂ ಕ್ರಮೇಣ ಇತರ ಜಾತಿಯ ಪದ್ಯಗಳನ್ನೂ ಸೂಚಿಸಲಿಕ್ಕೆ ಉಪಯೋಗಿಸಲ್ಪಟ್ಟಿರುವ ಈ ಶಬ್ದಕ್ಕೆ ವಾಡಿಕೆಯಾಗಿ ಪದ್ಯವೆಂದೇ ಅರ್ಥವೆಂಬುದರಿಂದ, ಇವೆರಡೂ ಬೃಹದ್ಗ್ರಂಥಗಳು ಕನ್ನಡದಲ್ಲಿ ಪದ್ಯಬದ್ಧವಾಗಿ ರಚಿಸಲ್ಪಟ್ಟಿರಬೇಕು.

ಕ್ರಿ. ಶ. 6 ನೆಯ ಶತಮಾನದಲ್ಲಿದ್ದ ದಂಡಿಯಿಂದ ನುತಿಸಲ್ಪಟ್ಟ ಶ್ರೀ ವರ್ಧದೇವನು ಆ ಶತಕಕ್ಕಿಂತ ತಕ್ಕಷ್ಟು ಹಿಂದೆಯೇ ಆಗಿ ಹೋಗಿರಬೇಕು. ಚಾವುಂಡರಾಯ ಪುರಾಣದ ( ಕ್ರಿ. ಶ. 978 ) ಅಂತ್ಯದಲ್ಲಿ ಕೊಟ್ಟಿರುವ ಜೈನ ಗುರುಪರಂಪರೆಯಲ್ಲಿ ( ಕರ್ಣಾಟಕ ಕವಿಚರಿತೆ I, ಪು. 8; 48 ) ಪ್ರಾಭೃತವನ್ನು ಕನ್ನಡಿಸಿದವನೆಂದು ಶ್ರುತಾವತಾರದಿಂದ ತಿಳಿವ ( ಕವಿಚರಿತೆ I, ಪು. 10 )—

ಕಾಲೇ ತತಃ ಕಿಯತ್ಯಪಿ ಗತೇ ಪುನಃ ಶ್ಯಾಮಕುಂದಸಂಜ್ಞೇನ ।
ಪ್ರಾಕೃತ ಸಂಸ್ಕೃತ ಕರ್ಣಾಟಕಭಾಷಯಾ ಪದ್ಧತಿಃ ಪರಾ ರಚಿತಾ ॥

ಶ್ಯಾಮಕುಂದಾಚಾರ್ಯನೊಂದಿಗೆ ತೆಂಬುಳೂರಾಚಾರ್ಯನೆಂದು ತುಂಬುಲಾಚಾರ್ಯನನ್ನೂ ಹೆಸರಿಸಿರುವುದರಿಂದ, ಈ ಕನ್ನಡ ಕವಿಗಳಿಬ್ಬರೂ ಚಾವುಂಡರಾಯನಿಗಿಂತ ಸಾಕಷ್ಟು ಆಚೆಯವರಾಗಿರಬೇಕು.

ಹೀಗೆ ೯೬೦೦೦ದಷ್ಟು ಹೇರಳ ಪದ್ಯಸಮುದಾಯ ಉಳ್ಳ ಚೂಡಾಮಣಿಯಂಥ ಕಾವ್ಯವು ಕ್ರಿ. ಶ. 6 ನೆಯ ಶತಮಾನಕ್ಕೆ ಹಿಂದೆ ಕನ್ನಡದಲ್ಲಿ ಇದ್ದಿರಬೇಕಾದರೆ, ಆಗ್ಗೆ ಕನ್ನಡದ ಸಾಹಿತ್ಯಸಂಪತ್ತಿ ಎಷ್ಟು ಸಮೃದ್ಧವಾಗಿರಬೇಕು, ಅದಕ್ಕಿಂತ ಎಷ್ಟು ಹಿಂದಣಿಂದಲೇ ಕನ್ನಡದಲ್ಲಿ ಸಾಹಿತ್ಯವು ತೊಡಗಿರಬೇಕು ಎಂದು ಸುಲಭ

೧. ಗ್ರಂಥೋ ಗುಂಫೇ ಧನೇ ಶಾಸ್ತ್ರೇ ದ್ವಾತ್ರಿಂಶದ್ವರ್ಣ ನಿರ್ಮಿತೌ ॥ (ಹೇಮಚಂದ್ರನ ಅನೇಕಾರ್ಥ ಸಂಗ್ರಹ, ಶ್ಲೋ. ೨೨೭), ಗ್ರಂಥೋ ದ್ವಾತ್ರಿಂಶದಕ್ಷರೀ । ( ತ್ರಿಕಾಂಡಶೇಷ, ಶ್ಲೋ. ೭೪೯ ).

ವಾಗಿ ಊಹಿಸಬಹುದು; ಏಕೆಂದರೆ ಮೆ| ರೈಸರು ( Mr. Lewis Rice )ಹೇಳಿರುವಂತೆ[೧]— It is evident that a work of such extent (as the Chūḍāmaṇi) could neither have been produced nor required had there not already existed a considerable literature in Kannada together with a widespread cultivation of the language.

V

ಕ್ರಿ. ಶ. ಸು. 700 ಎಂದು ತೇದಿಸಿರುವ ಬಾದಾಮಿಯ ಶಾಸನದಲ್ಲಿಯ ತ್ರಿಪದಿಗಳಲ್ಲದೆ ( ಶಾಸನ ಪದ್ಯಮಂಜರಿ, ಪು. ೭, ಪದ್ಯ 4 - 6 )—

ಕಟ್ಟಿದ ಸಿಂಘಮುನ್ ಕೆಟ್ಟೊದೇನೆಮುಗೆಂದು ।
ಬಿಟ್ಟವೋಲ್ ಕಲಿಗೆ ವಿಪರೀತಂಗಹಿತರ್ಕ್ಕಳ್ ।
ಕೆಟ್ಟರ್ ಮೇಣ್ ಸತ್ತರ ವಿಚಾರಂ ॥

ಅದರಂತೆಯೆ ಪ್ರಾಯಶಃ ಮಿಕ್ಕ ವಿಷಯಗಳಿಗಿಂತ ಹೆಚ್ಚಾಗಿ ಅವುಗಳ ಕೆತ್ತನೆಯ ಕನ್ನಡ ಬರೆಹವನ್ನು ಆಧರಿಸಿ ಕ್ರಿ. ಶ. ಸು. 700 ಎಂದು ತೇದಿಸಿದ ಶ್ರವಣಬೆಳ್ಗೊಳದ ಈ ಕೆಲವು ಶಾಸನಗಳಲ್ಲಿಯೂ (EC II)[೨] ಕನ್ನಡ ಪದ್ಯಗಳಿವೆ. ಕ್ರಿ. ಶ. ಸು. 700 ಎಂದಿರುವ ಕಾರಣ ಇವೆಲ್ಲವೂ ಕ್ರಿ. ಶ. 700 ರಲ್ಲಿಯೇ ಕೆತ್ತಲ್ಪಟ್ಟವೆಂದಲ್ಲ, ಬಹಳ ಹೆಚ್ಚಾದರೆ ಕ್ರಿ. ಶ. 700 ರೊಳಗೆ ಕೆತ್ತಿ ಮುಗಿದಿರಬೇಕೆಂಬುದರಿಂದ, ಇವೆಲ್ಲವೂ ಕ್ರಿ. ಶ. 7 ನೆಯ ಶತಮಾನದಲ್ಲಿಯೇ ಅಲ್ಲ, ಇವಲ್ಲಿ ಕೆಲವಾದರೂ ಅದಕ್ಕೆ ಒಂದೊ ಹೆಚ್ಚೊ ಶತಮಾನಗಳ ಹಿಂದೆ ಕೆತ್ತಲ್ಪಟ್ಟಿರಬಹುದು. ವೃತ್ತಬದ್ಧವಾದ ಈ ಶಾಸನಗಳಲ್ಲಿ ಈ ವಿವಿಧ ವೃತ್ತಗಳಿವೆ— (೧) ಮಹಾಸ್ರಗ್ಧರೆ ೨ ( ನಂ. 12; 88 ); (೨) ಶಾರ್ದೂಲ ವಿಕ್ರೀಡಿತ ೪ ( ನಂ. 13; 22; 27; 116 ); (೩) ಮತ್ತೇಭ ವಿಕ್ರೀಡಿತ ೫ ( ನಂ. 76; 77; 97; 98; 106 ); (೪) ಉತ್ಪಲಮಾಲೆ ೨ (ನಂ. 21; 79); (೫) ಚಂಪಕಮಾಲೆ ೧ ( ನಂ. 93 ); (೬) ಮಲ್ಲಿಕಾಮಾಲೆ ೧ ( ನಂ. 311); (೭) ವಸಂತತಿಲಕ ೧ (ನಂ. 105); (೮) ವಂಶಸ್ಥ ೧ (ನಂ. 114) (೯) ಪ್ರಸ್ತಾರಕ್ಕೆ ತಪ್ಪುವ ಮಹಾಸ್ರಗ್ಧರೆ ೧ ( ನಂ. 84 ); (೧೦) ಮಹಾಸ್ರಗ್ಧರೆ ಎಂದು ತೋರುವ ವೃತ್ತ ೧ (ನಂ. 111); (೧೧) ಮಲ್ಲಿಕಾಮಾಲೆ ಎಂದು ತೋರುವ ವೃತ್ತ ೧ ( ನಂ. 95 ); (೧೨) ಯಾವವೆಂದು ಕಂಡಿತವಾಗಿ ಹೇಳಲಾರದ ವೃತ್ತಗಳು ೭ ( ನಂ. 26; 80; 107; 108, 109; 113; 115 ).

---

೧. Mysore and Coorg from Inscriptions, ಪು. 198. ೨. ಶ್ರಬೆ (EC II) ನಂ:- 12; 13; 21; 22; 26; 27; 31; 76; 77; 79; 80; 84; 88; 93; 95; 97; 98; 102; 105; 106; 107; 108; 109; 111; 113; 114; 115; 116.

ಸೊಗಸಾದ ಈ ವೃತ್ತಗಳ, ಉದಾ—

ನಂ. 22— ಬಾಳಾ ಮೇಲ್ ಶಿಖಿಮೇಲೆ ಸರ್ಪ್ಪದ ಮುಹಾದನ್ತಾಗ್ರದುಳ್ ಶಲ್ವವೊಲ್
ಸಾಲಾವ್ಯಾಲ ತಪೋಗ್ರದಿನ್ತು ನಡದೊಂ ನೂಱಿಣ್ಬು ಸಂವತ್ಸರಂ ।
ಕೇಳೊಯ್ಪಿನ್ ಕಟವಪ್ರ ಶೈಲಮುಡಱಿದ್ದೀನಮ್ಮಾ ಕಳನ್ತೂರನಂ
ಬಾಲೇ ಪೆಗ್ಗೊರವಂ ಸಮಾಧಿ ನೆಱಿದೊನ್ ನೋನ್ತೆಯ್ದಿದಾನ್ ಸಿದ್ಧಿಯಾನ್॥

ನಂ. 27— ಮಾಸೇನರ್ ಪರಮಪ್ರಭಾವ ರಿಸಿಯರ್ಕ್ಕಟ್ವಪ್ಪಿನಾ ವೆಟ್ಟದುಳ್
ಶ್ರೀ ಸಂಗಂಗಳ ಪೇೞ್ದ ಸಿದ್ಧಸಮಯನ್ತಪ್ಪಾದೆ ನೋನ್ತಿಮ್ಬಿನಿನ್ ।
ಪ್ರಾಸಾದಾನ್ತರಮಾನ್ವಿಚಿತ್ರ ಕನಕ ಪ್ರಜ್ವಲ್ಯದಿನ್ಮಿಕ್ಕುದಾನ್
ಸಾಸಿರ್ವ್ವರ್ವ್ವರ ಪೂಜಿದನ್ದುಯೆ ಅವರ್ಸ್ವರ್ಗ್ಗಾಗ್ರಮಾನೇಱಿದಾರ್ ॥

ನಂ. 88— ಸುರಚಾಪಂಬೋಲೆ ವಿದ್ಯುಲ್ಲತೆಗಳ ತೆಱವೋಲ್ಮಂಜುವೊಲ್ತೋಱಿ ಬೇಗಂ
ಪಿಱಿಗುಂ ಶ್ರೀರೂಪಲೀಲಾ ಧನವಿಭವ ಮಹಾರಾಶಿಗಳ್ ನಿಲ್ಲವಾರ್ಗ್ಗಂ ।
ಪರಮಾರ್ತ್ಥಂ ಮೆಚ್ಚೆ ನಾನೀ ಧರಣಿಯುಳಿರವಾನೆನ್ದು ಸನ್ಯಾಸನಂ ಗೆ
ಯ್ದುರು ಸತ್ವನ್ನನ್ದಿಸೇನ ಪ್ರವರ ಮುನಿವರನ್ದೇವಲೋಕಕ್ಕೆ ಸಂದಾನ್ ॥

ರಚಕರು ಪ್ರೌಢ ಕವಿಗಳಾಗಿರಬೇಕೆಂಬುದನ್ನು ಅಲ್ಲಗಳೆಯಲಾಗದಂತೆಯೇ, ಅಭಿನವಪಂಪ, ಜನ್ನ, ಪುಷ್ಪಬಾಣನೂ ಎಂಬ ಕವಿಕಂದರ್ಪ ಬಾಳಚಂದ್ರ ಮೊದಲಾದ ಕನ್ನಡ ಮಹಾಕವಿಗಳು ಶಾಸನಪದ್ಯಗಳನ್ನೂ ರಚಿಸಿದ್ದರೆಂಬುದನ್ನು ಜ್ಞಾಪಕಕ್ಕೆ ತಂದುಕೊಂಡರೆ, ಶ್ರವಣಬೆಳ್ಗೊಳದ ಈ ಹಳೆಯ ಪದ್ಯಶಾಸನಗಳನ್ನು ರಚಿಸಿದವರು ಇವೊಂದೊಂದು ಪದ್ಯಗಳನ್ನು ಮಾತ್ರವಲ್ಲ, ಅವರಂತೆಯೇ ಕನ್ನಡ ಕಾವ್ಯಗಳನ್ನೂ ರಚಿಸಿರಬೇಕೆಂಬುದನ್ನು ಅಲ್ಲಗಳೆಯಲಾಗುವುದಿಲ್ಲ.

ಉದಾಹೃತವಾದ ಇವಲ್ಲಿ ಇಷ್ಟು ಪ್ರತ್ಯಕ್ಷವಾಗಿರುವ ದೀರ್ಘಾದೇಶವೇ ಮೊದಲಾದುವಲ್ಲದೆ—ಬಾಳಾಮೇಲ್; ದಂತಾಗ್ರದುಳ್; ನಡದೊಂ; ನೆಱಿದೊನ್, ಎಯ್ದಿದಾನ್; ಕಟ್ವಪ್ಪಿನಾ; ತಪ್ಪಾದೆ; ಪ್ರಾಸಾದಾಂತರಮಾನ್; ಮಿಕ್ಕುದಾನ್; ಸ್ವರ್ಗಾಗ್ರಮಾನ್; ಏಱಿದಾರ್; ಧರಣಿಯುಳ್; ಇರವಾನ್; ಸಂದಾನ್--ಆ ಶಾಸನ ಪದ್ಯಗಳಲ್ಲಿ ಈ ಕೆಲವು ಇನ್ನೂ ವಿಶೇಷಗಳಿವೆ—

೧. ನಂ. 27 ನೆಯ ಶಾಸನದ ಶಾರ್ದೂಲವಿಕ್ರೀಡಿತದ ಕೊನೆಯ ಚರಣದಲ್ಲಿಯೂ—

ಸಾಸಿರ್ವ್ವರ್ವ್ವರ ಪೂಜಿದನ್ದುಯೆ ಅವರ್ಸ್ವರ್ಗ್ಗಾಗ್ರಮಾನೇಱಿದಾರ್ ॥

೨. ನಂ. 31 ನೆಯ ಶಾಸನದ ಮಲ್ಲಿಕಾಮಾಲೆಯಲ್ಲಿ ೩ ನೆಯ ಚರಣದ ಅಂತ್ಯಾಕ್ಷರಕ್ಕೂ ೪ ನೆಯದರ ಆದ್ಯಕ್ಷರಕ್ಕೂ ಇತರತ್ರವೂ—

ವಿದ್ರುಮಾಧರ ಶಾನ್ತಿಸೇನ ಮುನೀಶನಾಕ್ಕಿ ಎ ವೆಳ್ಗೊಳ
ಅದ್ರಿ ಮೇಲಶನಾದಿ ವಿಟ್ಟಪುನರ್ಭವಕ್ಕೆಱಿ ಆಗಿ......... ॥

೩. ನಂ. 97 ನೆಯ ಶಾಸನದ ಮತ್ತೇಭವಿಕ್ರೀಡಿತದ ೩-೪ನೆಯ ಚರಣಗಳಲ್ಲಿಯೂ—

ನಮಗಿನ್ದೊರ್ದುಯೆನ್ದು ಪಿಱಿ ಗಿರಿಯಾನ್ ಸನ್ಯಾಸನಂ ಯೋಗದೊಳ್
ನಮೊಚಿನ್ತಯ್ದು ಶಿವನ್ತ್ರ ಮಣಱಿ . ಎ ಸ್ವರ್ಗಾಲಯಂ ಏಱಿದಾರ್ ||

೪. ನಂ. 106 ನೆಯ ಶಾಸನದ ಮತ್ತೇಭವಿಕ್ರೀಡಿತದಲ್ಲಿಯೂ—

ನವಿಲೂರಾ ಶ್ರೀ ಸಂಘದುಳ್ಳೆ ಗುರವಂ ನವಸ್ತಾನಿಯಾಚಾರಿಯರ್
ಅವರಾ ಶಿಷ್ಯರನಿನ್ದಿತಾಗ್ಗುಣಮಿ.... ವೃಷಭನನ್ದೀ ಮುನೀ |

ಸಂಧಿಯಾಗದಂಥಾ ಪ್ರಯೋಗಗಳಿವೆ.

೫. ನಂ. 22 ನೆಯ ಶಾಸನದ ಶಾರ್ದೂಲವಿಕ್ರೀಡಿತದಲ್ಲಿ ೞ-ಲ ಕಾರಗಳ ಪ್ರಾಸವಿದೆ—

ಬಾೞಾಮೇಲ್ ಶಿಖಿಮೇಲೆ ಸರ್ಪ್ಪದ ಮುಹಾದನ್ತಾಗ್ರದುಳ್ ಸಲ್ವವೊಲ್
ಸಾಲ್ರಾಮ್ಬಾಲ ತಪೋಗ್ರದಿನ್ತು ನಡದೊಂ ನೂಱೆಣ್ಬು ಸಂವತ್ಸರಂ |
ಕೇೞೊಯ್ಬಿನ್ ಕಟವಪ್ರ ಶೈಲಮುಡಱಿದ್ದೀ ನಮ್ಮಾ ಕಳನ್ತೂರನಂ
ಬಾಲೇ ಪೆರ್ಗ್ಗೊರವಂ ಸಮಾಧಿ ನೆಱೆದೊನ್ ನೋನ್ತೆಯ್ದಿದಾನ್ ಸಿದ್ಧಿಯಾನ್ ||

೬. ಕೊನೆಯ ಚರಣದಿಂದ ಮಹಾಸ್ರಗ್ಧರೆ ಎಂದು ತಿಳಿವ ನಂ. 84 ನೆಯ ಶಾಸನ ಪದ್ಯದಲ್ಲಿ—

ಅನವದ್ಯನ್ನದಿ ರಾಷ್ಟ್ರದುಳ್ಳೆ ಪ್ರಥಿತಯಶೋ.ನ್ದಕಾನ್ವನ್ಸು. ಲಾವನ್
ವಿನಯಾಚಾರ ಪ್ರಭಾವನ್ತಪದಿನ್ನಧಿಕನ್ನನ್ದ್ರ ದೇವಾಚಾರ್ಯನಾಮನ್ |
ವಿದಿತ ಶ್ರೀ ಕಟ್ವಪ್ಪಿನುಳ್ಳೇ ರಿಷಿಗಿರಿ ಶಿಲೆಮೇಲ್ ನೋನ್ತು ತನ್ದೇಹಮಿಕ್ಕಿ
ನಿರವದ್ಯನ್ನೇಱಿ ಸ್ವರ್ಗಂ ಶಿವನಿಲೆ ಪಡೆದಾನ್ ಸಾಧುಗಳ್ ಪೂಜ್ಯಮಾನನ್ ||

ಪ್ರಾಸವು ವಿಲಕ್ಷಣವಾಗಿದೆ ಮಾತ್ರವಲ್ಲ, 'ರಾಷ್ಟ್ರದುಳ್ಳೆ' 'ಕಟ್ವಪ್ಪಿನುಳ್ಳೇ' ಎಂಬಲ್ಲಿ ಸಪ್ತಮ್ಯರ್ಥದಲ್ಲಿ 'ಉಳ್ಳೆ(ೕ)' ಎಂದೂ 'ತನ್ನ ದೇಹ' ಎಂಬುದಕ್ಕೆ 'ತನ್ದೇಹ' ಎಂದೂ ಮೂರನೆಯ ಚರಣದ ಕೊನೆಯಲ್ಲಿ ಗುರ್ವಕ್ಷರವಿರಬೇಕಾದಲ್ಲಿ '(ಮಿ)ಕ್ಕಿ' ಎಂದೂ 'ನಿರವದ್ಯನ್ + ಏಱಿ' ಎಂಬಲ್ಲಿ ಪೂರ್ವ ಪದದ ಅಂತ್ಯದ ಅರ್ಧಾಕ್ಷರದ ದ್ವಿತ್ವದಿಂದ 'ನಿರವದ್ಯನ್ನೇಱಿ' ಎಂದೂ 'ಸಾಧುಗಳ್ ಪೂಜ್ಯಮಾನಾನ್' ಎಂಬಲ್ಲಿ ತೃತೀಯಾರ್ಥದ ಪ್ರಥಮಾ ವಿಭಕ್ತಿಯಾದ 'ಸಾಧುಗಳ್' ಎಂದೂ ಇದೆ.

೭. ನಂ. 98 ನೆಯ ಶಾಸನದ ಮತ್ತೇಭವಿಕ್ರೀಡಿತದಲ್ಲಿ, 'ಇಲ್ಲದ' ಎಂಬ ಅರ್ಥದಲ್ಲಿ 'ಇಲ್ಲಾ' ಎಂಬ ಪ್ರಯೋಗವಿದೆ—

ತಪಮಾನ್ ದ್ವಾದಶದಾ ವಿಧಾನಮುಖದಿನ್ಕೆಯ್ದೊನ್ದುತಾ ಧಾತ್ರಿಮೇಲ್
ಚಪಲಿಲ್ಲಾ ನವಿಲೂರ ಸಂಘದ ಮುಹಾನನ್ತಾಮತೀ ಗನ್ತಿಯಾರ್ |

ವಿಪುಲ ಶ್ರೀ ಕಟವಪ್ರ ನಲ್ಗಿರಿಯಮೇಲ್ ನೋನ್ತೊಂದು ಸನ್ಮಾರ್ಗ್ಗದಿನ್
ಉಪಮಿಲ್ಲಾ ಸುರಲೋಕ ಸೌಖ್ಯದೆಡೆಯಾನ್ ತಾಮೆಯ್ದಿ ಇಟ್ಟಾಳ್
ಮುನವರ್ ||

ಪಂಪ ಭಾರತದ ( IX. ೯೫ )

ಗುರುವಿಲ್ಲಾ ಕರ್ಣನಿಲ್ಲಾ ಗುರುವಿನ ಮಗನಿಲ್ಲಾ ಕೃಪಾಚಾರ್ಯನಿಲ್ಲಾ |

ಎಂಬ ಪದ್ಯದಲ್ಲಿ ಪ್ರಶ್ನಾರ್ಥದಲ್ಲಿ 'ಇಲ್ಲಾ' ಎಂಬ ಪ್ರಯೋಗವಿದೆಯಲ್ಲದೆ, 'ಇಲ್ಲದ' ಎಂಬ ಪ್ರತಿಷೇಧಾರ್ಥದಲ್ಲಿ ಅಲ್ಲ.

ಅದಲ್ಲದೆ ಅನನ್ತಮತಿ ಎಂದಿರುವ ಹೆಸರನ್ನು ಪ್ರಸ್ತಾರದ ಬಗ್ಗೆಯೇ ಆದರೂ ಅನನ್ತಾಮತಿ ಎಂದಾಗಿಸಿರುವಲ್ಲಿ ಪದದ ಒಳಗಡೆಯೂ ದೀರ್ಘಾದೇಶ ಪ್ರಯೋಗವಿದೆ.

೮. ನಂ. 70 ನೆಯ 'ಅದೆಯಱೆನಾಡ ಚಿತ್ತೂರ ಮೋನಿಗುರವಡಿಗಳ ಶಿಷಿತ್ತಿಯರ್ ನಾಗಮತಿ ಗನ್ತಿಯರ್' ಎಂಬ ಚಿಕ್ಕದೊಂದು ಗದ್ಯ ಶಾಸನದಲ್ಲಿ 'ಶಿಷ್ಯೆ' ಎಂಬ ಅರ್ಥದಲ್ಲಿ 'ಶಿಷಿತ್ತಿ' ಎಂಬ ಅಪೂರ್ವವಾದ ಸ್ತ್ರೀಲಿಂಗವಿದೆ.

ಇವಲ್ಲದೆ ಬರೆಹದಿಂದ ಕ್ರಿ. ಶ. 500 ರಿಂದ ಹಿಂದಿನದೆಂದು ನಿಶ್ಚಯಿಸಿರುವ ಚಿತ್ರದುರ್ಗ ನಂ. 43 ನೆಯ ( EC XI ) ತಮಟಕಲ್ಲಿನ ಶಿಲಾಲೇಖದಲ್ಲಿ ಒಂದೇ ಇರುವ ಈ ವೃತ್ತವೂ ಇದೆ—

ಫಣಿಮಣಿ ಅನ್ತು ಭೋಗಿ ಫಣದುಳ್ಮಣಿವಿಲ್ಮನದೋನ್
ರಣಮುಖದುಳ್ಗೆ ಕೋಲನೆರಿಯಕ್ಕರ್ಮನಿನ್ದ್ಯ ಗುಣನ್ |
ಪ್ರಣಯಿಜನಕ್ಕೆ ಕಾಮುನಸಿತೋತ್ಪಲ ವರ್ಣ್ಣನಿವನ್
ಗುಣಮಧುರಾಂಕ ದಿವ್ಯ ಪುರುಷನ್ ಪುರುಷ ಪ್ರವರನ್ ||

ಇದರ ಪ್ರತಿ ಚರಣದಲ್ಲಿ ೧೭ ಅಕ್ಷರಗಳು ಇರುವುದರಿಂದ ಅತ್ಯಷ್ಟಿ ಎಂಬ ೧೭ ನೆಯ ಸಂಸ್ಕೃತ ಛಂದಸ್ಸಿನಲ್ಲಿಯ ಈ ವೃತ್ತದ ಹೆಸರು ಕನಕಾಬ್ಜಿನಿ ಅಥವಾ ಕನಕಾಬ್ಜನೀಯ ಎಂದು ಛಂದೋಂಬುಧಿಯಿಂದ ತಿಳಿಯುತ್ತದೆ; ಆದರ ಮತ್ತೊಂದು ಪ್ರತಿಯಲ್ಲಿ ಇದನ್ನು ನರ್ಕಟ ಎಂದು ಹೇಳಿದೆ ( ಛಂದೋಂಬುಧಿ, ಪು. ೪೮; ಅಡಿಬರೆಹದಲ್ಲಿ 'ಅಧಿಕಪಾಠ' ). ಇದೂ ಸಂಸ್ಕೃತ ವೃತ್ತವೇ ಆದರೂ ಸಂಸ್ಕೃತ ಸಾಹಿತ್ಯದಲ್ಲಿ ಕಾಣದೊರೆವಂತೆ ನಾನರಿಯೆ.

ಯಾವೊಂದು ಭಾಷೆಯಲ್ಲಿ ಸಾಹಿತ್ಯವು ಸಾಕಷ್ಟು ಸಮೃದ್ಧವಾಗಿರದ ಮುಂಚೆ ಆ ಭಾಷೆಯಲ್ಲಿ ಶಾಸನಗಳು ರಚಿಸಲ್ಪಡವು, ಅದರಲ್ಲಿ ಪದ್ಯಸಾಹಿತ್ಯವು ಬೇಕಾದಷ್ಟು ಬೆಳೆದಿರದ ಮುಂಚೆ ಸಾವಿರಾರು ಮಂದಿಯ ಓದಿಕೆಯ ಬಗ್ಗೆ ತಿಳುವಳಿಕೆಯ ಬಗ್ಗೆ ತಾನೆ ಬಯಲಲ್ಲಿ ಬಹಿರಂಗವಾಗಿ ಇರಿಸಲ್ಪಡುವ ಶಿಲಾಲೇಖಗಳು ಪದ್ಯದಲ್ಲಿ ರಚಿಸ

ಲ್ಪಡವು ಎಂಬುದರೊಂದಿಗೆ ಈ ಮೇಲೆ ಕಂಡ ಶಿಲಾಲೇಖಗಳೆಲ್ಲವೂ ಪದ್ಯಬದ್ಧವಾಗಿವೆ, ಸಂಸ್ಕೃತ ವೃತ್ತಗಳಲ್ಲಿ ರಚಿತವಾಗಿವೆ, ಆ ವೃತ್ತಗಳೂ ವಿವಿಧವಾಗಿವೆ, ಅವಲ್ಲಿ ಹಲವು ಸಂಸ್ಕೃತ ಸಾಹಿತ್ಯದಲ್ಲಿ ದೊರೆಯವು, ಈ ಪದ್ಯಗಳಲ್ಲಿ ಸಂಸ್ಕೃತ ಶಬ್ದಬಾಹುಳ್ಯವಿದೆ, ಕರ್ಣಾಟಕ ವ್ಯಾಕರಣದ ಮಟ್ಟಿಗೆ ವಿಶೇಷ ಪ್ರಯೋಗಗಳೂ ಇವೆ ಎಂಬುದನ್ನೂ ಇವು ಎಲ್ಲವೆಂಬಂತೆ ಮೃತ್ಯುಲೇಖಗಳು (epitaphs) ಎಂಬುದನ್ನೂ ಪರ್ಯಾಲೋಚಿಸುವಲ್ಲಿ ಮೃತ್ಯುಲೇಖಗಳಾದ ಇವಲ್ಲಿರುವ ಒಂದೊಂದೇ ಪದ್ಯವಾದರೂ ಸಂಸ್ಕೃತ ವೃತ್ತದಲ್ಲಿ ರಚಿಸಲ್ಪಟ್ಟು ಇವಲ್ಲಿ ಇಷ್ಟರ ಮಟ್ಟಿಗೆ ಸಂಸ್ಕೃತವು ಸೇರಿರಬೇಕಾದರೆ, ಆರ್ಯಭಾಷೆಯ ಶಬ್ದಗಳು ಕನ್ನಡದಲ್ಲಿ ಇಷ್ಟರ ಮಟ್ಟಿಗೆ ಸರಾಗವಾಗಿ ಬಳಕೆಯಾಗಿರಬೇಕಾದರೆ, ಸಾರ್ವತ್ರಿಕವಾಗಿ ಎಂಬಂತೆ ಯಾವ ಭಾಷೆಯಲ್ಲಾದರೂ ಮೊತ್ತಮೊದಲಿನ ಸಾಹಿತ್ಯವು ಧರ್ಮವಿಷಯಕವೆಂಬ ಕಾರಣ, ಕರ್ಣಾಟಕದಲ್ಲಿ ನೆಲೆತ ಆರ್ಯ ಧರ್ಮಗಳು ನಾಡನುಡಿಯಲ್ಲಿ ಮಾತುಗೊಳತಕ್ಕಂತೆ, ಆ ಮೂಲಕ ಧರ್ಮಪ್ರಸಾರವಾಗತಕ್ಕಂತೆ, ಯಾವ ಹಿಂದಿನಿಂದಲೊ ಕನ್ನಡದಲ್ಲಿ ಅವಶ್ಯಮೇವ ಸಾಮಾನ್ಯ ವ್ಯವಹಾರಕ್ಕೆ ಬೇಕಾದಷ್ಟಾದರೂ ಪುಷ್ಟವಿದ್ದಿರಬೇಕಾದ ಅಚ್ಚಗನ್ನಡ ನುಡಿಗಳ ಬಂಡವಾಳವು ಆ ಧರ್ಮಗಳ ಭಾವಪ್ರಕಾಶನಕ್ಕೆ ಸಾಲದೆಂದೇನೋ, ಅವುಗಳ ಪಾರಿಭಾಷಕತೆಗೆ ಈಡಾಗದೆಂದೇನೋ ಕನ್ನಡ ಸಾಹಿತ್ಯದಲ್ಲಿ ಎರಕೊಳ್ಳಬೇಕಾದ ಸಂಸ್ಕೃತ ಶಬ್ದಗಳ ಕಡನಾದಾಯವು ಹೆಚ್ಚಿಬಂದಂತೆ ತಾನೆ ಹೀಗಾಗಬಲ್ಲುದಲ್ಲದೆ ಆ ಮುಂಚೆ ಅಲ್ಲ ಎಂಬುದರಿಂದ, ಕಟ್ಟೆ ಕುಸಿದ ಹೊಳೆಯಂತೆ ಒಮ್ಮಿಂದೊಮ್ಮೆ ಕೋಡಿವರಿಯದೆ ಬೆಟ್ಟದಿಂದ ತಲೆನೀರಂತೆ ಕನ್ನಡದಲ್ಲಿ ಬೇಕಾದಂತೆ ಹಾಯಿಸಲ್ಪಟ್ಟ ಸಂಸ್ಕೃತವು ಈ ಪದ್ಯಗಳಲ್ಲಿ ತೋರುವಷ್ಟರ ಪ್ರಮಾಣಕ್ಕೆ ಮುಟ್ಟಿರಲಿಕ್ಕೆ ಕೆಲವು ಶತಮಾನಗಳು ಹಿಡಿಯದಿರವು ಎಂದೂ ಬರಬರುತ್ತ ಕನ್ನಡ ಸಾಹಿತ್ಯವು ಬೆಳೆದು ಬರುವಂತೆ ಗುರ್ವಕ್ಷರಗಳು ಹೆಚ್ಚಾಗಿರುವ, ಮುಖ್ಯತಃ ಮೊತ್ತಮೊದಲಲ್ಲಿ ೩ – ೪ ಗುರ್ವಕ್ಷರಗಳಿರುವ, ವೃತ್ತಗಳು ಕನ್ನಡ ವಚೋಗ್ರಂಥನಕ್ಕೆ ಕ್ಲಿಷ್ಟವೆನಿಸಿದುದರಿಂದಲೇನೋ, ಅದಕ್ಕೂ ಮುಂಚಿನ, ಅಂದರೆ ಹೆಚ್ಚುಕಡಿಮೆ ಮೊತ್ತಮೊದಲಿನ ತಕ್ಕಷ್ಟು ಕಾಲದ, ಕರ್ಣಾಟಕ ಸಾಹಿತ್ಯದಲ್ಲಿ ಸಾಹಜಿಕವಾಗಿಯೂ ಅಪರಿಹಾರ್ಯವಾಗಿಯೂ ಬಳಸಲ್ಪಡುತ್ತಿರಬೇಕಾದ, ಸಂಸ್ಕೃತದಲ್ಲಿ ಬಹುತರವಾಗಿ ಪ್ರಯೋಗಿಸಲ್ಪಡುವ, ಸ್ರಗ್ಧರೆ – ಶಾರ್ದೂಲವಿಕ್ರೀಡಿತಾದಿಗಳ ಎಡೆಯಲ್ಲಿ ಸಂಸ್ಕೃತದಲ್ಲಿ ರೂಢಿ ಇಲ್ಲದ ಮಹಾಸ್ರಗ್ಧರೆ – ಮತ್ತೇಭವಿಕ್ರೀಡಿತಗಳೂ ಅವಕ್ಕಿಂತಲೂ ಕನ್ನಡ ಪದ್ಯರಚನೆಗೆ ಹೆಚ್ಚಿನ ಅನುಕೂಲತೆಯ ಉತ್ಪಲಮಾಲೆ – ಚಂಪಕಮಾಲೆಗಳೂ ಬಳಸಲ್ಪಡಲಿಕ್ಕೆ ಬಂದ ನಡುವೆ ಕೆಲವಾದರೂ ಕಾಲವು ಸಂದಿರಬೇಕೆಂದೂ ಕನ್ನಡದಲ್ಲಿ ನಿಸ್ಸಂದೇಹವಾಗಿ ಇದ್ದಿರಬೇಕಾದ ಹಲವೊ ಕೆಲವೊ ಅಚ್ಚಗನ್ನಡ ಛಂದಸ್ಸು

ಗಳು ಸಂಸ್ಕೃತ ಮಿಶ್ರವಾದ ಕನ್ನಡ ಪದ್ಯರಚನೆಗೆ ಸಲ್ಲವೆಂದೇನೋ ನೀಗಲ್ಪಟ್ಟು ಸಂಸ್ಕೃತ ಛಂದಸ್ಸುಗಳಲ್ಲಿ ರಚಿತವಾದ ಶಾಸನ ಪದ್ಯಗಳು, ಅವಲ್ಲಿಯೂ ವೃತ್ತ್ಯ ಲೇಖಗಳು ಇರಬೇಕಾದರೆ, ಆ ಮುಂಚಿನಿಂದಲೆ ಕನ್ನಡದಲ್ಲಿ ಸಾಹಿತ್ಯವಿದ್ದಲ್ಲದೆ ಹೀಗಾಗದೆಂದೂ ನಿಷ್ಪನ್ನವಾಗುವುದರಿಂದ, ಈ ಶಿಲಾಲೇಖಗಳಿಗೆ ಕಡಿಮೇ ಅಂದರೆ ೨–೩ ಆದರೂ ಶತಮಾನಗಳ ಹಿಂದಣಿಂದಲೆ, ಅಂದರೆ ಕ್ರಿ. ಶ. 2–3 ನೆಯ ಶತಕ ದಿಂದಲಾದರೂ ಸಂಸ್ಕೃತ ಮಿಶ್ರವಾದ ಹಾಗೂ ಸಂಸ್ಕೃತ ಛಂದೋಬದ್ಧವಾದ ಕನ್ನಡ ಸಾಹಿತ್ಯವಿದ್ದಿರಬೇಕು.

## VI

ಇನ್ನು ಕ್ರಿ. ಶ. 700 ರಿಂದ ಈಗ ಬಲ್ಲಷ್ಟುರಮಟ್ಟಿಗೆ ಎಷ್ಟರ ಹಿಂದೆ ವರೆಗೆ ಶಾಸನಗಳಲ್ಲಿ ಕನ್ನಡವಿದೆಯೋ ನೋಡೋಣ.

೧. ಬಾದಾಮಿಯ ಚಾಳುಕ್ಯ ವಿನಯಾದಿತ್ಯನ (ಕ್ರಿ. ಶ. 680–696) ಶಾ. ಶ. ೬೧೪ ನೆಯ ದಕ್ಷಿಣಾಯನ ಸಂಕ್ರಾಂತಿ ಶನಿವಾರ = ಕ್ರಿ. ಶ. 692 ಜೂನು 22 ನೆಯ ತಾರೀಕಿನ ಸೊರಬ ನಂ. 571 ನೆಯ ತಾಮ್ರಪಟ್ಟದಲ್ಲಿ (EC VIII)—

ಬನವಸಿಯ ಆನೆ ಸೆಟಿಯ ಅಳಿಯ ಬಸನ್ತಕುಮರ
ಎಡೆವೊಲಲ್ನಾಡ ಸಲೆವುಗೆಕೊಟ್ಟ ಶಾಸನಮು
ಪಡೆದು ಶನ್ತಪನ ಮಗ ದೇವೆಱ್ಱಿಯಗೆ ನಷ್ಟಪ್ಪ
ಗೊಣ್ಡು ಕೊಟ್ಟನದು ಮರಣನುವೊಕುಳಿಯಾನು
ಕೊಡಂಗೆಯಾಸು ಪೋಱಗಾಗಲೆ ಸಲೆವುಗೆಯ ಭಾಗ
ಕಂಮುಱ ವಸನ್ತಕುಮರ ಇದಕ್ಕೆ ಸಕ್ಷಿ ರೇವ ಮಗಾ
ವಿಗನು ಭವ ಗಮುಣ್ಡನು ಚನ್ದ ಗಮುಣ್ಡನು ಎಡೆವೊಲ
ಲ್ನಾಡು ಬನವಸಿಯ ನಗರಮುಂ ಸಕ್ಷಿ.... ದನಸಱ
ಊಳಿಗಂ ನಿಕೆವಟು ಕೊಟಂ. (ಬಂ. 27–31; 37–38).

೨. ವಿನಯಾದಿತ್ಯನಿಂದ ಆ ದತ್ತಿಯನ್ನು ವಿಜ್ಞಾಪಿಸಿಕೊಂಡನೆಂದು ('ಗುಣ ಸಾಗರಾಳುಪೇನ್ದ್ರಾತ್ಮಜ ಶ್ರೀ ಚಿತ್ರವಾಹನ ಮಹಾರಾಜ ವಿಜ್ಞಾಪನಯಾ') ಮೇಲಣ ಶಾಸನದಲ್ಲಿ (ಬಂ. ೨೦–೨೧) ಹೇಳಿರುವ ಚಿತ್ರವಾಹನನ ತೇದಿಯಿಲ್ಲದ ಕೊಪ್ಪ ನಂ. 37 ನೆಯ ಕಿಗ್ಗದ ಶಿಲಾಶಾಸನದಲ್ಲಿ (EC VI)—

ಕಿಱ್ಗಾನೇಶ್ವರದಾ ದೇವರ ಪರವರಿಯ ಭಂತಮುಂ
ಕವಿಲಿಯಪಾಲುಂ ಎಱ್ತುಂ.. ದೇವಾನ್ಧೇವನ ಪರಿ
ಜನವಲ್ಲಾಡೆ ಪೆಱಸೊರ್ವರಾರುಮುಂಜೆನ್ದೊ ಮೆಣ್ಡುಕಂ
ಇಸ್ತುಣ್ಪೋರುಂ ಉಣಿಯೆ ಕೊಡುವೋನುಂ ದೇವೆ

ಡಿತ್ತಿಯೆರಿನ್ದುಂ ಸಾಎರಿನ್ದುವರ್ ಆಭರಮೆತ್ತಿ
ಆಯು ತಿ ಎ ಕೊಳ್ವೋರುವರ್ ಮಣ
ವೆತ್ತೂರಾ ಮಾಸೆಲ್ಮಿಡೆಯುವರ್ ಪೋಗಿವೋಗಿ
ಕೊಳ್ವೊರುಂ ಕೊಣ್ಡು ಉಣ್ವೋರುಂ। ಪಞ್ಚ ಮಹಾ
ಪಾತನ ಸಂಯುತ್ತನಾಗಿ ಪೂತಿ ಎನ್ವ ನರಗಕ್ಕೆ ಸಲ್ಗೆ ॥
ಈನಿತ್ತ ಧರ್ಮ್ಮಮಾನ್ ಕಾದೋರಾ ಕುಲಂ
ಪೆಟ್ಬುಗೆ ॥ ಇತ್ಯಾದಿ ( ಬಂ. 2-8 )

ಇದರಲ್ಲಿ ಪೆಱನ್ ( = ಬೇರೆಯವನು ) ಎಂಬುದಕ್ಕೆ ' ಪೆಟನ್ ' ಎಂದೂ, ' ಪೆರ್ಚುಗೆ ' (= ಹೆಚ್ಚಲಿ ) ಎಂಬದಕ್ಕೆ ' ಪೆಟ್ಬುಗೆ ' ಎಂದೂ ಇರುವ ರೂಪಗಳನ್ನು ಗಮನಿಸುವುದು.

೩. ಈ ಚಿತ್ರವಾಹನನ ತಂದೆಯಾದ ಗುಣಸಾಗರನ ಕೊಪ್ಪ ನಂ. 38, ಅಂದರೆ ಮೇಲಣ ಶಾಸನದ ಹಿಂಭಾಗದಲ್ಲಿರುವ, ಲೇಖದಲ್ಲಿ ( EC VI )—

ಕಿಱ್ಗಾನದೇವಕೆ ಎಲ್ಲವಮಾನ್ ಸರ್ವ ಪರಿಹಾರಂ ಬಿಟ್ಟ
ಮೊದಲಿನ ನಿತ್ತೋರ್ ನಿತ್ತನ್ತೆ ಬಿಟ್ಟ ಆದಾನಱಿ
ವೋರುಂ ಅಱಿವಲ್ಪಟ್ಟುದೋರ್ ಮನದೆ ನೆನೆವೋರುಂ
ಅಱಮೆನೆನ್ದು ಪಾದೇಶಂ ಕೊಡುವೋರುಂ ಪಞ್ಚ
ಮಹಾಪಾತಕ ಸಂಯುಕ್ತರಪ್ಪಾರ್। ರಾಜದಣ್ಡ
ಮುಮೆಯ್ದೆಪ್ಪಡುವಾರ್ ( ಬಂ. 5 – 13 ).

೪. ಅದೇ ಚಳುಕ್ಯ ವಿನಯಾದಿತ್ಯನ ತೇದಿಯಿಲ್ಲದ ಸೊರಬ 15ನೆಯ ಶಿಲಾ ಲೇಖದಲ್ಲಿ ( EC VIII )—

' ಕೊಡುಕನಿಯ ಮಹಾಜನಕ್ಕೆ ಸರ್ವ್ವ ಬಾಧಾಪರಿಹಾರ ಬಿಟ್ಟಿ
ಆ ಮೂವ.... ದೇವಪದಮಾಗೆ ಅಮೋಘ ಅವಿಚಾರ
....ನಾಲ್ಕನೆವಾಗರಾ ಎರೆವಡಿಗಳಾ ಸುಪುತ್ರ....ಳಾ
ಮಾಡಿ ಬಿಡಿಸಿದಾರು ಸೆಸ್ಥಿ ಅನಱಿದೊನ್ ಪಞ್ಚ
ಮಹಾಪಾತಕ ಸಂಯುಕ್ತಂನಕ್ಕು' ಇತ್ಯಾದಿ ( ಬಂ. 3 – 9 ).

೫. ಆ ವಿನಯಾದಿತ್ಯನ ಆಳಿಕೆಯ ತೇದಿಯಿಲ್ಲದ ಶಿಕಾರಿಪುರ 154 ನೆಯ ಶಿಲಾಲೇಖದಲ್ಲಿ ( EC VII )—

ಶ್ರೀ ಪೊಗಿಲಿ ಸೆನ್ದ್ರಕ ಮಹಾರಾಜರ್ ನಾಯರ್ಖಣ್ಡಮುಂ
ಜೆಳುಗೂರಾಳ್ಗೆಯನಾಳುತ್ತು ಕಾನ್ದಬೋರರಧಿಕಾರಿ
ಗಳಾಗೆ ಪೆರಿಯಾ ಒಸಗೆಯುಂ ಆಲವಣವುಂ
ಅಪುತ್ರಕ ಪೊರುದುಮಾನ್ ವಿಟ್ಟಾರ್ ವಳಿಗ್ರಾಮೆ
ಯರ ದಾಸಡಿಯುಂ ಅಮಲಿಯರ ದೇವಡಿಯುಂ

ವೆದೆವಳ್ಳಿಯುರಾ ದೇವಡಿಯುಂ ಅಲಂವಳ್ಳಿಯರಾ
ರವಿಚನ್ದನುಂ ಸೊಕ್ಕಗಾಮುಣ್ಡರುಂ ಎದೆಯ
ಗಾಮುಣ್ಡರುಂ ಮೊಳೆಉರಾ ಮಣಿಯ ಗಾಮುಣ್ಡರುಂ
ನಾವಳ್ಳಿಯರುಂ ಅಣ್ಡುಗಿಯಾ ಗಾಮಿಗರುಂ
ನೀರಿಲ್ಲಿಯಾ ಸಿನ್ದಱಗಾಮಿಗರುಂ ಮುಖಮಾಗೆ
ಎರಡುಂ ನಾಱ್ಕಿ ರಾಜಶ್ರಾವಿತಮಾಗೆ ಪ್ರಸಾದವಂ ಕೆಯ್ದಾರ್' ಇತ್ಯಾದಿ
(ಬಂ. 3-12)

೬. ಈ ವಿನಯಾದಿತ್ಯನ ತಂದೆ ಚಳುಕ್ಯ I ವಿಕ್ರಮಾದಿತ್ಯನ (ಕ್ರಿ. ಶ. 654-680) ತೇದಿಯಿಲ್ಲದ ಸಾಗರ 79ನೆಯ ಶಿಲಾಲೇಖದಲ್ಲಿ (EC VIII)—

ಸ್ವಸ್ತಿ ಶ್ರೀ ವಿಕ್ರಮಾದಿತ್ಯ ಭಟರಕ.... ಚೆನ್ದುಗೋಳಿವಳಿಯರಾ
ದಿಲಿ.... ಳಿಗಳ್ಗೆ ಕೊಟ್ಟ ಭೂಮಿ ವಿವರಳ್ಕೆ.... ಬ್ದು.... ಥರ
ಉಣ್ಡದು ಅ.... ಕೊಟ್ಟೊ ಸರ್ವ.... ನಱಿದೊಪ್ಪ ಇಟ್ಟ ಮಹಾ
........ಸಂಯುಕ್ತರಪ್ಪರವಾದ.... ದೋಸ' (ಬಂ. 1-9)

೭. ಬರೆಹದಿಂದ ಕ್ರಿ. ಶ. 7 ನೆಯ ಶತಮಾನದ ನಡುಗಾಲದ ಶಾಸನವೆಂದು ನಿಶ್ಚಯಿಸಿರುವ ಗದ್ದೆಮನೆಯ ವೀರಗಲ್ಲಿನಲ್ಲಿ (Mysore Arch. Report 1923, ಪು. 83, ನಂ. 72)—

'ಸ್ವಸ್ತಿ ಶ್ರೀ ಶೀಲ ಆದಿತ್ಯನ್ ದಿಶಾವು್ ಭಗ್ಗ್ರನಾಕೆವಾಳನ್ ಅಗ್ಗಳ
ಕಂಟಕನ್ ಪೇರಾಳ್ಕೆವರೆ ಪೆತ್ತಣಿ ಸತ್ಯಾಂಕನ್ ಅಟ್ಟುಳ್ವ
ಭಟನ್ ಬೆದರೆ ಮಹೇಂದ್ರನ್ ಬೇಡರ ರಾಯರ ಮುಲಪ್ಪರ
ಕಾಳೆಗದುಳೆ ವಿಱಿದು ಸ್ವರ್ಗಾಲಯಕ್ಕೇಱಿದನ್ ಬೆಳೆಯ
ಮಾಱಕಾದೊನ್ ಕಲ್ಯಾಣಮುಕ್ಕೆ ಅಱಿವೊಂ ಪಣ್ಟಮು....' (ಬಂ. 1-4)

೮. ಶಾ. ಶ. ೫೫೬ನೆಯ ಚೈತ್ರ ಶುಕ್ಲ ದಶಮಿ ಗುರುವಾರ =ಕ್ರಿ. ಶ. 633 ಮಾರ್ಚಿ 25 ನೆಯ ತಾರೀಕಿನ ತಲಕಾಡಿನ ಪಶ್ಚಿಮ ಗಂಗರಸ ಭೂವಿಕ್ರಮನ ಬೆದಿರೂರು ತಾಮ್ರಪಟ್ಟದಲ್ಲಿ (Mysore Arch. Report 1925, Appendix C, ಪು. 45-46)—

'ಅಸ್ಯ ಸೀಮಾಃ ಕರ್ನಾಟಕೇ ಪ್ರವಕ್ಷ್ಯಾಮಿ ಪೂರ್ವಾಯುಂ
ದಿಶಿ ಕೊಳತ್ತೂರ ಉತ್ತನೂರ ಮುಕ್ಕೂಟಲ ಅರುಣೋನ್ನತ
ಭೂಮಿ ಸಮೀಪೇ ಅರ್ಧ ಚಂದ್ರಾಕಾರದ ಕೊಳ ಅಲ್ಲಿಂದಂ
ತೆಂಕಲು ಮೋಯ್ಯರ್ ಮಾಳಸಮೂಹಂ ಅಲ್ಲಿಂದ
ತೆಂಕಲು ಬೆದಿರೂರ ತೊರೆವೊಂದು ಕೂಡಿದ ಪೆಯಿನಕೆರೆಯ
ಜಲಾಶಯಂ ಅಲ್ಲಿಂದ ಪಡುವಲು ಅರುಣಪಾಷಾಣಪಙ್ಕ್ತಿ
ಸಹಿತೋನ್ನತ ಭೂಮಿ ಅಲ್ಲಿಂದ ಪಡುವಲುನ್ನತ ಭೂಮಿ
ಪಶ್ಚಿಮಃ ಪೂವ(ರ್)ದ ಬಾಲಚಂದ್ರಾಕಾರದ ಕೊಳದ
ಸಮೀಪದ ಸಂಚರಿವಳ್ಳ' ಇತ್ಯಾದಿ (ಬಂ. 39-54)

೯. ಬಾದಾಮಿಯ ವೈಷ್ಣವ ಗವಿಯ ಹೊರಗಣ ಬಂಡೆಯಲ್ಲಿ ಕೆತ್ತಿರುವ ಚಳುಕ್ಯ ಮಂಗಲೇಶನ ( ಕ್ರಿ. ಶ. 597 – 609 ) ಶಾಸನದಲ್ಲಿ[೧]—

ಸ್ವಸ್ತಿ ಶ್ರೀಮತ್ ಪ್ರಿಥಿವೀವಲ್ಲಭ ಮಂಗಲೀಸನಾ ಕಲ್ಮನೆಗೆ
ಇತ್ತೊದು ಲಂಜಿಗೇಸರಂ ದೇವಕ್ಕೆ ಪೂನಿಱುವ ಮೂಲ
ಕಾರಗ್ಗೆ ಅರ್ದ್ಧವಿಸದಿ ಇತ್ತೊದಾನಱಿವೊನ್ ಪಞ್ಚ
ಮಹಾಪಾತಕನಕುಂ ಏೞನೆಯಾ ನರಕದಾ ಪುೞುಅಕುಂ.

೧೦. ಬನವಾಸಿಯ ಕದಂಬ ವಂಶದ II ಕೃಷ್ಣವರ್ಮನ ( ಕ್ರಿ. ಶ. 422-ಕ್ರಿ. 455 )[೨] ಮಗ ಅಜವರ್ಮನ ಮಗನಾದ ಭೋಗಿವರ್ಮನ ತೇದಿಯಿಲ್ಲದ (ಕ್ರಿ. ಶ. 500 ರ ಆಚೀಚೆಯ) ತಗರೆಯ ತಾಮ್ರಪಟ್ಟದಲ್ಲಿ (Mysore Arch. Report 1918, ಪು. 35 )—

‘ ಕಿಱು ಕೂಡಲೂರ ಮೂವತ್ತಾಎರಡು ಸರ್ವ್ವ ಪರಿಹಾರಂ
ಓಂ ತಗರೆಯಾ ಪೆರ್ಗೆಱೆಯಾ ಮೊದಲ್ ಗೆಱೆ ಮೂವಂತಾ
ಎರಡಂ ಸರ್ವ ಪರಿಹಾರಂ ವಡೆಗೈಗೇರಿ ಮನೆ
ಧನಂ ಭೂಮಿದಾನಂ ಕೊಟ್ಟಂ ಇದಾನ್ ಕಾವೊಂಗೆ
ಕಿಱ್ತ್ತವೊರಲ್ ಪಿಣ್ಣಗ್ಗೆ ಕೊಟ್ಟೊ ಪೆರಿಯಾಡಿಗಳ್
ಕಿಱುಕೂಡಲೂರಂ ಕೆಱೆಯ ಕೆೞಗು ಸಮುಭ ( = ಭಾ )ಗ
ಶ ( = ಸಾ )ಕ್ಷಿ ಮಣಿಯ ಭಳ್ಳವಿಯುಮ್ ಅಮೂಲ ’ ( ಬಂ. 16–20 );

೧೧. ನಿರ್ವಿನೀತನೆಂದೂ ಶಾಸನಗಳಲ್ಲಿ ಹೆಸರಿಸಲ್ಪಟ್ಟಿರುವ ಗಂಗರಸ ದುರ್ವಿನೀತನ (ಕ್ರಿ. ಶ. 478- ಸು. 520)[೩] ಮಗನಾದ ( ‘ ನಿರ್ವಿನೀತಸ್ಯ ಶ್ರೀಮತ್ಕೊಂಗಣಿ ಮಹಾರಾಜಸ್ಯಾತ್ಮಜೇನ ’ ) ಪೂಲವೀರನೆಂಬವನ ತೇದಿಯಿಲ್ಲದ ( ಕ್ರಿ. ಶ. ಸು. 520 ರಿಂದ 550 ರೊಳಗಣ ) ತಗರೆಯ ತಾಮ್ರಪಟ್ಟದಲ್ಲ (Mysore Arch. Report 1918, ಪು. 35 – 36 )—

‘ ಇದರ್ಕೆ ನಲವೇಡುವೊನ್ ಪುಣ್ಯಭಾಗಿ ಅಕೆ ಕೇಡು
ವೇಡುವೊನ್ ಪಞ್ಚ ಮಹಾ ಪಾತಕನಕೆ ಕೋವಿ
ರೆಡಿ ಮೌರಡಿ ( ಮನುರೆಡಿ ) ಒಡೆ ಕೋವಿಸಟ್ಟೇ
ಕೋವಿ ತೋಱೆ ಪೂಲ ’ ( ಬಂ. 19 – 20 );

೧೨. ಅದೇ ನಿರ್ವಿನೀತನೆಂಬ ದುರ್ವಿನೀತನ ಕಿರಿಯ ಮಗನೆಂದಲ್ಲದೆ ಸ್ವಂತ ಹೆಸರನ್ನು ಹೇಳಿಲ್ಲದ ಗಂಗರಸನ ಕಾಲದ ತೇದಿಯಿಲ್ಲದ ( ಕ್ರಿ. ಶ ಸು. 520ರಿಂದ 550 ರೊಳಗಣ ) ಸಿರಗುಂದದ ಶಿಲಾಶಾಸನದಲ್ಲಿ ( EC VI, ಚಿಕ್ಕಮಗಳೂರು 50 )—

೧. Indian Antiquary X ( 1881 ), ಪು. 60. ೨. Journal of Indian History (JIH) XIII ಪು. 164 ೩. Karnatak Historical Review (KRH) II. ಪುಟ 1—36.

ಸ್ವಸ್ತಿ ಶ್ರೀ ನಿರ್ವ್ವಿನೀತರಾ ಕಿಱಿಯಾ ಮಗನ್ದಿರ್
ಕಾಡುವಟ್ಟಿಯರಿನ್ದವರ್ ವಲ್ಲವರಸರಿನ್ದ
ಐಕ್ಕೊಕೊಱಕ್ಕೊಣಿ ಪಟಂಸೂಡಿದೊರ್ ಅನುಜೊ
ಇನ್ದು ಕನಲ್ಗೊಳ್ಪಿ ನನ್ದಿಯಾಲರಾ ವಿಟ್ಟದು ಪಡೆ
ನ್ಯೆಲಾಮು ಅಮುಸ ಪಾಲುವರ್ ಇವಾನಱಿದೊನ್
ನಾಳನ( ಱಿ )ವುದೊ ಪಞ್ಚ ಮಹಾಪಾತಗಮುಕ್ಕುಂ
ಸ್ವಸ್ತಿ ಶ್ರೀ ಅವ್ವೋರಯ್ಪದಿವಕ್ಕರ್ ಪದಿರ್ಕಣ್ಣಡಿಗ
ನಲ್ವತ್ತ....... ಮರಮುಸುಕೆಯೆ
ಇ ಉರಾ ಸುಕನ್ದೇವತು ( ಬಂ. ೧ – ೮ )

೧೩. ಗಂಗ ದುರ್ವಿನೀತನ ( ಕ್ರಿ. ಶ. 478 – ಸು. 520 ) ಆಳಿಕೆಯ ೨೦ ನೆಯ ವರ್ಷದ, ಅಂದರೆ ಕ್ರಿ. ಶ. 497 ನೆಯ ಉತ್ತನೂರಿನ ತಾಮ್ರಪಟ್ಟದಲ್ಲಿ ( Mysore Arch. Report 1917, ಪು. 29 – 30 )—

‘ ಉದಕಪೂರ್ವ್ವಂ ದತ್ತ ಪೊಲ ಮೇರೆ ಪ್ರಾಚೀ ದೆಸೆ
ಪನೆಡ್ಗುಣ್ಟೆಯಿನ್ಮೂಡಾಯ್ಕುಡೆಗೋಡು ಆಗ್ನೇಯ
ದೆಸೆ ಪುಳ್ಳಿಯುಱಿ ದಕ್ಷಿಣ ದೆಸೆ ತಳ ಅಣ್ಣಯ್
ನೆರಿತ್ತಿ ದೆಸೆ ನೆಲಮುಱುತ್ತಗೂರ್ಪತೀಚೀ
ದೆಸೆ ಪೆದ್ದಾಣ ಎ ವಾಯುವ್ಯಾ ದೆಸೆ ಪೆಱುದಣ್ಣ
ಲಿನ್ಬಡಕಾಯ್ಕಾಕು ಉದೀಚೀ ದೆಸೆ ಕೆಱಿಯಿ
ನ್ಸೀಗೊರ್ರೆ ಮುಟ್ಟೆ ಈಶಾನ ದೆಸೆ ಅರನೆಱು
ಒಡವರ್ ’ ( ಬಂ. 19 – 53 );

೧೪. ಗಂಗ ದುರ್ವಿನೀತನ ಸೋದರಮಾವನಾದ ಪುನ್ನಾಟದ ಕೊನೆಯ ಅರಸ ರವಿದತ್ತನ ( ಕ್ರಿ. ಶ. 470 – 495 ) ಕ್ರಿ. ಶ. 491 ನೆಯ[೧] ಕೊಮರಲಿಂಗದ ತಾಮ್ರಶಾಸನದಲ್ಲಿ (Indian Antiquary, XVIII, 1889, ಪು. 366-68)—

‘ ಇಂತಿ ಇವ್ವೊರ್ಗ್ಗರ್ವರ್.... ಪೂರ್ವಸ್ಯಾಂ ದಿಸಿ ಕಮ್ಮಾ
ತ್ತಿವಾಯ ಅಲ್ಲಿಂ ವೀತ್ತರ್ಗಂದ ಕೊಲ್ಲಿಯ ಪಳಂ ಪೆಯಾಲೆ
ತುಱಿದ್ದಲ್ಗಾಲಾ ಮೂಟಾಯೊಟ್ಟಿ ಎ ಬೆಳ್ಳದೆ ಗಲ್ಲ
ಮೂಟಾಯ ಪೊರೆಎ ಬಂದು ತೆರುಣ ಬಾಲ್ಲಿಯ ಬಂದು
ಎಳಗೊವನೂರ ಬಡಗಣ ಸಿ ( ೯ ) ಮೆಯುಳ್
ಕು( ಕೂ )ಡಿ ದಕ್ಷಿಣಸ್ಯಾನ್ದಿಸಿ ಕಱುಪೊಱಿಕ್ಕಾಲ್
ತೆನ್ನೆ ( ನ್ನೊ )ಟ್ಟಿ ತಳ....’ ಇತ್ಯಾದಿ ( ಬಂ. 20 – 28 );

---

೧. ಮಂಗಳೂರಿನ ‘ ಪ್ರಭಾತ ’ದ ದಸರಾ ಸಂಚಿಕೆ 1938, ಪು. ೩೦ – ೩೯.

೧೫. ಪುನ್ನಾಟದ ರವಿದತ್ತನ ಮುತ್ತಜ್ಜನ ಅಣ್ಣನಾದ I ಸ್ಕಂದವರ್ಮನ (ಕ್ರಿ. ಶ. 400 – 420) ಕ್ರಿ. ಶ. 413 ನೆಯ ಬಸವನಪುರದ[೧] ತಾಮ್ರಪಟ್ಟದಲ್ಲಿ (Mysore Arch. Report 1936, ಪು. 126 – 127)—

'ಪೂರ್ವಸ್ಯಾನ್ದಿಶಿ ತುಱ್ದಲ್ಗಾಲೆ ಅನ್ತೆ ಬನ್ದು ಕಳರಾ
ಬಾಯ್ಕಾಲುಳ್ ಕೂಡಿ ಅನ್ತೆ ಬನ್ದು ನೆಱಿಲ್ಗಾಲೆ ಅನ್ತೆ
ಬನ್ದು ಕೊಣ್ಡನ್ದಗಾಲೆ ಅನ್ತೆ ಅಂಕೋಲೆಗಾಲೆ ಅನ್ತೆ
ಬನ್ದು ತೊಱೆಯುಳ್ ಕೂಡಿತ್ತು ದಕ್ಷಿಣಾದೆಸೆಗೆಲ್ಲಂ
ತೊಱೆಎ ಅನ್ತೆ ಬನ್ದು ಪಶ್ಚಿಮಾದೆಶೆಗೆಲ್ಲಂ ಮತ್ತಂ
ತೊಱೆಎ ಅನ್ತೆ ಬನ್ದು ಉತ್ತರಸ್ಯಾನ್ದಿಶಿ ಕೊಟ್ಟು
ಗೂಡಲೆ ಅನ್ತೆ ಬನ್ದು ಮೂಡಾಯಿನ್ ಬೀೞ್ತನ್ದ
ನೀರಿಬಂವೆ ಅನ್ತೆ ಬನ್ದು ತೊಲ್ಮೊರಡಿಎ ಕಲ್ಕುಪ್ಪೆಎ
ಅನ್ತೆ ಬನ್ದು....' ಇತ್ಯಾದಿ (ಬಂ. 24 – 29);
ಇ ದರ್ಮ್ಮಕ್ಕೆ ಬಕ್ರಬಪ್ಪೊಂ ಬಾರಣಾಸಿಯುಳ್
ಸಾಸಿರ್ವ್ವರ್ ಪಾರ್ವ್ವರುಂ ಸಾಸಿರ ಕವಿಲೆಯುಂ ಕೊನ್ದ
ಪಾತಕನಕ್ಕೆ (ಬಂ. 34 – 35);

ಇದರಲ್ಲಿರುವ 'ಬಾಯ್ಕಾಲ್' ಎಂಬ ಶಬ್ದವನ್ನು ಗಮನಿಸಬಹುದು. ಇದು ಹಳೆಯ ಶಾಸನಗಳಲ್ಲಿ ದೊರೆಯುತ್ತದೆ. ಇದೇ ಮುಂದೆ ('ಕಾಲ್ + ಬಾಯ್' =) ಕಾಲ್ವಾಯ್ ಎಂದು ಹಿಂದುಮುಂದಾಗಿ, ಅದು ಕಾಲ್ವೆ—ಕಾಲುವೆ = Canal ಎಂದು ಆಯಿತೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

೧೬. ಗಂಗ ದುರ್ವಿನೀತನ ಅಜ್ಜನಾದ ಗಂಗರಸ ತಡಂಗಾಲ II ಮಾಧವನ (ಕ್ರಿ. ಶ. 349 – ಸು. 403)[೨] ಆಳ್ವಿಕೆಯ ಕ್ರಿ. ಶ. 352 ನೆಯ ಶಿಕಾರಿಪುರ ನಂ. 52 ನೆಯ ತಾಗರ್ತಿಯ ತಾಮ್ರಪಟ್ಟದಲ್ಲಿ[೩] (EC VII)—

'ಆದಿವಾರದನ್ದು ಕಾರೆನಾಡ ದೇವನೂರನುಳ್... ಯರ
ಕುಳದ ಮಧಿಗವುಡನ ಸುಪುತ್ರ ರಾಮದೇವನು (?)
ಹೆಙ್ಗಱನಿಱಿದು ರಾಜಮಲ್ಲನ ಹೆಣ್ಡತಿ ಭಂಟರವನು (?)
ಬಲ್ಲಳ ತಿಂದೊಪ್ಪಿಸಿದಲ್ಲಿಗೆ ಮೆಚ್ಚುಕೊಟ್ಟ ಭೂಮಿ' ಇತ್ಯಾದಿ (ಬಂ. 10–22);

೧೭. ಇದೇ II ಮಾಧವನ 'ವೈಶಾಖ ಪೌರ್ಣಮಾಸ್ಯಾಮ್' ಎಂದಲ್ಲದೆ ತೇದಿಯ ಬೇರೆ ವಿವರವಿಲ್ಲದ ಕೆರೆಗಾಲೂರು ತಾಮ್ರಪಟ್ಟದಲ್ಲಿ (Mysore Arch. Report 1930, ಪು. 114)—

'ಶ್ರೀ ಕೊಡಲೂರಾ ನಾಗಂಣನಾ ಕೃತಮಿದಂ' (ಬಂ. 34);

---

೧. ಮಂಗಳೂರಿನ 'ಪ್ರಭಾತ'ದ ದಸರಾ ಸಂಚಿಕೆ 1938, ಪು. ೩೧–೩೯. ೨. KHR, II. 1. ಪು. 1—36 ೩. ಮಂಗಳೂರಿನ 'ಸ್ವದೇಶಾಭಿಮಾನಿ' ಯ ದಸರಾ ಸಂಚಿಕೆ 1935, ಪು. 8

೧೮. ಈ ತಡಂಗಾಲ II ಮಾಧವನ ಮುತ್ತಜ್ಜನಾದ ಗಂಗರಸ I ಮಾಧವನ (ಕ್ರಿ. ಶ. ಸು. 2೩3 – 309)[೧] ಕ್ರಿ ಶ. 301 ನೆಯ ನಂದಿಯ ನಂ. ೧ ನೆಯ ತಾಮ್ರ ಪಟ್ಟದಲ್ಲಿ ( Mysore Arch. Report 1914, ಪು 27 )—

'ಮಾಧವ ಮಹಾಧಿರಾಜರ್ ಕೊಠದು ತಮ್ಮಾ ಕುಲ
ಬ್ರ(ಬ್ರಾ) ಹಮ್ಮಣಕ್ಕಂಗ ಮ(ಂ)ಗಲವರ್ಕ್ಕೆ ಕೊಣ್ಣಂದ
ನಾಮುಗೋತ್ರಸ್ಯ ಗತ್ತಿವಮ್ರ್ಮ ಪಡೆತದು ಮೊರಸನಾಡ
ಪೆರಪ್ಪುಸುರ ನಾಮುಗ್ರಾಮಂ ಅದಱ ತಟ( ಟಾ ) ಕದಾ
ವಟಗಯ್ಕಡೆ ಕೊಟ್ಟ ಮೂಡಾಯ್ ದಿಸೆಯುದು
ಕಡೆ ಕೊಟ್ಟೂರ್ ನಾಮುಗ್ರಾಮಂ ಅದರ್ಕೆ ಅ ಪುಸುರಾ
ತದ( ಟಾ ) ಕದ ಕೆಱಗೆ ದಸಕಂಡುಗಂ ಮಣ್ಣುದಱಾ
ಒಡೆಯುದು ತನಗೆಯುಂ ಆಱುತೊಡಿ ವಿಟ್ಟು
ಉಟಿಲ್ ಪೆಱುಗುಂ ಆಗುಳದಾರಸ್ಯ ಆಗುಳದಾರಂ
ವೆಸಸಿದಲ್ಲಿಗೆ ಸಂದಿಪ್ಪ್ರದು' ( ಬಂ. 9 – 15 ); ಶ್ರೀ
ಪಾಲನ್ ಲಿಖಿತಂ ( ಬಂ. 18 );

೧೯. ಬನವಾಸಿಯ ಕದಂಬ ವಂಶದ ಕಾಕುತ್ಸ್ಥವರ್ಮನ ಆಳೊತ್ತಿನದೆಂದು ತೋರುವ, ಹಾಗಾದರೆ ನಾವು ಆತನ ಆಳಿಕೆಗೆ ನಿಶ್ಚಯಿಸಿರುವ[೨] ಕ್ರಿ. ಶ. 265 ರಿಂದ 282 ರೊಳಗೆ ಹುಟ್ಟಿದ ಹಲ್ಮಿಡಿಯ ಶಿಲಾಲೇಖದಲ್ಲಿ ( Mysore Arch. Report 1936, ಪು. 73 )—

ಶ್ರೀಮತ್ಕದಂಬಪನ್ ತ್ಯಾಗಸಂಪನ್ನನ್ ಕಲಭೋರನಾ ಅರಿ
ಕಕುಸ್ಥ ಭಟ್ಟೋರನಾಳೆನರಿದಾವಿ( ಳೆ ) ನಾಡುಳ್
ಮೃಗೇಶನಾಗೇನ್ದ್ರಾಭೀಳರ್ ಭಟಹರಪ್ಪೋರ್
ಶ್ರೀ ಮೃಗೇಶನಾಗಾಹ್ವಯರಿರ್ವ್ವರಾ ಬಟರಿ ಕುಲಾಮಲ
ವ್ಯೋಮ ತಾರಾಧಿನಾಥನ್ನಳಪಗಣ ಪಶುಪತಿಮಾ
ದಕ್ಷಿಣಪಥ ಬಹು ಶತವಹನಾಹವದುಳ್ ಪಶು
ಪ್ರದಾನ ಶೌರ್ಯೋದ್ಯಮ ಭರಿತೋ( ನ್ದಾನ ) ಪಶುಪತಿ
ಯೆನ್ದು **ಪೊಗಟಿಪ್ಪೊಟ್ಟಣ** ಪಶುಪತಿ ನಾಮಧೇಯ
ನಾಸರಕ್ಕೆಲ್ಲ ಭಟರಿಯಾ ಪ್ರೇಮಾಲಯಸುತನ್ಗೆ
ಸೇನ್ದ್ರಕಬಣೋಭಯದೇಶದಾ ವೀರಾಪುರುಷ
ಸಮಕ್ಷದೆ ಕೇಕಯ ಪಲ್ಲವರಂ ಕಾದೆಱಿದು ಪೆತ್ತ
ಜಯನಾ ವಿಜ ಅರಸನ್ಗೆ ಬಾಳ್ಗಳ್ಚಿ ಪಲ್ಮಡಿಉಂ
ಮೂಱವಳ್ಳಿಉಂ ಕೊಟ್ಟಾರ್. ಬಟಾರಿಕುಲದೊನಳು
ಕದಮ್ಬನ್. ಕಳ್ದೊನ್ ಮಹಾಪಾತಕನ್. ಇರ್ವ್ವರುಂ

೧. KHR. II. 1. ಪು. 1—36. ೨. JIH. XIII, ಪು. 148.

ಸಜ್ಬಿಗ್ಗದರ್ ವಿಜಾರಸರುಂ ಪಲ್ಮಡಿಗೆ ಕುಱಿ
ಮ್ಬಿಡಿ ವಿಟ್ಪಾರ್ ಅದಾನಳಿವೊನ್ಗೆ ಮಹಾಪಾತಕವರ್
ಭಟ್ಟರ್ಗ್ಗೆ ಗಟ್ದಿ ಒಡ್ಡಲಿ ಆಪತೊಸ್ದಿ ವಿಟ್ಟರಕರ (ಬಂ. 2-16)

ಈ ಶಾಸನದಲ್ಲಿ ಮಿಕ್ಕ ಹಲವು ಹಳೆಯ ಪ್ರಯೋಗಗಳಲ್ಲದೆ, 'ಪೊಗೞೆ ಪೊಟ್ಟ' ಎಂಬಲ್ಲಿ, ನಾವು ಈ ಮೇಲೆ ಪೊಡ್ದಾರಾಧಣದಲ್ಲಿ ಕಂಡಿರುವ (ಉದಾ: ಮುಚ್ಚಿಪಟ್ಟ=ಮುಚ್ಚಲ್ಪಟ್ಟ, ಪೇೞೆಪಟ್ಟ =ಪೇೞಲ್ಪಟ್ಟ), ಅರ್ಧ್ಯೆಕಾರ ಪ್ರಯುಕ್ತ 'ಪಡು' ಧಾತುವಿಂದಾದ, ಅಂದರೆ ಮೂಲ ಧಾತುವಿಗೆ ಅರ್ಧ್ಯೆಕಾರ ಉಳ್ಳ, ಕರ್ಮಣಿ ಪ್ರಯೋಗದ ದೃಷ್ಟಾಂತವೂ ಇದೆ.

ಯಾವೊಂದು ಭಾಷೆಗೆ ನುಡಿತವಿದ್ದರೆ ಮಾತ್ರ ಸಾಲದು, ಅದರಲ್ಲಿ ಶಾನೆ ಪ್ರೌಢವಲ್ಲದಿದ್ದರೆ ಸಾಕಷ್ಟು ಯೋಗ್ಯವೂ ವಿಸ್ತೃತವೂ ಆದ ಸಾಹಿತ್ಯವಿಲ್ಲದ ಮುಂಚೆ ಅದು ವ್ಯಾಕರಣಬದ್ಧವಾಗದು, ನೇರಾದ ಭಾವಪ್ರಕಾಶನಕ್ಕೆ ಸಲ್ಲದು, ಅಂಥಾ ಸಾಹಿತ್ಯವೂ ವ್ಯಾಕರಣವೂ ಇಲ್ಲದ ಭಾಷೆ ಶಾಸನಗಳಲ್ಲಿ ಬಳಸಲ್ಪಡದು ಎಂಬುದನ್ನೂ ಈ ಶಾಸನಗಳಲ್ಲಿ ಕಾಣಬರುವ ಯಾವ ಕೆಲಕೆಲವು ತಪ್ಪುಗಳಿವೆಯೊ ಅವು ಆ ಶಾಸನಗಳನ್ನು ಕೆತ್ತಿದಾತನಿಂದ ಆದುವಲ್ಲದೆ ಬಹುಶಃ ಒಕ್ಕಣಿಸಿದಾತನಿಂದಲ್ಲ, ಅಥವಾ ಅವರಲ್ಲಿ ಯಾವಾತನಿಂದ ಆದರೂ ಅವುಗಳಿಂದ ಆತನಿಗೆ ತನ್ನಂದಿನ ಭಾಷೆಯಲ್ಲಿ ಅಷ್ಟರ ಪ್ರೌಢಿ ಇದ್ದಿಲ್ಲವೆನ್ನಬೇಕಲ್ಲದೆ, ಆಗಣ ಭಾಷೆಯನ್ನೇ ಗ್ರಾಮ್ಯವೆನ್ನಲಾಗದು ಎಂಬುದನ್ನೂ ಒಪ್ಪಿದರೆ, ಹಾಗೆಯೇ ಈ ಶಾಸನಗಳಲ್ಲಿಯು ಮಿಕ್ಕವಲ್ಲಿ ಹೇಗೂ ಅನೇಕ ಸಂಸ್ಕೃತ ಶಬ್ದಗಳಿವೆಯಷ್ಟೇ, ಇವಲ್ಲಿ ಕೊನೆಯ ಹಾಗೂ ಮಿಕ್ಕವಕ್ಕಿಂತ ಹಳೆಯದಾದ ಕ್ರಿ. ಶ. 3 ನೆಯ ಶತಕದ ಹಲ್ಮಿಡಿಯ ಶಾಸನದಲ್ಲಿಯೂ ಸಂಸ್ಕೃತ ಶಬ್ದಗಳಿವೆ ಎಂಬುದನ್ನೂ ಮನವರಿಸಿದರೆ, ಅವು ಆ ತಕ್ಕ ಸಾಹಿತ್ಯವೂ ಇದ್ದಿಲ್ಲದ ಭಾಷೆಯಲ್ಲಿ ಸರ್ವಥಾ ಈ ಪ್ರಮಾಣದಿಂದ ಸೇರಿರವು ಎಂದೂ ಹತ್ತು ಮಂದಿಯ ಓದಿಕೆಯ ಹಾಗೂ ತಿಳುವಳಿಕೆಯ ಬಗ್ಗೆ ಎಂದೇ ಕೊರೆದಿಟ್ಟ ಈ ಶಾಸನಗಳಲ್ಲಿ ಹೀಗಾದರೆ ಆಗಣ ಸಮಸಾಮಯಿಕವಾದ ಸಾಹಿತ್ಯದಲ್ಲಿ ಈ ಪ್ರಮಾಣವು ಇನ್ನೂ ಹಿಗ್ಗಿರಬೇಕು ಎಂದೂ ಸ್ವಯಂವ್ಯಕ್ತವಾಗುವುದರಿಂದ, ಹಲ್ಮಿಡಿಯ ಶಿಲಾಲೇಖವ ಕ್ರಿ. ಶ. 3ನೆಯ ಶತಕಕ್ಕೆ ಸಾಕಷ್ಟು ಹಿಂದಿನಿಂದಲೆ ಕನ್ನಡದಲ್ಲಿ ಸಂಸ್ಕೃತ ಮಿಶ್ರವಾದ (ಅತಏವ ಸಂಸ್ಕೃತ ಛಂದೋಬದ್ಧವೂ ಆದ) ಕನ್ನಡ ಸಾಹಿತ್ಯವು ಇದ್ದಿರಬೇಕು.



# ತಿದ್ದುಪಡಿ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೫ | ೧೨ | ಇಕ್ಷಾಕು | ಇಕ್ಷ್ವಾಕು |
| ೬ | ೧ | ಇಬ್ಬಿರು | ಇಬ್ಬರು |
| ೮ | ೨೧ | ವೈದಿಕರ | ವೈದಿಕ |
| | ೨೩ | ಶ್ರಿ | ಶ್ರೀ |
| | ೨೬ | ಕೃತವೀರ್ಯಾತ್ಮಜೋ । ಬಲೀ । | ಕೃತವೀರ್ಯಾತ್ಮಜೋ ಬಲೀ । |
| ೧೦ | ೧೭ | ಸೂಱ್ಪರೆಗಂ | ಸೂಱ್ಸರೆಗಂ |
| ೧೩ | | ರನನ್ನ | ರನ್ನನ |
| | ೧೮ | ಧರ್ಮಿಯ | ಧರ್ಮೀಯ |
| ೧೭ | ೧–೨ | ದಲಾದೋಪಾದ್ಯ | ದಲಾದ್ಯೋಪಾದ್ಯ |
| | ೯ | ಈಗ | ಈ |
| ೨೧ | ೨೬ | ಕಡಿಮೆಯಿಲ್ಲದ | ಕಡಿಮೆಯಲ್ಲದ |
| ೨೮ | ೧೯ | ಗ್ರಂಥಿಸಲಾಗದ | ಗ್ರಥಿಸಲಾಗದ |
| ೪೪ | ೭ | ಶಿಖರಣಿ | ಶಿಖರಿಣಿ |
| ೪೭ | ೩ | ತಾನು ಮಂಡಳಿಕನೆಂದಿಲ್ಲದ, | ತಾನು ಆ ತೈಲಪನ ಮಂಡಳಿಕನೆಂದಿಲ್ಲದ, |
| ೪೮ | ೨೭ | ಭಾಗವನ್ನಾದರೂ ಗೆದ್ದಿಲ್ಲವೆಂದು | ಭಾಗವನ್ನಾದರೂ ತೈಲಪನು ಗೆದ್ದಿಲ್ಲವೆಂದು |
| ೪೯ | ೧೦ | ಅಪರಾದಿತ್ಯನೂ | ಅಪರಾದಿತ್ಯನು |
| ೫೨ | ೨೪ | ಇಲ್ಲವೆ ರನ್ನನು | ಇಲ್ಲವೆ ಆ ಬಳಿಕ ರನ್ನನು |
| ೫೩ | ೨೩ | ಚಕ್ರವರ್ತಿಯಾದರೂ | ಚಕ್ರವರ್ತಿಯಾದರೊ |
| ೫೪ | ೩ | ನೆಗಬಿ | ನೆಗಬ್ದಿ |
| ೫೫ | ೨೦ | ಪೂರ್ವಾಹ್ಲೇ | ಪೂರ್ವಾಹ್ನೇ |
| ೫೭ | ೪ | ಆಶ್ವಾಸನದ | ಆಶ್ವಾಸದ |
| | ೬–೭ | ತೂತುಬಿದ್ದೊ ಗದಾಯುದ್ಧದ ಕಾಣವಾದರೊ | ತೂತುಬಿದ್ದೊ ಕಾಣವಾದರೂ |
| | ೭–೮ | ಈ ಪದ್ಯವೇ ಕೊನೆಯ | ಈ ಪದ್ಯವೇ ಗದಾಯುದ್ಧದ ಕೊನೆಯ |
| ೬೨ | ೨೪ | ಕಾ(?)ಪರಸನು | ಕಾವರಸನು |
| ೬೩ | ೧೯ | ಕುರಿತು | ಕುರಿತ |
| ೬೫ | ೧೯ | ಕ್ರಿ. ಶು. | ಕ್ರಿ. ಶ. |
| ೬೯ | ೧೦ | ಶಾ. ಶ. ೧೧೯೫ ನಂದನ | ಸೋಮಿದೇವನ ಆಳಿಕೆಯ ೬ನೆಯ ವರ್ಷದ ನಂದನ |
| | ೨೬ | ಶಾ. ಶ. ೧೧೯೨ | ಶಾ. ಶ. ೧೧೯೩ |

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೭೧ | ೧೧ | ಶುದ್ಧ 2 | ಶುದ್ಧ ೩ |
| | ೨೫ | ೨ SIE, App. E. | ೨ SIE, 1930, App. E. |
| | ೨೮ | ವರ್ಷವಾಗಲಾದುದರಿಂದಲೂ, | ವರ್ಷವಾಗಲಾರದುದರಿಂದಲೂ, |
| | ೨೯ | ಸಮೀಷ | ಸಮೀಪ |
| ೭೩ | ೧೯ | ೧ FKD, ಪು. 576. | ೧ FKD, ಪು. 572. |
| ೭೫ | ೨೧ | ಕ್ರಿ. ಶ. 1184 ಫೆಬ್ರವರಿ 13ರ | ಕ್ರಿ. ಶ. 1187 ಫೆಬ್ರವರಿ 9ರ |
| ೭೭ | ೨೪ | ಅಲ್ಲಿಯೇ ಹೇಳಿರುವ | ಅಲ್ಲಿಯೇ೩ ಹೇಳಿರುವ |
| | ೩೦ | | ೩. ಅದೇ. f.n. 1. |
| ೮೦ | ೨೭ | ಬಿಟ್ಟ | ಬಿಟ್ಟ |
| ೮೫ | ೨೪ | ಎಂದು | ಎಂದೂ |
| ೧೦೦ | ೪ | ಕಿರುಗಾಲದಲ್ಲಿ | ಕೆಲಗಾಲದಲ್ಲಿ |
| ೧೦೨ | ೩೦ | ಭಾಸಂಗಳುಱಿದ | ಭಾಸಂಗಳುಱುದ |
| ೧೦೪ | ೨೮ | ಸಯಲಾಬಲಯೆಲ್ಲವೆ | ಸಯಲಾಬಲವೆಲ್ಲವೆ |
| ೧೧೨ | ೧೯ | ಯೂವಾತ್ | ಯೂವತ್ |
| ೧೧೫ | ೨೩ | ಬಗೆಗುಡಡ | ಬಗೆಗುಡದ |
| | ೨೫ | (ಪು. ೧೯) | (ಪು. ೧೯೭) |
| ೧೧೮ | ೧೮ | ಇಱಿದ್ದ | ಇಱುದ್ದ |
| ೧೧೯ | ೩೧ | ಅಲ್ಲಿ (ಪು. 358 f.n. 1) | ಅಲ್ಲಿ ( ಪು. 358 f.n. 1 ) ಹೇಳಿದೆ. |
| ೧೨೧ | ೧೦ | ಆಯಿರವುಳ್, | ಆಯಿರವು, |
| ೧೩೧ | ೧೫ | ಸಲೆವುಗೆಕೊಟ್ಟ | ಸಲೆವುಗೆಯ ಕೊಟ್ಟ |
| ೧೩೩ | ೨೬ | ಪೂರ್ವಾರ್ಯುಂ | ಪೂರ್ವಾರ್ಯಾಂ |
| ೧೩೪ | ೮ | ಪು. 455 ) | ಸು. 455 ) |
| | ೧೫ | ಬಣ್ಣರ್ಗ್ಗ | ವಿಣ್ಣರ್ಗ್ಗ |
| | ೩೨ | III. ಪುಟ 1—36. | II. ಪುಟ 1—36. |
| ೧೩೫ | ೬ | ನಾಳನ ( ಱಿ ) | ನಾಳನ ( ಱು ) |
| | ೭ | ಪದಿರ್ಕಣ್ಣುಡೆಗ | ಪದಿರ್ಕ್ಕಣ್ಣುಗ |
| ೧೩೮ | ೧ | ಸಬ್ಬಜ್ಜದರ್ | ಸಬ್ಬಜ್ಜದರ್ |
| | ೩ | ವಿಟ್ಟರಕರ | ವಿಟ್ಟಾರಕರ |